


ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – 583276


2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ನೇಮಿಚಂದ್ರ ಅವರ ಪ್ರವಾಸ–ಕಥನಗಳು


ನಿಬಂಧಕಾರರು

ನೋಂದಣಿ ಸಂಖ್ಯೆ : KVTM/K 140901030094

ಕನ್ನಡ ಎಂ.ಫಿಲ್ ವಿದ್ಯಾರ್ಥಿ




2014–15





ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583276

**2014–15ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ**

# ನೇಮಿಚಂದ್ರ ಅವರ ಪ್ರವಾಸ–ಕಥನಗಳು

ಸಂಶೋಧಕರು- ವೈ.ಪಿ.ರಮ್ಯ.
ಮಾರ್ಗದರ್ಶಕರು- ನಾಗಶೇಶ.

**ನಿಬಂಧಕಾರರು**

ನೋಂದಣಿ ಸಂಖ್ಯೆ : KVTM/K 140901030094
ಕನ್ನಡ ಎಂ.ಫಿಲ್ ವಿದ್ಯಾರ್ಥಿ

**2014–15**

# ಪರಿವಿಡಿ

## ನೇಮಿಚಂದ್ರ ಅವರ ಪ್ರವಾಸ–ಕಥನಗಳು



* * * * *

# ಅಧ್ಯಾಯ – ೧

# ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ

ಮನುಷ್ಯನ ಮನಸ್ಸು ಅಂದಂದಿನ ವಿಷಯಗಳಲ್ಲಿ ತೃಪ್ತವಾಗದೆ ಹಿಂದೆ ಹೇಗಿತ್ತು, ಮುಂದೆ ಹೇಗಿರಬಹುದು ಎಂದು ತಿಳಿಯಲು ಆಶಿಸುತ್ತದೆ. ಮುಂದೆ ಹೇಗಿರಬಹುದೆಂಬುದು ಕೇವಲ ಊಹೆಯಲ್ಲಿಯೇ ಕೊನೆಗೊಳ್ಳುತ್ತದೆ. ಅದಕ್ಕೆ ಪ್ರಮಾಣದ ಅಥವಾ ಸಾಕ್ಷ್ಯದ ಆಧಾರವಿರುವುದಿಲ್ಲ. ಆದರೆ ಹಿಂದೆ ಹೇಗಿತ್ತೆಂಬುದನ್ನು ಬಹುಮಟ್ಟಿಗೆ ವಾಸ್ತವವಾಗಿ ಹೇಳಬಹುದು ; ಅದಕ್ಕೆ ಪ್ರಮಾಣದ ಅಥವಾ ಸಾಕ್ಷ್ಯದ ಆಧಾರವಿರುತ್ತದೆ.

ಅಂತಹ ಪ್ರಮಾಣಗಳನ್ನು, ಸಾಕ್ಷ್ಯಗಳನ್ನು ಒದಗಿಸಿಕೊಡುವುದರಲ್ಲಿ ಪ್ರವಾಸ ಸಾಹಿತ್ಯವೂ ಒಂದು. ಇತಿಹಾಸವನ್ನು ಬರೆಯುವುದಕ್ಕೆ ಪ್ರವಾಸಿಗಳ ಕಥನ ಮತ್ತು ಪ್ರಾಚ್ಯ ಸಂಶೋಧನೆ ಇವೆರಡು ಮುಖ್ಯ ಸಾಧನಗಳು. ಸರಿಯಾದ ಇತಿಹಾಸವೇ ಇಲ್ಲದ ಈ ಪ್ರಾಚೀನ ಭಾರತದಲ್ಲಿ ಹೊಸ ಇತಿಹಾಸವನ್ನು ಬರೆಯಲು ನಾವು ಪ್ರವಾಸ ಸಾಹಿತ್ಯಕ್ಕೆ ಹೆಚ್ಚು ಕೈಹಾಕಬೇಕಾಗಿದೆ. ಪ್ರವಾಸಿಗಳ ಸಾಹಿತ್ಯ ನಮಗಿಲ್ಲದೆ ಹೋಗಿದ್ದರೆ ನಮಗೆ ತಿಳಿದಿರುವ ಬಹುಮಟ್ಟಿನ ಚರಿತ್ರೆ ನಮಗೆ ತಿಳಿಯದೇ ಹೋಗುತ್ತಿತ್ತು.

ಡಾಕ್ಟರ್ ಅರ್ನಾಲ್ಡರು ಹೇಳುವಂತೆ "ಇತಿಹಾಸದ ಮುಖ್ಯ ಉದ್ದೇಶ, ಸುಸಂಸ್ಕೃತ ಮಾನವನ ಜೀವನವನ್ನು ಅಂದರೆ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಸಂಸ್ಥೆಗಳ ಬದಲಾವಣೆಗಳನ್ನು ತೋರಿಸುವುದೇ ಆಗಿದೆ. ಅಂಥ ಜೀವನವನ್ನು ತೋರಿಸುವುದಕ್ಕೆ ಮುಖ್ಯ ಸಾಮಗ್ರಿ ಪ್ರವಾಸಿಗಳ ಸಾಹಿತ್ಯ".[೧] ಹಿಂದಿನ ಕಾಲದ ನಮ್ಮ ರಾಜಕೀಯ ನಡೆನುಡಿಗಳ, ಮತಧರ್ಮಗಳ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಪ್ರವಾಸಿಗಳ ಕಥನ ಅತ್ಯಂತ ಉಪಯೋಗವಾಗಿದೆ.

ಪ್ರವಾಸ ಸಾಹಿತ್ಯವು ಮಾನವನ ಪಂಚೇಂದ್ರಿಯಗಳಿಗೆ ಕ್ರಿಯಾಶೀಲತೆಯನ್ನು ಒದಗಿಸುವ, ಸರ್ವ ಸಮಸ್ಯೆಗಳಿಗೂ ಪರಿಹಾರ ಸೂಚಿಸುವ ಒಂದು ಸಂಜೀವಿನಿ. ನಮ್ಮ ಸುತ್ತಮುತ್ತಲಿನ ಪರಿಸರ, ಜನಸಮುದಾಯ, ಸಂಪ್ರದಾಯ, ಸಂಸ್ಕೃತಿ ಮತ್ತು ವಿಶೇಷ ಆಕರ್ಷಣೆಗಳ ಬಗ್ಗೆ ತಿಳಿಯುವುದು ಇಂದಿನ ಕುತೂಹಲದ ವಿಷಯವಾಗಿದೆ. ಮಾನವ ಯಾವಾಗಲೂ ಹೊಸತನಕ್ಕೆ, ಹೊಸ ವಿಷಯ ತಿಳಿಯುವುದಕ್ಕೆ ಹಾತೊರೆಯುತ್ತಾನೆ. ಹೊಸ ಸಂಶೋಧನೆಗಳ ಮೂಲಕ ಹೊಸ ವಿಷಯಗಳನ್ನು ಅರಿತು ಜ್ಞಾನಶಾಖೆಯನ್ನು ವಿಸ್ತರಿಸಿಕೊಳ್ಳುತ್ತಾ ಹೋಗುತ್ತಾನೆ.

ಉದ್ದೇಶವಿಲ್ಲದೆ ಪ್ರವಾಸ ಇರಲಾರದು. ಅರಿಯುವ, ಅರಿವಿನಿಂದ ಕುತೂಹಲವನ್ನು ತಣಿಸಿಕೊಳ್ಳುವ ನೆಲೆಯಿಂದ ನೋಡಬೇಕೆಂಬ ಮಹದಾಸೆಯಿಂದ, ಅನುಭವ ದೆಸೆಯಿಂದ,

ಹೀಗೆ ವಿಭಿನ್ನ ನೆಲೆಗಳಿಂದ ಪ್ರವಾಸ ಮಾಡಬಹುದಾದರೂ, ಪ್ರವಾಸ ಮಾಡಿದವರೆಲ್ಲ ತಮ್ಮ ಅನುಭವಗಳನ್ನು ಬರೆಯಬೇಕೆಂದಿಲ್ಲ ಮತ್ತು ಉತ್ಕಟತೆ ಮೂಡಿದಾಗ ಬರೆಯದಿರಲೂ ಆಗುವುದಿಲ್ಲ. ಪ್ರವಾಸಿಗನಿಗೆ ತನ್ನ ಬದುಕಿನಲ್ಲಿ ದಿನನಿತ್ಯದ ನೋಟಕ್ಕಿಂತ ಭಿನ್ನವಾದುದ್ದನ್ನು ಕಂಡಾಗ ಇನ್ನೊಬ್ಬರೊಂದಿಗೆ ಹಂಚಿಕೊಳ್ಳಬೇಕೆಂಬ ಮನೋತ್ಕಟತೆ ಮೂಡುವುದು ಸಹಜ. ಅದರ ಪ್ರತಿಫಲವೇ ಪ್ರವಾಸ ಕಥನವೆಂದು ಹೇಳಬಹುದು.

ಈ ಪ್ರವಾಸ ಸಾಹಿತ್ಯ ಇತಿಹಾಸದ ಎಲ್ಲೆಯನ್ನು ಮೀರಿ ನಿಂತ ಸಾಮರ್ಥ್ಯವುಳ್ಳದ್ದಾಗಿದೆ. ಇಲ್ಲಿ ಖಗೋಳ, ಭೂಗೋಳ, ಸಸ್ಯ, ಪ್ರಾಣಿ, ಖನಿಜ, ತಂತ್ರಜ್ಞಾನ, ವಿಜ್ಞಾನ, ನಂಬಿಕೆ, ಸಂಪ್ರದಾಯ, ಆಡಳಿತ, ಸೈನ್ಯಪದ್ಧತಿ, ವಾಣಿಜ್ಯ, ಭಾಷೆ, ಕಾಮ, ವೈಭವ, ಹಸಿವು – ಹೀಗೆ ಪ್ರವಾಸ ಸಾಹಿತ್ಯವು ಸರ್ವತೋಮುಖ ವಿಷಯಗಳ ಕಣಜಗಳಾಗಿವೆ, ಗುಡಾಣಗಳಾಗಿವೆ.

ಪ್ರವಾಸ ಸಾಹಿತ್ಯವನ್ನು ಘಟನಾ ಸ್ವರೂಪ, ವಿಡಂಬನಾ ಸ್ವರೂಪ, ಆತ್ಮಕಥನ ಸ್ವರೂಪ, ಕಾದಂಬರಿ ಸ್ವರೂಪವಾಗಿ ಬರೆದರೂ ಶೈಲಿಯಲ್ಲಿ ಭಿನ್ನತೆಯನ್ನು ಕಾಯ್ದುಕೊಂಡಿರುವುದು ಕಂಡುಬರುತ್ತದೆ. ಅಲ್ಲದೆ ಅದರ ಆರಂಭಿಕ ಶೈಲಿಯಲ್ಲಿ ವರದಿ ಮಾದರಿ, ದಿನಚರಿ ಮಾದರಿ ಮುಂತಾಗಿರುವುದು ಕಂಡುಬರುತ್ತದೆ. ಆಯಾ ಕಾಲದ ಬದುಕಿನ ಆಲೋಚನಾ ಕ್ರಮ ತಿಳಿವಳಿಕೆಗಳು ಬರಹದ ಶೈಲಿಯನ್ನು ನಿಯಂತ್ರಿಸುತ್ತವೆ ಎನ್ನುವುದಕ್ಕೆ ಈ ಕೃತಿಗಳು ನಿದರ್ಶನಗಳಾಗಿವೆ. ಈ ಕೃತಿಗಳು ಪ್ರಾದೇಶಿಕತೆಯ ಕುರಿತು ಅಧ್ಯಯನ ಮಾಡುವವರಿಗೆ ಮತ್ತು ಯಾವುದೇ ವಿಷಯವನ್ನು ಕುರಿತು ಸಂಶೋಧನೆ ನಡೆಸುವವರಿಗೆ ಮಹತ್ವದ ಆಕರ ಗ್ರಂಥಗಳಾಗಿ ಬಳಕೆಯಾಗುತ್ತದೆ.

ಪ್ರವಾಸ ಸಾಹಿತ್ಯದಿಂದ ಬೇರೆ ಬೇರೆ ದೇಶಗಳ ಸಂಸ್ಕೃತಿ ಪರಿಚಯ ಮಾಡಿಕೊಳ್ಳುವಾಗ ನಮಗೆ ಅಲ್ಲಿಯ ಇತಿಹಾಸ–ಭೂಗೋಳದ ಹಿನ್ನೆಲೆಗಳು ಅತಿ ಮಹತ್ವದ್ದಾಗಿ ಕಾಣುತ್ತವೆ. ಇವುಗಳನ್ನು ತಿಳಿದುಕೊಳ್ಳುವಾಗ ಅಲ್ಲಿಯ ಜನರ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ಮುಂತಾದವುಗಳ ಪರಿಸ್ಥಿತಿಯನ್ನು ಸ್ಪಷ್ಟವಾಗಿ ಕಾಣುತ್ತೇವೆ. ಅದರ ಅಭ್ಯಾಸದಿಂದ ಇವುಗಳೊಳಗಿನ ಮಾನವ ಸ್ವಭಾವಗಳು, ಚಲನವಲನಗಳು, ಅವರ ಇನ್ನಿತರ ಸಂಸ್ಕೃತಿ ವಿವರಗಳನ್ನು ತಿಳಿದುಕೊಳ್ಳುತ್ತೇವೆ.

ಉದಾಹರಣೆಗೆ: ಭೌತಿಕ–ಅಭೌತಿಕ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ದೇಶದ ಸ್ಥಿತಿಗತಿಗಳು, ಗ್ರಾಮಪಟ್ಟಣಗಳು, ಅಲ್ಪಸಂಖ್ಯಾತರು, ಆದಿವಾಸಿಗಳು, ಯುದ್ಧದಾಳಿಗಳು, ಮಹಾನ್ ವ್ಯಕ್ತಿಗಳು, ಚುನಾವಣೆ, ಜನಗಣತಿ, ನಿರಾಶ್ರಿತರು, ವಲಸೆಗಾರರು, ರಾಷ್ಟ್ರದ ಘನತೆ ಗಾಂಭೀರ್ಯ, ಸಾಹಿತ್ಯ, ಸಾಹಿತಿಗಳು, ಭಾಷೆ, ಸಂಗೀತ, ನೃತ್ಯ, ಚಿತ್ರ, ಕರಕುಶಲ ಕಲೆಗಳು, ಚಲನಚಿತ್ರ, ರಂಗಮಂದಿರ, ಕಲಾಕಾರರು, ವಾಸ್ತುಶಿಲ್ಪ, ವಸ್ತುಸಂಗ್ರಹಾಲಯ ಉದ್ದಿಮೆಗಳು, ಕಾರ್ಖಾನೆ,

ಹೋಟೆಲುಗಳು, ಮಾರುಕಟ್ಟೆ ಯೋಜನೆಗಳು, ನ್ಯಾಯಾಂಗ, ಕಾನೂನು, ವಿಜ್ಞಾನ ತಂತ್ರಜ್ಞಾನ ಮುಂತಾದವುಗಳನ್ನು ಗುರುತಿಸಿಕೊಳ್ಳುತ್ತೇವೆ.

ಪ್ರವಾಸ ಸಾಹಿತ್ಯದ ಸಂಸ್ಕೃತಿ ಅಧ್ಯಯನದಿಂದ ವೈವಿಧ್ಯಮಯ ಬದುಕಿನ ಸಂಸ್ಕೃತಿಗಳನ್ನು ಆಸಕ್ತಿಯಿಂದ ಓದಲು, ಕೇಳಲು, ಪರಿಚಯಿಸಿಕೊಳ್ಳಲು, ಅಲ್ಲಲ್ಲಿ ನಮ್ಮ ಸಂಸ್ಕೃತಿಗಳೊಂದಿಗೆ ಸಮಕಾಲೀನದಲ್ಲಿ ಚರ್ಚಿಸಿಕೊಳ್ಳಲು ಸಹಾಯವಾಗುತ್ತದೆ. ಈ ಎಲ್ಲಾ ಅನುಭವಗಳಿಂದ ಪ್ರವಾಸ ಸಾಹಿತಿಗಳ ಮತ್ತು ಓದುಗರ ಭಾವ ಪ್ರಪಂಚ ಶ್ರೀಮಂತವಾಗುತ್ತದೆ.

ಪ್ರತಿಯೊಬ್ಬ ಮನುಷ್ಯನಲ್ಲೂ ಸಂಕುಚಿತ ಮನೋಭಾವ ಮನೆ ಮಾಡಿದ್ದು, ಈ ಪ್ರವಾಸ ಕಥನಗಳು ಆ ಸಂಕುಚಿತತೆಯನ್ನು ಕಳೆಯುವ ಹಾಗೂ ಕತ್ತಲನ್ನು ಹೋಗಲಾಡಿಸುವ 'ವಿಶ್ವಜ್ಞಾನ ದೀವಿಗೆ'ಗಳಾಗಿ ಕಾರ್ಯನಿರ್ವಹಿಸುತ್ತವೆ. ಹೀಗೆ ಮನುಷ್ಯರ ಬದುಕಿನಲ್ಲಿ ಪ್ರಮುಖ ಪಾತ್ರವಹಿಸಿರುವ ಪ್ರವಾಸ ಸಾಹಿತ್ಯಕ್ಕೆ ಸಂಬಂಧಪಟ್ಟ ವಿಷಯವನ್ನು ಪ್ರಸ್ತುತ ಸಂಶೋಧನ ಅಧ್ಯಯನಕ್ಕೆ ಆಯ್ಕೆ ಮಾಡಲಾಗಿದೆ. ಈ ಮುಖೇನ ದೇಶ-ವಿದೇಶಗಳ ಭಿನ್ನ ವಿಭಿನ್ನ ಸಂಸ್ಕೃತಿಯನ್ನು ತಿಳಿಯಲು ಮತ್ತು ತಿಳಿಸಲು ಪ್ರಯತ್ನಿಸಲಾಗಿದೆ.

ಅದರಂತೆ **'ನೇಮಿಚಂದ್ರ ಅವರ ಪ್ರವಾಸ-ಕಥನಗಳು'** ಎಂಬುದು ಇಲ್ಲಿನ ಸಂಶೋಧನ ಪ್ರಬಂಧದ ವಿಷಯವಾಗಿದೆ. ಈ ಪ್ರಬಂಧದ ಇತಿಮಿತಿಯ ಅರಿವಿನಲ್ಲಿ ವಿಶ್ವ ಸಂಸ್ಕೃತಿಗಳ, ಬದುಕಿನ ವಿಧಾನಗಳ ಅಧ್ಯಯನ ಹಿನ್ನೆಲೆಯಲ್ಲಿ ನೇಮಿಚಂದ್ರ ಅವರ ಪ್ರವಾಸ-ಕಥನಗಳನ್ನು ಆಯ್ದುಕೊಳ್ಳಲಾಗಿದೆ. ಇವರ ಕೃತಿಗಳು ಮಹಿಳಾ ಪ್ರವಾಸ ಕಥನಗಳಲ್ಲಿ ಅತ್ಯಮೂಲ್ಯ ಕೃತಿಗಳಾಗಿವೆ.

### ಮಹಿಳಾ ಪ್ರವಾಸಕಥನದ ಆಯ್ಕೆಯ ಹಿನ್ನೆಲೆ

ಪುರುಷರು ಪ್ರವಾಸ ಮಾಡಿ ಪ್ರವಾಸ ಕೃತಿಗಳನ್ನು ರಚಿಸುತ್ತಾರೆ ಎಂಬುದರಲ್ಲಿ ಯಾವುದೇ ಆಶ್ಚರ್ಯವಿಲ್ಲ. ಆದರೆ ಸ್ತ್ರೀಯರು ದೇಶ, ವಿದೇಶಗಳಿಗೆ ಪ್ರವಾಸ ಕೈಗೊಂಡು ಪ್ರವಾಸ ಸಾಹಿತ್ಯಗಳನ್ನು ರಚಿಸಿದ್ದಾರೆ ಎಂಬುದು ನಿಜಕ್ಕೂ ಆಶ್ಚರ್ಯಕರ ಸಂಗತಿಯೆನಿಸುತ್ತದೆ. ಏಕೆಂದರೆ, "ಗಂಡಸು ಕೂತು ಕೆಟ್ಟ ಹೆಂಗಸು ಸುತ್ತಿ ಕೆಟ್ಟಳು"[೨] ಎಂಬಂತಹ ಗಾದೆಗಳನ್ನು ರೂಪಿಸಿಕೊಂಡ ನಮ್ಮ ಜನರು ಹೆಣ್ಣು ಮನೆಯಿಂದ ಹೊರಗೆ ಹೋಗಬಾರದು, ವಿದ್ಯೆ ಕಲಿಯಬಾರದು, ಯಾವುದೇ ವಿಷಯದಲ್ಲಿ ಗಂಡಸಿಗೆ ಸಮಾನಳಾಗಿ ನಿಲ್ಲಬಾರದು ಎಂಬೆಲ್ಲ ಕಟ್ಟುಪಾಡುಗಳನ್ನು ಬೇಲಿಯಂತೆ ಹೆಣ್ಣಿನ ಸುತ್ತ ಹಾಕಿ, ಈ ಬೇಲಿಯನ್ನು ದಾಟಿದವರಿಗೆ ಮಾತುಗಳೆಂಬ ಮುಳ್ಳುಗಳಿಂದ, ತೀಕ್ಷ್ಣ ನೋಟದಿಂದ ಚುಚ್ಚುತ್ತಿದ್ದರು. ಈ ಕ್ರಿಯೆ ಹಿಂದಿನಿಂದಲೂ ನಡೆದು ಬಂದಿದ್ದು, ಆಧುನಿಕ ಜಗತ್ತಿನಲ್ಲೂ ಚಾಲ್ತಿಯಲ್ಲಿರುವುದು ಗಮನೀಯ. ಇಂತಹ ಸಂದರ್ಭದಲ್ಲೂ ಈ ಎಲ್ಲ ಕಟ್ಟುಪಾಡುಗಳನ್ನು, ನೀತಿ ನಿಯಮಗಳನ್ನು ಮೀರಿ ದೇಶ, ವಿದೇಶಗಳಿಗೆ ಪ್ರವಾಸ ಕೈಗೊಂಡ ನಮ್ಮ ಅನೇಕ

ಮಹಿಳೆಯರು ದೊಡ್ಡ ಸಾಧನೆಯನ್ನು ಆ ಮೂಲಕ ಭವ್ಯದರ್ಶನವನ್ನೂ ಕಟ್ಟಿಕೊಟ್ಟರು ಎಂದರೆ ತಪ್ಪಾಗಲಾರದು.

ಅಂದರೆ, ಒಬ್ಬ ಪುರುಷ ವಿದೇಶಕ್ಕೆ ಹೋಗಿದ್ದ ಎಂದರೆ ಅದು ಅಷ್ಟು ದೊಡ್ಡ ವಿಷಯವಾಗಿ ಕಾಣಿಸುವುದಿಲ್ಲ. ಆದರೆ ಒಬ್ಬ ಮಹಿಳೆ ವಿದೇಶಕ್ಕೆ ಪ್ರವಾಸ ಕೈಗೊಂಡು, ಅಲ್ಲಿನ ಸಂಸ್ಕೃತಿಯನ್ನು ಅಧ್ಯಯನ ಮಾಡಿ ಕೃತಿಯೊಂದನ್ನು ರಚಿಸಿದಳು ಎಂದರೆ ಅದು ದೊಡ್ಡ ವಿಷಯವಾಗಿಯೇ ಕಾಣಿಸುತ್ತದೆ. ಆದ್ದರಿಂದ ಇಲ್ಲಿ 'ಮಹಿಳಾ ಪ್ರವಾಸ ಕಥನ'ವನ್ನು ನನ್ನ ಸಂಶೋಧನ ವಿಷಯವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇಡೀ ಮಹಿಳಾ ಪ್ರವಾಸ ಕಥನವನ್ನು ಅಧ್ಯಯನ ಮಾಡಿದರೆ, ಅದು ಸಂಶೋಧನ ವ್ಯಾಪ್ತಿಯನ್ನು ಮೀರುವುದರಿಂದ, ಕನ್ನಡದ ವಿಶೇಷ ರಚನೆಗಳಾಗಿರುವ 'ನೇಮಿಚಂದ್ರ ಅವರ ಪ್ರವಾಸ-ಕಥನಗಳು' ಎಂಬ ಶೀರ್ಷಿಕೆಯೊಂದಿಗೆ ಮಹಿಳಾ ಪ್ರವಾಸ ಸಾಹಿತ್ಯವನ್ನು ಇವರ ಕೃತಿಯನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

ನೇಮಿಚಂದ್ರ ಪ್ರಬಂಧದ ಶೀರ್ಷಿಕೆಗೆ ಸಂಬಂಧಿಸಿದಂತೆ ಇಲ್ಲೇ ಹೇಳಿಬಿಡಬಹುದಾದ ವಿಚಾರವೊಂದಿದೆ. ಅದೇನೆಂದರೆ, ನೇಮಿಚಂದ್ರ ಅವರು ಪ್ರವಾಸ ಬರಹಗಳನ್ನು ಹಾಗೂ ಪ್ರವಾಸ ವಿನ್ಯಾಸದ ಕಥನಗಳನ್ನು ಅತ್ಯಪೂರ್ವವಾಗಿ ಬರೆದಿದ್ದಾರೆ. ಅವರ ಪ್ರವಾಸ ಬರಹಗಳಲ್ಲಿ ಕಥನಗುಣವೂ, ಕಥನ ಸಾಹಿತ್ಯದಲ್ಲಿ ಪ್ರವಾಸಿ ಅನುಭವವು ಮೇಳೈಸಿರುವಂತೆ ಮೂಡಿಬಂದಿವೆ. ಅವೆರಡನ್ನೂ ವಿಶ್ಲೇಷಿಸುವ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧಕ್ಕೆ **'ಪ್ರವಾಸ-ಕಥನ'** ಎಂಬ ಶೀರ್ಷಿಕೆಯನ್ನು ಪ್ರಜ್ಞಾಪೂರ್ವಕವಾಗಿ ಇಡಲಾಗಿದೆ.

**"ನೇಮಿಚಂದ್ರ ಅವರ ಪ್ರವಾಸ-ಕಥನಗಳು"** ಎಂಬ ಶೀರ್ಷಿಕೆಯ ಮೂಲಕ ಜಗತ್ತಿನ ಜನಜೀವನ ಮತ್ತು ಸಂಸ್ಕೃತಿಯ ವಿವಿಧ ಮುಖಗಳನ್ನು ನೋಡಲು ಪ್ರಯತ್ನಿಸಿದೆ. ಅಧ್ಯಯನದ ಅನುಕೂಲಕ್ಕೆಂದು ಇಲ್ಲಿ ಆರು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.

**ಅಧ್ಯಾಯ ಒಂದು: ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ**

ಮೊದಲನೆಯ ಅಧ್ಯಾಯ 'ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ'ವನ್ನು ಕುರಿತು ಹೇಳಲಾಗಿದೆ. ಇದರಲ್ಲಿ ಪ್ರವಾಸ ಸಾಹಿತ್ಯದ ಸ್ವರೂಪ, ಅದು ಒಳಗೊಳ್ಳುವ ಬಗ್ಗೆ, ಅದರ ಗುರಿ-ಉದ್ದೇಶಗಳನ್ನು ತಿಳಿಸುವ ಪ್ರಯತ್ನವಿದೆ. ಮಾನವನ ಜೀವನ ವಿಧಾನ, ಸಾಧನೆ-ಸಿದ್ಧಿಗಳು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ, ದೇಶದಿಂದ ದೇಶಕ್ಕೆ ನಾನಾ ಕಾರಣಗಳಿಂದಾಗಿ ವ್ಯತ್ಯಾಸವಾಗುವುದು ಸಹಜ. ನಿತ್ಯ ವಿಕಾಸಶೀಲವಾದ ಜ್ಞಾನ ಜಗತ್ತಿನಷ್ಟೇ ವಿಸ್ತಾರವಾದದ್ದು, ವೈವಿಧ್ಯಮಯವಾದದ್ದು. ಕೂಪಮಂಡೂಕದಂತಿರುವ ಮಾನವನ ಬದುಕು ಇಂದಿನ ಜಗತ್ತಿನಲ್ಲಿ ನಿಸ್ತೇಜವಾಗುತ್ತದೆ; ಸೊನ್ನೆಯಾಗುತ್ತದೆ. ಮಾನವನ ದೇಹಕ್ಕೆ ಇಂದ್ರಿಯಗಳೇ ಕಿಟಕಿಗಳು. ಅವನ್ನವನು ಯಾವಾಗಲೂ ತೆರೆದಿರಬೇಕು.

ಪ್ರವಾಸ ಹಾಗೂ ಗ್ರಂಥಗಳ ಅಧ್ಯಯನ – ಇವು ಜ್ಞಾನ ಸಂಪಾದನೆಯ ಮಾರ್ಗಗಳು. ಅಧ್ಯಯನಕ್ಕಿಂತಲೂ ಪ್ರವಾಸವು ಅಧಿಕವಾದುದು. ಮನರಂಜನೆ ಅಥವಾ ನಿರ್ದಿಷ್ಟ ಕಾರ್ಯ ಸಾಧನೆಯಷ್ಟೇ ಪ್ರವಾಸದ ಗುರಿಯಲ್ಲ. ತಾನು ನೋಡಿದ್ದನ್ನು, ಅನುಭವಿಸಿದ್ದನ್ನು ತನ್ನ ನೆರೆಹೊರೆಯವರೊಂದಿಗೆ, ತನ್ನ ಜನಕ್ಕೆ ಹಂಚಬೇಕಾದದ್ದು ಅವನ ಕರ್ತವ್ಯ. ಪ್ರವಾಸ ಸಾಹಿತ್ಯ ದೂರದರ್ಶನದ ಪೆಟ್ಟಿಗೆಯಂತೆ ಮನರಂಜನೆಯ ಮಾರ್ಗವೂ ಹೌದು, ಜ್ಞಾನದ ಮಾರ್ಗವೂ ಹೌದು; ಒಂದು ರೀತಿಯಲ್ಲಿ ಅದೊಂದು ದೂರಶಿಕ್ಷಣ ವ್ಯವಸ್ಥೆಯೂ ಹೌದು.

ಪ್ರವಾಸ ಸಾಹಿತ್ಯ ಇಂದು ಪ್ರಪಂಚದ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದ್ದು, ಕನ್ನಡದಲ್ಲಿಯೂ ಒಂದು ಸಾಹಿತ್ಯದ ಪ್ರಕಾರವಾಗಿ ರೂಪುಗೊಂಡಿರುವುದನ್ನು ಪ್ರಸ್ತುತ ಅಧ್ಯಾಯದಲ್ಲಿ ಸ್ಥೂಲನೋಟಗಳ ಮುಖಾಂತರ ಪರಿಚಯಾತ್ಮಕವಾಗಿ ವಿವರಿಸಲಾಗಿದೆ.

**ಅಧ್ಯಾಯ ಎರಡು: ಪ್ರವಾಸ ಮತ್ತು ಪ್ರವಾಸ ಸಾಹಿತ್ಯ**

ಎರಡನೆಯ ಅಧ್ಯಾಯ 'ಪ್ರವಾಸ ಮತ್ತು ಪ್ರವಾಸ ಸಾಹಿತ್ಯ'ವನ್ನು ಕುರಿತದ್ದಾಗಿದೆ. ಇದರಲ್ಲಿ ಮುಖ್ಯವಾಗಿ ಪ್ರವಾಸ ಎಂದರೇನು? ಪ್ರವಾಸ ಸಾಹಿತ್ಯ ಎಂದರೇನು? ಪ್ರವಾಸದ ಅರ್ಥ ಮತ್ತು ಪರಿಕಲ್ಪನೆ, ಪ್ರವಾಸ ಸಾಹಿತ್ಯದ ಸ್ವರೂಪ ಮತ್ತು ಲಕ್ಷಣಗಳು, ಪ್ರವಾಸ ಸಾಹಿತ್ಯದ ವಿಂಗಡಣೆ, ಪ್ರವಾಸ ಸಾಹಿತ್ಯದ ಮಹತ್ವ, ಪ್ರವಾಸ ಸಾಹಿತ್ಯ ಬೆಳೆದುಬಂದ ಬಗೆ – ಇವುಗಳ ಸ್ಥೂಲ ಪರಿಚಯವನ್ನು ಮಾಡಿಕೊಡಲಾಗಿದೆ.

ಒಬ್ಬ ವ್ಯಕ್ತಿ ತನ್ನ ಊರು ಬಿಟ್ಟು ಬೇರೆ ಊರಿಗೆ ಹೋಗಿ ಒಂದಿಷ್ಟು ದಿನಗಳು ಆ ಪ್ರದೇಶದಲ್ಲಿ ಸುತ್ತಾಡಿಕೊಂಡು ಬರುವುದನ್ನು ಪ್ರವಾಸ ಎನ್ನುತ್ತಾರೆ. ೧೯ನೆಯ ಶತಮಾನದ ಮೊದಲಿಗೆ ಇಂಗ್ಲಿಷ್ 'Tourist' ಪದವು ಪ್ರವಾಸ ಅಥವಾ ಪ್ರವಾಸಗಳನ್ನು ಮಾಡುವವನು, ಮೇಲಾಗಿ ಇದನ್ನು ಮನರಂಜನೆಗಾಗಿ ಮಾಡುವವನು ಅಥವಾ ಅನಂದಕ್ಕಾಗಿ ಕುತೂಹಲಕ್ಕಾಗಿ, ಸುಂದರ ದೃಶ್ಯಗಳಿಗಾಗಿ ಸಂಚರಿಸುವವನು ಎಂಬ ಅರ್ಥದಲ್ಲಿ ಬಳಕೆಗೊಂಡಿತು. "ಕಿವಿಗೊಡು ಓ ಪ್ರೇಕ್ಷಕ ರಸಿಕನೆ ಪ್ರವಾಸದ ಕರೆಗೆ"[೩] ಎಂಬುದಾಗಿ ತೀ.ನಂ.ಶ್ರೀ.ಯವರು "ನೆಂಟರು" ಪ್ರಬಂಧ ಸಂಕಲನದಲ್ಲಿ ಉಲ್ಲೇಖಿಸಿದ್ದಾರೆ.

ಪ್ರವಾಸ ಸಾಹಿತ್ಯದಿಂದ ಬೇರೆ ಬೇರೆ ದೇಶಗಳ ಸಂಸ್ಕೃತಿ ಪರಿಚಯ ಮಾಡಿಕೊಳ್ಳಬಹುದು. ಪ್ರವಾಸ ಸಾಹಿತ್ಯದ ಸಂಸ್ಕ್ರತಿ ಅಧ್ಯಯನದಿಂದ ವೈವಿಧ್ಯಮಯ ಬದುಕಿನ ಸಂಸ್ಕೃತಿಗಳನ್ನು ಆಸಕ್ತಿಯಿಂದ ಓದಲು, ಕೇಳಲು, ಪರಿಚಯಿಸಿಕೊಳ್ಳಲು, ಅಲ್ಲಲ್ಲಿ ನಮ್ಮ ಸಂಸ್ಕೃತಿಗಳೊಂದಿಗೆ ಸಮಕಾಲೀನದಲ್ಲಿ ಚರ್ಚಿಸಿಕೊಳ್ಳಲು ಸಹಾಯವಾಗುತ್ತದೆ. ಈ ಎಲ್ಲ ಅನುಭವಗಳಿಂದ ಪ್ರವಾಸ ಸಾಹಿತಿಗಳ ಮತ್ತು ಓದುಗರ ಭಾವಪ್ರಪಂಚ ಶ್ರೀಮಂತವಾಗುತ್ತದೆ.

ಪ್ರವಾಸ ಸಾಹಿತ್ಯ ಇಂಥದೇ ರೂಪದಲ್ಲಿ ಇರಬೇಕೆನ್ನುವ ನಿಯಮವೇನೂ ಇಲ್ಲ. ಅದು ಗದ್ಯದಲ್ಲಿ ಇರಬಹುದು. ಪದ್ಯದಲ್ಲಿ ಇರಬಹುದು. ಈ ಸಾಹಿತ್ಯ ಬಹುಮಟ್ಟಿಗೆ ಗದ್ಯರೂಪದಲ್ಲಿ ಇರುತ್ತದೆ. ಪ್ರವಾಸ ಸಾಹಿತ್ಯ ಸೃಜನಶೀಲ ಸಾಹಿತ್ಯ ಪ್ರಕಾರವಲ್ಲ. ಕಥೆ ಕಾದಂಬರಿಗಳಲ್ಲಿ ಕಾಣುವ ಕಲ್ಪನಾಶಕ್ತಿ ಪ್ರವಾಸ ಸಾಹಿತ್ಯದಲ್ಲಿ ಕಾಣಬರುವುದಿಲ್ಲ ಎಂದು ನಿಚ್ಚಳವಾಗಿ ಹೇಳಬಹುದು. ಆದರೆ ಇದ್ದದ್ದನ್ನು ರಸವತ್ತಾಗಿ ನಿರೂಪಿಸುವುದು ಒಂದು ಕಲೆ ಎಂದು ತಿಳಿದುಕೊಳ್ಳಬೇಕು.

ಈ ರೀತಿಯಾಗಿ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಅದರ ಬಗೆಗಿನ ಅಧ್ಯಯನಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಮೂರು: ನೇಮಿಚಂದ್ರ ಅವರ ಬದುಕು–ಬರಹ : ಪರಿಚಯ**

ಮೂರನೆಯ ಅಧ್ಯಾಯದಲ್ಲಿ ನೇಮಿಚಂದ್ರ ಅವರ ಬದುಕು–ಬರಹವನ್ನು ಸ್ಥೂಲವಾಗಿ ಪರಿಚಯಿಸಲಾಗಿದೆ. ಇವರ ಬಾಲ್ಯ, ವಿದ್ಯಾಭ್ಯಾಸ, ವೃತ್ತಿಜೀವನ, ಕೌಟುಂಬಿಕ ಬದುಕು, ಇವರ ವ್ಯಕ್ತಿತ್ವ, ಪ್ರವಾಸದ ಹಿನ್ನೆಲೆ ಸಾಹಿತ್ಯದಲ್ಲಿ ತೊಡಗಿಸಿಕೊಂಡಿರುವ ಬಗೆ ಅವರ ಸಾಹಿತ್ಯ ಕೃತಿಗಳ ಪರಿಚಯ ಇವುಗಳನ್ನು ಕುರಿತು ಅವಲೋಕಿಸಲಾಗಿದೆ.

ನೇಮಿಚಂದ್ರ ಅವರು ಬರಹದ ಮೂಲಕ ಆಧುನಿಕ ಹೆಣ್ಣು ಮಕ್ಕಳಿಗೆ ಸ್ಫೂರ್ತಿಯ ಸೆಲೆಯಾಗಿದ್ದಾರೆ. ಇವರೇ ಹೇಳುವಂತೆ "ನಾನು ಶಾಲೆ ಓದಿದ ಕಾಲದಲ್ಲಿ ನನ್ನೆದುರು ಸ್ಫೂರ್ತಿ ನೀಡುವಂತಹ ಮಹಿಳಾ ಮಾದರಿಗಳಿರಲಿಲ್ಲ. ಶಾಲೆಯಲ್ಲಿ ನಾನು ಓದಿದ ಯಾವ ಪುಸ್ತಕದಲ್ಲೂ ಮಹಿಳಾ ಸಾಧಕಿಯರ ಉಲ್ಲೇಖವಿರಲಿಲ್ಲ. ಮೂವತ್ತು ವರ್ಷಗಳಿಗೂ ಹಿಂದೆ, ಪಿ.ಯು.ಸಿ. ಮುಗಿಸಿ ಇಂಜಿನಿಯರಿಂಗ್ ರಂಗವನ್ನು ಪ್ರವೇಶಿಸುವಾಗ ನನ್ನಲ್ಲಿ ಸಾಕಷ್ಟು ಅಳುಕು ಆತಂಕವಿತ್ತು. ನನ್ನೆದುರು ಉದಾಹರಣೆಗಳಿರಲಿಲ್ಲ. ಅಳುಕುತ್ತಾ ಒಳಹೊಕ್ಕ ನಾನು ಮತ್ತು ನನ್ನ ಗೆಳತಿ ವಿಶ್ವವಿದ್ಯಾಲಯಕ್ಕೆ ರ‍್ಯಾಂಕ್ ಪಡೆದು ಹೊರಬಂದಾಗಲೇ ಅಲ್ಲಿ ಹೆಣ್ಣುಮಕ್ಕಳಿಗೆ ಅಸಾಧ್ಯವಾದದ್ದು ಏನೂ ಇಲ್ಲವೆಂದು ತಿಳಿದದ್ದು!"[೪] – ಎಂಬುದಾಗಿ 'ನಾನೇಕೆ ಬರೆಯುತ್ತೇನೆ' ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಇತಿಹಾಸದಲ್ಲಿ ಕಳೆದುಹೋದ ಮಹಿಳಾ ವಿಜ್ಞಾನಿಗಳನ್ನು, ವೈಮಾನಿಕರನ್ನು ಹೊರತೆಗೆದು ಸ್ತ್ರೀ ಪರಂಪರೆಯನ್ನು ಪರಿಚಯಿಸುವುದು ನೇಮಿಚಂದ್ರ ಅವರ ಅಧ್ಯಯನ ಮತ್ತು ಬರಹದ ವಸ್ತುವಾಯಿತು. ಹಾಗೆಯೇ ಇವರ ಬದುಕು ಮತ್ತು ಪಯಣ ಜೊತೆಜೊತೆಯಾಗಿ ಸಾಗಿದೆ. ಇವರ ಪ್ರವಾಸದಲ್ಲಿಯ ಜೀವನದರ್ಶನ ಅತ್ಯಮೂಲ್ಯವಾಗಿದೆ. ಆಗ ಅವರು ಕಂಡ ಜನರನ್ನು, ಜಗತ್ತನ್ನು ಪ್ರತಿಬಿಂಬಿಸುವ ಇವರ ಬರಹವನ್ನು ಮತ್ತು ಬದುಕನ್ನು ಕುರಿತ ವಿಶ್ಲೇಷಣೆಯ ಮುನ್ನೋಟವನ್ನು ಕಾಣುವ ಪ್ರಯತ್ನವನ್ನು ಪ್ರಾಮಾಣಿಕವಾಗಿ ಮಾಡಲಾಗಿದೆ.

**ಅಧ್ಯಾಯ ನಾಲ್ಕು : ನೇಮಿಚಂದ್ರ ಅವರ ಪ್ರವಾಸ ಸಾಹಿತ್ಯದ ಅಧ್ಯಯನ**

ಈ ಅಧ್ಯಾಯದಲ್ಲಿ ನೇಮಿಚಂದ್ರ ಪ್ರವಾಸ ಸಾಹಿತ್ಯದ ಬರಹಗಳನ್ನು ಕುರಿತು ಚರ್ಚಿಸಲಾಗಿದೆ. ಅಂತೆಯೇ ಮೇಲಿನ ಪ್ರವಾಸ ಸಾಹಿತ್ಯವು ಬಿಂಬಿಸುವ ವಿಷಯದ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.

ಅವರ ಮೊದಲನೆಯ ಪ್ರವಾಸ ಕಥನ 'ಒಂದು ಕನಸಿನ ಪಯಣ'. ಐರೋಪ್ಯ ರಾಷ್ಟ್ರಗಳಲ್ಲಿನ ಸಾಹಿತ್ಯಕ, ಸಾಂಸ್ಕೃತಿಕ, ವೈಜ್ಞಾನಿಕ ಹಾಗೂ ಚಿತ್ರಕಲಾರಂಗದ ಸಾಧಕ-ಸಾಧಕಿಯರ ಮೂಲಸ್ಥಳಗಳಿಗೆ, ಸ್ಮಾರಕ ಕೇಂದ್ರಗಳಿಗೆ ನೇಮಿಚಂದ್ರ ಅವರು ಹೇಮಲತಾ ಮಹಿಷಿಯವರೊಂದಿಗೆ ಮಾಡಿದ ಒಂದೂವರೆ ತಿಂಗಳ ಕಾಲದ ಅನುಭವಗಳ ದಾಖಲೆಯಾಗಿದೆ. ಆತ್ಮೀಯ ನಿರೂಪಣೆ, ಸೂಕ್ಷ್ಮ ಅವಲೋಕನ ಗುಣ, ಯಾವ ಎಡೆಗೆ ನಡೆದರೂ ಕೈಬಿಡದ ಮೂಲ ನೆಲದ ನೆನಮ, ಕಣ್ಣಿಗೆ ಕಟ್ಟಿದಂತೆ ಆಯಾ ತಾಣಗಳ ಸಾಮಾಜಿಕ-ಸಾಂಸ್ಕೃತಿಕ ವಿವರಗಳನ್ನು ದಾಖಲಿಸುವುದರಲ್ಲಿನ ನಿಪುಣತೆ – ಇವುಗಳಿಂದಾಗಿ ಈ ಪ್ರವಾಸ ಸಾಹಿತ್ಯ ಕೇವಲ ನೀರಸ ಅಂಕಿ-ಅಂಶಗಳ ದಾಖಲೆಯಾಗುವ ಬದಲಿಗೆ ಕಾವ್ಯಾತ್ಮಕ ಶೈಲಿಯ ಸಾಂಸ್ಕೃತಿಕ ಪಠ್ಯವಾಗಿ ಮೂಡಿಬಂದಿದೆ.

ಹಾಗೆಯೇ ಮತ್ತೊಂದು ಪ್ರವಾಸಕಥನ 'ಪೆರುವಿನ ಪವಿತ್ರ ಕಣಿವೆಯಲ್ಲಿ' ಪ್ರಾಚೀನ ನಾಗರಿಕತೆಯ ನಾಡು, ಕಡಿದಾದ ಬೆಟ್ಟದ ಸಾಲುಗಳು, ಆಳವಾದ ಕಣಿವೆಗಳು, ಅಭೇದ್ಯವಾದ ಅರಣ್ಯ ಪ್ರಕೃತಿ ವಿಶೇಷಗಳೊಂದಿಗೆ ಪ್ರಾಚೀನರು ರೂಢಿಸಿಕೊಂಡು ಬಂದ ಸಂಸ್ಕೃತಿ, ಅಂತರಿಕ್ಷದಿಂದ ಮಾತ್ರ ನೋಡಬಹುದಾದ ನಾಸ್ಕಾ ಗೆರೆಗಳು, ದೈತ್ಯ ಚಿತ್ರಗಳು ಪ್ರಾಚೀನ ಪೆರುವಿಗರ ಅದ್ಭುತ ಕಲ್ಪನಾಶಕ್ತಿಯನ್ನೂ ಜ್ಯಾಮಿತಿ ಜ್ಞಾನವನ್ನೂ ಅನಾವರಣಗೊಳಿಸುತ್ತದೆ. ಸಂತ ಕ್ಯಾರೋಲಿನಾ ಮನಸ್ಸಿನ ನಿಗೂಢತೆ, ಅಮೆಜಾನ್ ನದಿಯಲ್ಲಿ ತೇಲಿದ ಅನುಭವ – ಹೀಗೆ ನೂರಾರು ಸಂಗತಿಗಳನ್ನು ಒಳಗೊಂಡಿದೆ.

ಇದನ್ನು ಪ್ರಸ್ತುತ ಸಂಶೋಧನಾ ನಿಬಂಧದ ಮುಖ್ಯ ವಸ್ತುವಾಗಿ ತೆಗೆದುಕೊಂಡು ಈ ಕೃತಿಗಳನ್ನು ಅವಲೋಕನ ಮಾಡಿ ಇದರ ಆಶಯಗಳನ್ನು ಕುರಿತು ವಿಶ್ಲೇಷಿಸಿ ಪ್ರಬಂಧವನ್ನು ಮಂಡಿಸಲಾಗಿದೆ.

**ಅಧ್ಯಾಯ ಐದು : ನೇಮಿಚಂದ್ರ ಅವರ ಪ್ರವಾಸ ವಿನ್ಯಾಸದ ಕಥನಗಳ ಅಧ್ಯಯನ**

೧. ಯಾದ್ ವಶೇಮ್

೨. ಇಲ್ಲಿಯವರೆಗಿನ ನೇಮಿಚಂದ್ರರ ಕಥೆಗಳು

ಈ ಅಧ್ಯಯನದಲ್ಲಿ 'ನೇಮಿಚಂದ್ರ ಅವರ ಪ್ರವಾಸ ವಿನ್ಯಾಸದ ಕಥನಗಳ ಅಧ್ಯಯನ' ಮಾಡಲಾಗಿದೆ. ಇದರಲ್ಲಿ ಆನುಷಂಗಿಕ ಆಕರಗಳನ್ನಾಗಿ 'ಯಾದ್ ವಶೇಮ್' ಎಂಬ

ಕಾದಂಬರಿಯನ್ನು ಮತ್ತು 'ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು' ಎಂಬ ಕಥಾಸಂಕಲನವನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಆ ಮೂಲಕ ಈ ಕೃತಿಗಳನ್ನು ಕುರಿತು ತಾತ್ತ್ವಿಕವಾಗಿ ಚರ್ಚಿಸಲಾಗಿದೆ.

ಜರ್ಮನಿಯಲ್ಲಿ ೧೯೩೩ರಲ್ಲಿ ಅಧಿಕಾರಕ್ಕೆ ಬಂದ ಹಿಟ್ಲರ್ ಮೊದಲು ಆರಂಭಿಸಿದ್ದೇ ಯಹೂದಿ ಜನರ ಹತ್ಯಾಕಾಂಡ, ಜೊತೆಗೆ ಕಮ್ಯುನಿಸ್ಟರ ಹತ್ಯೆ, ಆರ್ಯ ರಕ್ತದ ಅಹಮಿಕೆಯನ್ನು ತುಂಬಿ ನಡೆಸಿದ ಆ ಹತ್ಯಾಕಾಂಡ ಜಗತ್ತನ್ನೇ ಬೆಚ್ಚಿಬೀಳಿಸಿತ್ತು. ವಿಜ್ಞಾನ, ತಂತ್ರಜ್ಞಾನಗಳನ್ನು ಉಪಯೋಗಿಸಿಕೊಂಡು ಮನುಷ್ಯರನ್ನು ಕೊಲೆಗೈದ ಆ ಇತಿಹಾಸ, ಅದರ ಹಿಂದಿರುವ ಜನಾಂಗೀಯ ದ್ವೇಷ–ಮನುಕುಲ ಎಷ್ಟು ಕ್ಷಮೆ ಕೇಳಿದರೂ ಕ್ಷಮಾರ್ಹವಲ್ಲದ್ದು, ಹಿಟ್ಲರನ ದಾಳಿಗೆ ಬಲಿಯಾಗಿ ಬದುಕನ್ನರಸಿ ತಪ್ಪಿಸಿಕೊಂಡು ಬಂದು ಬೆಂಗಳೂರು ಸೇರಿದ ತಂದೆ ಹಾಗೂ ಪುಟ್ಟ ಮಗಳ ಕಥೆ ಈ 'ಯಾದ್ ವಶೇಮ್' ಕಾದಂಬರಿಯ ಕೇಂದ್ರ ವಸ್ತುವಾಗಿದೆ.

ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೇಮಿಚಂದ್ರರವರ ಸಣ್ಣಕತೆಗಳು ಅತ್ಯಮೂಲ್ಯವಾದ ಕೊಡುಗೆಯನ್ನು ಕೊಟ್ಟಿದೆ. ಸಮಾಜದ ಪ್ರತಿಯೊಬ್ಬ ನಾಗರಿಕನು ಕಣ್ತೆರೆಯದ ಹೊರತು ಸಾಮಾಜಿಕ ಪಿಡುಗುಗಳು ಅಂತ್ಯ ಕಾಣುವುದಿಲ್ಲ. ಕಾನೂನಿನ ಚೌಕಟ್ಟನ್ನು ಎಷ್ಟೇ ವಿಸ್ತರಿಸಿದರೂ ಅದನ್ನು ಮೀರಿ ನಿಲ್ಲಬಲ್ಲ ಸಾಮರ್ಥ್ಯ ಇಂದಿನ ಜನತೆಯಲ್ಲಿ ಬಿಂಬಿತವಾಗುತ್ತಿದೆ. ದುಷ್ಟ ಪದ್ಧತಿಗಳ ಬುಡಕ್ಕೆ ಕೊಡಲಿ ಪೆಟ್ಟನ್ನು ಕೊಟ್ಟು – ದಿಟ್ಟ ಹೆಜ್ಜೆಯಿಡುವ ಸಾಹಸದಲ್ಲಿ ಸಮಾಜ ಟೊಂಕಕಟ್ಟಿ ನಿಲ್ಲುವಂತೆ ನೇಮಿಚಂದ್ರರವರ ಕತೆಗಳು ಪ್ರೇರೇಪಿಸುತ್ತವೆ.

ಈ ರೀತಿಯಲ್ಲಿ ಹಿಂದಿನ ಅಧ್ಯಾಯಕ್ಕೆ ಪೂರಕವಾಗಿ ನೇಮಿಚಂದ್ರ ಅವರ ಪ್ರವಾಸ ವಿನ್ಯಾಸದ ಕಥನವನ್ನು ವಿಭಿನ್ನ ದೃಷ್ಟಿಕೋನದಿಂದ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಆರು : ಸಮಾರೋಪ**

ಈ ಅಧ್ಯಾಯದಲ್ಲಿ ಕಳೆದುಹೋದ ಸಂಸ್ಕೃತಿಯನ್ನು ಪುರಾತನ ಪರಂಪರೆಯನ್ನು ಸಮಕಾಲೀನವಾಗಿ ಶೋಧಿಸುವ ನೇಮಿಚಂದ್ರ ಅವರ ಇತಿಹಾಸ ಪ್ರಜ್ಞೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಹೀಗೆ ಪ್ರವಾಸ ಕಥನಗಳ ವ್ಯಾಪ್ತಿಯನ್ನು ನಿರ್ದಿಷ್ಟಪಡಿಸಿಕೊಂಡು, ವಿವಿಧ ಅಧ್ಯಾಯಗಳಾಗಿ ಮಾಡಿಕೊಂಡು ಆಳವಾದ ಅಧ್ಯಯನ ಮಾಡಲಾಗಿದೆ. ಈ ಮೂಲಕ ಒಂದು ನಾಡನ್ನು ಮತ್ತು ಅವರ ಜೀವನ ಕ್ರಮವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಪ್ರಾಚೀನ ಸಂಸ್ಕೃತಿಯ ದೇಶವಾದ ಭಾರತಕ್ಕೂ ಮತ್ತು ಕೃತಿಯಲ್ಲಿರುವ ನಾಡಿನ ಸಂಸ್ಕೃತಿಯ ವ್ಯತ್ಯಾಸವನ್ನು ಅಥವಾ ಸಾಮ್ಯತೆಗಳನ್ನು ಸಾಂಸ್ಕೃತಿಕ ಜಾಗತೀಕರಣದ ಪ್ರತಿಪಾದನೆಯ ಹಿನ್ನೆಲೆಯಲ್ಲಿ ನೋಡಲಾಗಿದೆ.

ಒಟ್ಟಾರೆ, ಈವರೆಗಿನ ವಿವರಣೆಗಳು ಮುಂದಿನ ಶೋಧನೆಗೆ ರೂಪರೇಷೆಯನ್ನು ಒದಗಿಸುತ್ತಿದ್ದು, ಈ ತಳಹದಿಯನ್ನು ಆಧಾರವಾಗಿಟ್ಟುಕೊಂಡು ಪ್ರಬಂಧವನ್ನು ವೈಚಾರಿಕ ಚರ್ಚೆಗೆ ಒಳಗು ಮಾಡಲು ಪ್ರಯತ್ನಿಸಿದೆ.

## ಕೊನೆ ಟಿಪ್ಪಣಿಗಳು

೧. ಎಸ್.ವಿದ್ಯಾಶಂಕರ : ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ : ಸ್ನೇಹಾ ಪ್ರಕಾಶನ, ೧೯೯೧

೨. ಪಿ.ಕೆ. ರಾಜಶೇಖರ : ಭೂಮಿತೂಕದ ಮಾತು ; ೨೦೦೨, ಪು. ೨೨

೩. ಜಿ.ಗುಂಡಣ್ಣ : ಪ್ರವಾಸ ತೀರ್ಥದ ಮುನ್ನುಡಿ ; ೧೯೫೨–ಪು. ೧೯

೪. ನಾನೇಕೆ ಬರೆಯುತ್ತೇನೆ, ಪು. ೩

## ಅಧ್ಯಾಯ – ೨

# ಪ್ರವಾಸ ಮತ್ತು ಪ್ರವಾಸ ಸಾಹಿತ್ಯ

ಸ್ಥೂಲವಾಗಿ, ಒಂದು ಭಾಷೆಯಲ್ಲಿನ ಗ್ರಂಥಗಳ ಸಮೂಹವನ್ನು ಸಾಹಿತ್ಯವೆಂದು ಕರೆಯುತ್ತೇವೆ. ಇದು ಭಾಷಾಮಾಧ್ಯಮದ ಮೂಲಕ ಸೃಷ್ಟಿಯಾಗುವ ಕಲಾಕೃತಿ. ಸಾಹಿತ್ಯವೆಂಬುದು ಒಂದು ಕಾಲಘಟ್ಟದ, ಒಂದು ಜನಾಂಗದ, ಲೇಖಕರ ಬಳಗದ ಜೀವನಾನುಭವಗಳ ಸಾರವಾಗಿರುತ್ತದೆ. ಇಂತಹ ಸಾಹಿತ್ಯದ ಸಮಗ್ರ ದರ್ಶನವಾಗಬೇಕಾದರೆ ಅದರ ಎಲ್ಲ ಮಗ್ಗುಲಿನತ್ತ ಕ್ಷ–ಕಿರಣವನ್ನು ಬೀರಬೇಕು. ಕಾಲ, ಸಮಾಜ, ಅಭಿರುಚಿಯೊಂದಿಗೆ ಭಾಷೆ ಬದಲಾಗುವ ಹಾಗೆ ಸಾಹಿತ್ಯವೂ ಹಲವು ಪ್ರಕಾರಗಳೊಂದಿಗೆ ವಿಕಾಸವಾಗುತ್ತಿರುತ್ತದೆ. 'ಪ್ರವಾಸ ಸಾಹಿತ್ಯ'ವೂ ಸಾಹಿತ್ಯದ ಒಂದು ಅಪೂರ್ವ ಪ್ರಕಾರವಾಗಿದ್ದು, ಜೀವನಾನುಭವದ ದೃಷ್ಟಿಯಿಂದ ವಿಶಿಷ್ಟವಾದುದಾಗಿದೆ.

### ಪ್ರವಾಸದ ಅರ್ಥ ಮತ್ತು ಪರಿಕಲ್ಪನೆ

ಪ್ರವಾಸ ಸಾಹಿತ್ಯವನ್ನು ಆಂಗ್ಲ ಭಾಷೆಯಲ್ಲಿ 'ಟ್ರಾವೆಲೋಗ್' ಅಥವಾ 'ಟ್ರಾವೆಲ್ ಲಿಟರೇಚರ್' ಎನ್ನಲಾಗುತ್ತದೆ. 'Tourist' ಎಂಬ ಮೂಲಪದ ಕ್ರಿ.ಶ.೧೮೦೨ರಷ್ಟು ಹಳೆಯದು. ಅದು 'Tour' ಎಂಬ ಪದದಿಂದ ಬಂದಿದೆ. 'Tour' ಎಂದರೆ ಪಥ, ನಿರ್ದಿಷ್ಟ ಪ್ರಯಾಣ ಎಂದರ್ಥ. ಈ ಪದವು ಲ್ಯಾಟಿನ್‌ನ 'Tornus' ಎಂಬುದರಿಂದ ಬಂದಿದೆ. ಇದರ ಅರ್ಥ: ವೃತ್ತವೊಂದನ್ನು ವಿವರಿಸುವ ಸಾಮಗ್ರಿ ಅಥವಾ ಸುತ್ತುವವನ ಚಕ್ರ ಎಂದು.

* 19th Century Dictionaryಯು 'Tourist' ಪದಕ್ಕೆ "ಕುತೂಹಲದಿಂದ ಪ್ರೇರಿತವಾದ ವ್ಯಕ್ತಿಯೋರ್ವನು ಸುತ್ತಾಟದಿಂದ ಖುಷಿ ಹೊಂದಲು ಕೈಗೊಳ್ಳುವ ಪ್ರವಾಸ"[೧] ಎಂಬ ಅರ್ಥ ಮಾಡಿದೆ.

* ಆಕ್ಸ್‌ಫರ್ಡ್ ಶಬ್ದಕೋಶವು 'Tour' ಎಂದರೆ "A Journey made for pleasure during which several different towns, countries etc., are visited"[೨] ಎಂದು ತಿಳಿಸುತ್ತದೆ. ಅಂದರೆ ವಿವಿಧ ನಗರ, ದೇಶಗಳನ್ನು ಸಂದರ್ಶಿಸಿ ಮೋಜಿಗಾಗಿ ಮಾಡುವ ಪ್ರಯಾಣ.

- "A Travel' in the younger sort is a part of Education, in the elder a part of Experience"[೩] ಎಂದ ಆಂಗ್ಲ ಬರಹಗಾರ ಫ್ರಾನ್ಸಿಸ್ ಬೇಕನ್ ಪ್ರಕಾರ, ಪ್ರವಾಸ ಒಂದೊಂದು ಸಮಯ ಪ್ರಯಾಸವೆನಿಸಿದರೂ ವ್ಯಕ್ತಿ ವಿಕಾಸಕ್ಕೆ ಅಂದೊಂದು ಮಹತ್ತರವಾದ ಸಾಧನ.

- ಷೇಕ್ಸ್‌ಪಿಯರ್ ಮಹಾಕವಿಯ ನಾಟಕ 'ದಿ ಮರ್ಚೆಂಟ್ ಆಫ್ ವೆನಿಸ್'ನ ನಾಯಕಿ ಪೋರ್ಶಿಯ ಬೇರೊಂದು ಸಂದರ್ಭದಲ್ಲಿ ಹೇಳುವ ಹಾಗೆ ಪ್ರವಾಸದ ಅನುಭವ "Twice blessed it blesses him that gives and him that takes".[೪]

ಹೀಗೆ ಪ್ರವಾಸದಿಂದ, ಅದರ ಕಥನದಿಂದ ಪ್ರವಾಸಿಗೂ ಲಾಭ ; ಓದುಗರಿಗೂ ಲಾಭ. ಪ್ರವಾಸಿ ತಿರುಗಿ ಅರಿತರೆ ಓದುಗ ಕುಳಿತು ಅರಿಯುತ್ತಾನೆ. ಅರಿತಂತೆ ಬೆಳೆಯುತ್ತಾನೆ.

ಹೀಗೆ ಕ್ರಿ.ಶ.೧೮೦೦ರಲ್ಲಿಯೇ 'Tour' ಮತ್ತು 'Tourist' ಪದಗಳು ನಿತ್ಯ ಬಳಕೆಯ ಪದಗಳಾಗಿ ಬೆಳವಣಿಗೆ ಹೊಂದಿದ್ದವು. ಪ್ರಯಾಣದ ಆನಂದ ಮತ್ತು ಇತರರಿಗೆ ತನ್ನ ಪ್ರಯಾಣಗಳ ಕುರಿತು ತಿಳಿಸುವ ಆಸೆಯಿಂದ ಪ್ರಯಾಣ ಕೈಗೊಳ್ಳುವವನು 'ಪ್ರವಾಸಿಗ' ಎಂದೇ ಹೇಳಲಾಗಿದೆ. ಈಗದು ಒಟ್ಟಾರೆಯಾಗಿ ಜೀವನದ ಬಹುಮುಖವನ್ನು ದರ್ಶಿಸಲು ಕೈಗೊಳ್ಳುವ ಪಯಣವಾಗಿದೆ.

ಒಬ್ಬ ವ್ಯಕ್ತಿ ತನ್ನದಾದಂತಹ ಒಂದು ನೆಲೆಯನ್ನು ಬಿಟ್ಟು ತನ್ನದಲ್ಲದಂತಹ ಇನ್ನೊಂದು ನೆಲಕ್ಕೆ ತಲುಪಿ, ಅಲ್ಲಿನ ಪ್ರದೇಶವನ್ನು ಸುತ್ತಿ ಬಂದು, ಆ ಹೊಸ ಜಾಗದಲ್ಲಿ ಆದಂತಹ ಅನುಭವಗಳನ್ನು ವಿಶ್ಲೇಷಿಸುವ, ಅಲ್ಲಿ ನೋಡಿದ ಪ್ರೇಕ್ಷಣೀಯ ಸ್ಥಳಗಳನ್ನು ವರ್ಣಿಸುವ ಅಲ್ಲಿನ ಜನರ ರೀತಿ–ನೀತಿ, ಜೀವನ ವಿಧಾನಗಳನ್ನು ವಿವರಿಸುವ ಬರಹದ ದಾಖಲೆಯನ್ನು ಸ್ಥೂಲವಾಗಿ 'ಪ್ರವಾಸ ಸಾಹಿತ್ಯ'ವೆಂದು ಕರೆಯಬಹುದು. ಪ್ರವಾಸಕ್ಕೆ ಸಂಬಂಧಿಸಿದ ಕುವೆಂಪು ಅವರ ಪದ್ಯವೊಂದನ್ನು ಇಲ್ಲಿ ಉದಾಹರಿಸಬಹುದು.

*ಕಣ್ ಮುಚ್ಚಿ ನಡೆಯದಿರು*
*ಹೃದಯವನು ಕಡಿಯದಿರು*

*ಕಾಶಿಯಲ್ಲಿ ನೀನರಿವೆ ಯಾತ್ರೆಯೇ ತೀರ್ಥಕಿಂ ಶ್ರೇಷ್ಠವೆಂದು*

*ಯಾತ್ರೆಗಾಗಿಯೆ ಕ್ಷೇತ್ರ*
*ಇದು ಸತ್ಯ ತಮ ಸೂತ್ರ*

*ಸಾಧಕಗೆ ತಿಳಿಯುವುದು ತುದಿಯಲ್ಲಿ ಸಾಧನೆಯೆ ಸಿದ್ಧಿ ಎಂದು!*

*ಅದರಿಂದೆ ದಾರಿಯೆಡೆ*
*ಚೆಲುವಿರಲು ನೋಡಿ ನಡೆ*

*ಗಾನವಿರೆ ಆಲೈಸು, ಕಲೆಯಿರಲು ಓಲೈಸು ಸಡ್ಡೆಯಿಂದೆ*

*ಮೂಡೆ ನೇಸರು ನೋಡು*

*ನಾಡ ಬಣ್ಣಿಸಿ ಹಾಡು*

*ಹಾಡಿ ಮುದುವನು ಹೀರಿ, ಜನಕೆ ಹರುಷವ ಬೀರಿ ತೇಲು ಮುಂದೆ!*[೫]

ಜ್ಞಾನಾರ್ಜನೆಗಾಗಿ, ಅನುಭವ ಸಂಪತ್ತಿಗಾಗಿ 'ನಮ್ಮಲ್ಲಿ ದೇಶ ಸುತ್ತಿ ನೋಡು, ಕೋಶ ಓದಿನೋಡು' ಎಂಬ ಅನುಭಾವಿಕರ ಮಾತೊಂದಿದೆ. ಆದರೆ ಒಮ್ಮೊಮ್ಮೆ ಈ ದೇಶ ಸುತ್ತುವುದು ಅಥವಾ ಪ್ರವಾಸ ಮಾಡುವುದು ಪ್ರಯಾಸವೆನಿಸಿದರೂ, ವ್ಯಕ್ತಿವಿಕಾಸಕ್ಕೆ ಅದೊಂದು ಮಹತ್ತರವಾದ ಸಾಧನ. ಆಗ ಪ್ರವಾಸವು ಕಲಿಕೆಯಾಗುತ್ತದೆ; ಅರಿವಿನ ಪಯಣವಾಗುತ್ತದೆ ; ಕನ್ನಡಿಯ ನೋಟವಾಗುತ್ತದೆ ; ಚಿಂತನೆಯಾಗುತ್ತದೆ.

ವಾಸ್ತವದಲ್ಲಿ ಪ್ರವಾಸವು ಅನ್ಯಲೋಕವನ್ನು ತೋರುವ ಜೊತೆಜೊತೆಯಲ್ಲೆ, ಸಂವೇದನಶೀಲ ಪ್ರವಾಸಿಗರಿಗೆ ತಮ್ಮನ್ನು ತಾವೇ ನೋಡಿಕೊಳ್ಳುವುದಕ್ಕೂ ಕಾರಣವಾಗುತ್ತದೆ. ಈ ಪ್ರಕ್ರಿಯೆ ಮುಂದುವರೆದು, ಒಂದು ಸಂಸ್ಕೃತಿ ಇನ್ನೊಂದು ಸಂಸ್ಕೃತಿಯ ಕನ್ನಡಿಯಲ್ಲಿ ತನ್ನ ತಾನು ನೋಡಿಕೊಳ್ಳುವ ಕ್ರಿಯೆ ಕೂಡ ಆಗಬಲ್ಲದು. ಇನ್ನೊಂದರ ಜೊತೆಯಲ್ಲಿಟ್ಟು ನಮ್ಮನ್ನು ನಾವು ನೋಡಿಕೊಳ್ಳುವಾಗ ಹುಟ್ಟುವ ಸ್ವಮೌಲ್ಯಮಾಪನವು ಪ್ರವಾಸ ಕಥನಗಳಲ್ಲಿ ಅತ್ಯಂತ ಮಹತ್ವದ ಸಾಂಸ್ಕೃತಿಕ ಸಂಗತಿಯಾಗಿದೆ.

ಕೆ.ಪಿ.ಎಸ್. ಮೆನನ್ 'ವಿಶ್ವಪರ್ಯಟನೆ' ಎಂಬ ಗ್ರಂಥದ ಮುನ್ನುಡಿಯಲ್ಲಿ "ಪ್ರವಾಸ ಮಾಡುವುದು ಒಳ್ಳೆಯದು. ಹಾಗೆ ಪ್ರವಾಸ ಮಾಡಲಾರದೆ ಹೋದಾಗ ಪ್ರವಾಸದ ಬಗೆಗೆ ಬಂದಿರುವ ಸಾಹಿತ್ಯವನ್ನಾದರೂ ಓದುವುದು ಉತ್ತಮ ಹವ್ಯಾಸ"[೬] ಎಂದು ಪ್ರವಾಸ ಮತ್ತು ಪ್ರವಾಸ ಸಾಹಿತ್ಯಕ್ಕಿರುವ ಸಂಬಂಧವನ್ನು ವ್ಯಾಖ್ಯಾನಿಸುತ್ತಾರೆ.

- ವಿ.ಕೃ.ಗೋಕಾಕ್ ಅವರು, "ಪ್ರವಾಸ ಮತ್ತು ಪ್ರವಾಸ ಸಾಹಿತ್ಯಗಳು ನನ್ನ ಬದುಕಿನಲ್ಲಿ ವಿಶೇಷ ಸ್ಥಾನವನ್ನು ಪಡೆದಿದೆ...ಬದುಕಿನ ಆಳ, ವೈಶಾಲ್ಯ ಹಾಗೂ ಉದ್ದಳತೆಯನ್ನು ಅಳೆಯಲೆಂದೇ ಪ್ರವಾಸ ಸಾಹಿತ್ಯ ಹುಟ್ಟಿದೆ"[೭] ಎನ್ನುತ್ತಾರೆ.

**ಕನ್ನಡ ಪ್ರವಾಸ ಸಾಹಿತ್ಯದ ಹಿನ್ನೆಲೆ**

ಆಧುನಿಕ ಭಾರತೀಯ ಸಾಹಿತ್ಯಕ್ಕೆ ಪಾಶ್ಚಾತ್ಯ ಸಾಹಿತ್ಯ ಪ್ರೇರಣೆಯಾಗಿದೆ. ಭಾರತದ ಎಲ್ಲ ಭಾಷೆಯ ಪ್ರಕಾರದ ಸಾಹಿತ್ಯಕ್ಕೆ ಇಂಗ್ಲಿಷ್ ಸಾಹಿತ್ಯವೇ ಪ್ರಭಾವ ಬೀರಿದೆ. ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳಿಗೆ ಇಂಗ್ಲಿಷ್ ಸಾಹಿತ್ಯದ ಪ್ರೇರಣೆ ಇದ್ದಂತೆ ಪ್ರವಾಸ ಸಾಹಿತ್ಯದ

ಮೇಲೂ ತನ್ನ ಪರಿಣಾಮವನ್ನು ಬೀರಿದೆ. ಪ್ರವಾಸ ಸಾಹಿತ್ಯವೆಂಬ ಪ್ರಕಾರ ಅಲ್ಲಿಯೂ ಬೆಳೆದದ್ದು ಈಚೆಗೆ. ಆದರೂ ಅಲ್ಲಿ ೧೭-೧೮ನೆಯ ಶತಮಾನಗಳಿಂದಲೂ ಗದ್ಯ ಸಾಹಿತ್ಯದಲ್ಲಿ ಪ್ರವಾಸಾನುಭವದ ಬರಹಗಳು ಇದ್ದೇ ಇವೆ.

ಆಂಗ್ಲ ಸಾಹಿತಿ ರಾಬರ್ಟ್ ಸ್ಟಿವನ್‌ಸನ್ (೧೮೫೦-೧೮೯೪). "ಕತ್ತೆಯೊಡನೆ ಪ್ರವಾಸಗಳು" ಎನ್ನುವ ಪುಸ್ತಕದಲ್ಲಿ, ಫ್ರಾನ್ಸಿನಲ್ಲಿ ಮಾಡಿದ ಪ್ರವಾಸದ ವಿಷಯವನ್ನು ಚಿತ್ರಿಸಿದ್ದಾನೆ. ಇಂಗ್ಲಿಷಿನಲ್ಲಿಯೂ ಪ್ರವಾಸ ಸಾಹಿತ್ಯದಿಂದ ಪ್ರೇರಿತವಾದ ಕಾದಂಬರಿಗಳೂ ಇವೆ. "ಗಲೀವರನ ಪ್ರವಾಸಗಳು" ಇಂಥದೊಂದು ವಿಶಿಷ್ಟ ಕೃತಿ. "ಡಾನ್‌ಕ್ವಿಕ್ಸೋಟ್" ಇನ್ನೊಂದು ಗಮನಾರ್ಹ ಕೃತಿ. ಇಂಗ್ಲಿಷ್‌ನಿಂದ ನಾವು ಪ್ರವಾಸ ಕಥನದಲ್ಲಿ ಸ್ಫೂರ್ತಿ ಪಡೆದೆವಾದರೂ ನಮ್ಮ ಪ್ರವಾಸಗಳ ರೀತಿ ಉದ್ದೇಶಗಳು ಬೇರೆಯದೇ ರೀತಿಯವು. ನಮ್ಮ ಕಥನಗಳು ಆರಂಭವಾದ ಬಗೆಯೂ ಪ್ರತ್ಯೇಕ. ಪ್ರವಾಸ ಕಥನದ ವಿಚಾರವನ್ನಷ್ಟೇ ನಾವು ಇಂಗ್ಲಿಷ್‌ನಿಂದ ತಿಳಿದುಕೊಂಡರೂ ಅದರ ಅನುಕರಣೆಯನ್ನು ನಾವು ಮಾಡಲಿಲ್ಲ ಎಂಬುದು ಗಮನಿಸಬೇಕಾದ ವಿಚಾರ.

ಪ್ರವಾಸ ಸಾಹಿತ್ಯ ಒಂದು ಸೃಜನಶೀಲ ರೂಪವಾಗಿ ಕನ್ನಡದಲ್ಲಿ ಕಾಣಿಸಿಕೊಂಡದ್ದು ಈ ಶತಮಾನದಲ್ಲಿ. ಆದರೆ ಪ್ರವಾಸ ಕಥನದ ಹೊಳಹುಗಳು ನಮ್ಮ ಪ್ರಾಚೀನ ಸಾಹಿತ್ಯದಲ್ಲೇ ಇದ್ದುವೆಂಬುದನ್ನು ನಾವು ಮರೆಯುವಂತಿಲ್ಲ. ಸಾವಿರ ವರ್ಷಗಳ ಹಿಂದಿನ ಮಹಾಕವಿ ಪಂಪನ ವಿಕ್ರಮಾರ್ಜುನ ವಿಜಯದ ಒಂದು ಪ್ರಸಂಗವನ್ನೇ ನಿದರ್ಶನವಾಗಿ ಉಲ್ಲೇಖಿಸಬಹುದು. ಅದೆಂದರೆ, ವಿಕ್ರಮಾರ್ಜುನ ವಿಜಯದ ಅತ್ಯಂತ ಜನಪ್ರಿಯವಾದ ಕಾವ್ಯ ಭಾಗ – 'ಬನವಾಸಿಯ ವರ್ಣನೆ'. ಅರ್ಜುನ ಬನವಾಸಿ ನಾಡಿಗೆ ಒಬ್ಬ ಯಾತ್ರಿಯಾಗಿ ಬಂದಾಗ ಅವನು ಕಂಡ ನೋಟಗಳ ವರ್ಣನೆ ಈ ಭಾಗದಲ್ಲಿದೆ. ಬನವಾಸಿ ನಾಡಿನ ಪ್ರಾಕೃತಿಕ ಚೆಲುವನ್ನು, ಜನಜೀವನದ ಸೊಬಗನ್ನು ವಿವರವಾಗಿ ಚಿತ್ರಿಸುವ ಈ ಭಾಗ ಪ್ರವಾಸ ಕಥನದ ಒಂದು ಮಾದರಿಯೇ ಆಗಿದೆ.

ಪ್ರವಾಸ ಕೈಗೊಳ್ಳುವವರ ಸಂಖ್ಯೆ ಹೆಚ್ಚಾಗಿದ್ದರೂ, ಕನ್ನಡದಲ್ಲಿ ಪ್ರವಾಸ ಸಾಹಿತ್ಯವನ್ನು ರಚಿಸುವವರ ಸಂಖ್ಯೆ ತೀರ ಕಡಿಮೆ. ಇದರ ಪರಿಣಾಮವಾಗಿ ಕನ್ನಡ ಸಾಹಿತ್ಯ ಕ್ಷೇತ್ರ ಬಡವಾಗುತ್ತಿದೆ. ಆದ್ದರಿಂದ ಪ್ರವಾಸ ಕೈಗೊಳ್ಳುವ ಪ್ರತಿಯೊಬ್ಬರೂ ಒಂದೊಂದು ಸಾಹಿತ್ಯ ರಚಿಸಿ ಕನ್ನಡ ಸಾಹಿತ್ಯವನ್ನು ಸಂಪದ್ಭರಿತಗೊಳಿಸಬೇಕು ಮತ್ತು ಓದುಗರಿಗೆ ಹೊಸತನವನ್ನು ನೀಡಬೇಕು. ಈ ಹಿನ್ನೆಲೆಯಲ್ಲಿ ಹೊಸ ಜಗತ್ತಿನ ಹೊಸ ಅನುಭವಗಳನ್ನು ಅಭಿವ್ಯಕ್ತಿಸುವ ಸಾಹಿತ್ಯವನ್ನು 'ಪ್ರವಾಸ ಸಾಹಿತ್ಯ'ವೆಂದು ಅರ್ಥೈಸಬಹುದು.

## ಪ್ರವಾಸ ಸಾಹಿತ್ಯದ ರೂಪ ಲಕ್ಷಣಗಳು

ಪ್ರವಾಸ ಸಾಹಿತ್ಯ ಇಂಥದೇ ರೂಪದಲ್ಲಿ ಇರಬೇಕೆನ್ನುವ ನಿಯಮವೇನೂ ಇಲ್ಲ. ಅದು ಗದ್ಯದಲ್ಲಿ ಇರಬಹುದು, ಪದ್ಯದಲ್ಲಿ ಇರಬಹುದು. ಇಲ್ಲವೇ ವಿ.ಕೃ.ಗೋಕಾಕ್‌ರ 'ಇಂದಿಲ್ಲ ನಾಳೆಯಂತೆ' ಆಧುನಿಕ ಚಂಪೂವಿನಲ್ಲೂ ಇರಬಹುದು. ಕಥಾನಕ, ಪ್ರಬಂಧ, ದಿನಚರಿ, ಪತ್ರಲೇಖನ, ವಿಡಂಬನ, ಹಾಸ್ಯ, ಅಣಕ, ಕವನ ಇತ್ಯಾದಿ ರೂಪಗಳಲ್ಲಿಯೂ ಕಾಣಿಸಿಕೊಳ್ಳಬಹುದು.

- ಪ್ರವಾಸ ಸಾಹಿತ್ಯ ಬಹುಮಟ್ಟಿಗೆ ಗದ್ಯರೂಪದಲ್ಲಿ ಇರುತ್ತದೆ. ಒಟ್ಟಿನಲ್ಲಿ ಅದೊಂದು ಗದ್ಯ ನಿರೂಪಣೆ [Prose narrative].
- ಪ್ರವಾಸ ಕಥನಗಳಲ್ಲಿ ಕೃತಿಯುದ್ದಕ್ಕೂ ಪ್ರಧಾನವಾಗಿ ನಿರೂಪಣ ಶೈಲಿ ಇರುತ್ತದೆ. ಸಂಭಾಷಣೆ–ಪದ್ಯಗಳು ಕೃತಿಯ ಒಡಲಲ್ಲಿ ಅಲ್ಲೋ ಇಲ್ಲೋ ಇರಬಹುದು. ಆದರೆ ಪೂರ್ಣ ಕೃತಿ ಈ ಬಗೆಯಲ್ಲಿರುವುದಿಲ್ಲ. ಪ್ರವಾಸ ಕಥನಗಳಲ್ಲಿ ಒಟ್ಟಾರೆ ನಮಗೆ ಕಂಡುಬರುವುದು 'Narrative Style'.
- 'ನಾನು' ಎನ್ನುವ ಆತ್ಮ ವೃತ್ತಾಂತ ನಿರೂಪಣೆಯ ಕ್ರಮ ಇಲ್ಲವೇ ಧ್ವನಿ ಪ್ರವಾಸ ಕಥನದುದ್ದಕ್ಕೂ ಹರಿದಿರುತ್ತದೆ.
- "ಒಬ್ಬ ವ್ಯಕ್ತಿ ತಾನಿದ್ದ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗಿ ನಿಶ್ಚಿತ ಅವಧಿಯವರೆಗೂ ಅಲ್ಲಿದ್ದು, ಮತ್ತೆ ತಾನಿದ್ದ ಸ್ಥಳಕ್ಕೆ ವಾಪಸ್ಸು ಬರುತ್ತಾನೆ. ವಾಪಸ್ಸು ಬರುವವರೆಗೂ ಆ ನಿಶ್ಚಿತ ಅವಧಿಯಲ್ಲಿ ಅವನಿಗಾಗುವ ಎಲ್ಲ ಬಗೆಯ ಪರಸ್ಥಳಾನುಭವಗಳೂ ಪ್ರವಾಸ ಕಥನದ ವಸ್ತುದ್ರವ್ಯವಾಗುತ್ತದೆ. ಇದು ಪ್ರವಾಸ ಕಥನದ ಮುಖ್ಯ ಲಕ್ಷಣ"ವೆಂದು ಎನ್.ಎಸ್.ತಾರಾನಾಥರು ಗುರುತಿಸುತ್ತಾರೆ.
- ಪ್ರವಾಸ ಕಥನಗಳಲ್ಲಿ ಕಾಣುವ ಮತ್ತೊಂದು ಗುಣ ಅದು ಆತ್ಮಕಥನ ರೂಪವನ್ನು ಹೊಂದುವಂಥದು. ಆತ್ಮಕಥನವೇ ಅಲ್ಲದಿದ್ದರೂ ಆತ್ಮಕಥನಕ್ಕೆ ಸಮೀಪವಾಗಿರುವ ಲಕ್ಷಣಗಳು ಅದರಲ್ಲಿ ಇರುತ್ತವೆ.
- ಪ್ರವಾಸ ಕಥನದಲ್ಲಿ ಇನ್ನೊಂದು ದೇಶದ ಬಗ್ಗೆ ಲೇಖಕನೊಬ್ಬನ ಪ್ರತಿಕ್ರಿಯೆಯೇ ಪುಸ್ತಕವನ್ನಾಕ್ರಮಿಸಿರುತ್ತದೆ. ಪ್ರವಾಸ ಕಾಲದಲ್ಲಿ ಈತನ ಮನಸ್ಸಿನಲ್ಲಿ ಉಂಟಾದ ಭಾವನೆ, ಇನ್ನೊಂದು ದೇಶದ ಬಗ್ಗೆ ಈತನಿಗೆ ಮೂಡಿದ ಮೆಚ್ಚುಗೆ, ತಿರಸ್ಕಾರ ಭಾವ ಇತ್ಯಾದಿಗಳನ್ನು ಕೃತಿ ರಚಿಸುವಾಗ ಆತ ತೋಡಿಕೊಳ್ಳುತ್ತಾನೆ. ಇದನ್ನು ಆಥರಿಯಲ್ ರೆಸ್ಪಾನ್ಸ್ (ಲೇಖಕ ಪ್ರತಿಕ್ರಿಯೆ) ಎನ್ನಬಹುದು.

- ಪ್ರವಾಸ ಕಥನಗಳನ್ನು ಓದುವಾಗ ನಮಗೆ ಗೋಚರವಾಗುವ ಒಂದು ಪ್ರಧಾನ ಸಂಗತಿ ಲೇಖಕ ಅಪರಿಚಿತತೆಯೊಂದಿಗೆ ಸಂವಾದ ಮಾಡುವ ಸಂದರ್ಭಗಳು.

**ಪ್ರವಾಸ ಸಾಹಿತ್ಯದ ವಿಂಗಡನೆ**

ಕನ್ನಡದಲ್ಲಿ ಪ್ರವಾಸ ಸಾಹಿತ್ಯವನ್ನು ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡದ ಪ್ರಸಿದ್ಧ ಬರಹಗಾರರೇ ಬರೆದಿರುವುದು ಗಮನಾರ್ಹ ಸಂಗತಿ. ಆದರೆ ಪ್ರಸಿದ್ಧ ಸಾಹಿತಿಗಳಲ್ಲದವರೂ, ಬದುಕಿನಲ್ಲಿ ಬೇರೆ ಬೇರೆ ವೃತಿಗಳನ್ನು ಅವಲಂಬಿಸಿರುವ ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಪಡದೆ ಇರುವವರೂ ಪ್ರವಾಸ ಸಾಹಿತ್ಯವನ್ನು ಬರೆದಿರುವರು. ಇದು ಪತ್ರ ಸಾಹಿತ್ಯ, ದಿನಚರಿ ಹಾಗೂ ಅನುಭವ ಕಥನ – ಹೀಗೆ ಮೂರು ರೂಪಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಇದರ ಜೊತೆಗೆ ಪ್ರವಾಸ ಸಾಹಿತ್ಯವನ್ನು ಪ್ರಸಿದ್ಧ ವ್ಯಕ್ತಿಗಳು, ವಿದ್ವಾಂಸರು, ಲೇಖಕರು ತಮ್ಮದೇ ಆದ ರೀತಿಯಲ್ಲಿ ವಿಂಗಡಿಸುತ್ತಾರೆ. ಅದು ಈ ಕೆಳಗಿನಂತಿದೆ:

- ಸಾ.ಶಿ.ಮರುಳಯ್ಯನವರು ಐದು ವಿಧಗಳಾಗಿ ವಿಂಗಡಿಸುತ್ತಾರೆ. ಅವುಗಳೆಂದರೆ;
  - (೧) ತೀರ್ಥಯಾತ್ರಾ ಸಾಹಿತ್ಯ
  - (೨) ಸಾಂಸ್ಕೃತಿಕ ಸಾಹಿತ್ಯ
  - (೩) ಶೈಕ್ಷಣಿಕ ಸಾಹಿತ್ಯ
  - (೪) ವ್ಯಾವಹಾರಿಕ ಸಾಹಿತ್ಯ
  - (೫) ಪ್ರವಾಸ ಪ್ರೇಮಿ ಸಾಹಿತ್ಯ
- ವರದರಾಜ ಹುಯಿಲಗೋಳರವರು
  - (೧) ಪತ್ರರೂಪ ಪ್ರವಾಸ ಸಾಹಿತ್ಯ
  - (೨) ದಿನಚರಿ ಪ್ರವಾಸ ಸಾಹಿತ್ಯ
  - (೩) ಕಥಾರೂಪ ಪ್ರವಾಸ ಸಾಹಿತ್ಯ

ಎಂದು ಮೂರು ಭಾಗಗಳಲ್ಲಿ ವಿಂಗಡಿಸುತ್ತಾರೆ. ಈ ವಿಭಾಗವನ್ನು ಮಾಡಿದ ನಂತರವೂ ಮುಂದುವರೆಯುವ ಹುಯಿಲಗೋಳರವರು ಪ್ರಾದೇಶಿಕತೆಯನ್ನು ಆಧರಿಸಿ,

(೧) ಕರ್ನಾಟಕ ಪ್ರವಾಸ ಸಾಹಿತ್ಯ

(೨) ಭಾರತ ಪ್ರವಾಸ ಸಾಹಿತ್ಯ

(೩) ವಿದೇಶ ಯಾತ್ರಾ ಪ್ರವಾಸ ಸಾಹಿತ್ಯವೆಂದು ವಿಭಜಿಸುತ್ತಾರೆ

ಎನ್.ಎಸ್.ತಾರಾನಾಥರವರು (೧) ಮಾಹಿತಿ ಕಥನ (೨) ತೋರು ವಾಸ್ತವಿಕ ಭ್ರಾಮಕ (೩) ನಿರ್ದಿಷ್ಟವಾದ ಉದ್ದೇಶ ಎಂದು ಪ್ರವಾಸ ಸಾಹಿತ್ಯವನ್ನು ಮೂರು ಭಾಗವಾಗಿ ಮಾಡುತ್ತಾರೆ.

## ಪ್ರವಾಸ ಸಾಹಿತ್ಯದ ಉಪಯೋಗಗಳು

"ಪ್ರವಾಸ ಕೇವಲ ಬಾಹ್ಯಾಕಾಶಕ್ಕೆ ಮಾತ್ರವಲ್ಲ, ಕಾಲಗರ್ಭದೊಳಕ್ಕೆ ಹಾಗೂ ನಮ್ಮ ಮನಸ್ಸು ಹಾಗೂ ಸ್ಮರಣೆಯ ವಲಯಕ್ಕೆ ಮಾಡಿದ ವಿಹಾರ. ಅಲ್ಲದೆ ಪ್ರವಾಸ ವೀಕ್ಷಣೆಗೆ ಮಾತ್ರವಲ್ಲದೆ ಸಂಸ್ಮರಣೆಗೆ ಹಾಗೂ ಮನನಶೀಲತೆಗೆ ಅವಕಾಶವನ್ನು ಒದಗಿಸುತ್ತದೆ"[೮] ಎಂದು ಕೆ.ಪಿ.ಎಸ್.ಮೆನನ್‌ರವರು ಪ್ರವಾಸದ ಪ್ರಾಮುಖ್ಯತೆಯನ್ನು ತಿಳಿಸುತ್ತಾರೆ.

- ಸಂಶೋಧಕರು, ಇತಿಹಾಸಕಾರರು ಪ್ರವಾಸ ಕಥನಗಳನ್ನು ಆಧಾರ ಗ್ರಂಥಗಳೆಂದು ಮನ್ನಿಸುತ್ತಾರೆ, ಶರಣು ಹೋಗುತ್ತಾರೆ. ಹಾಗಾಗಿ ಪ್ರವಾಸ ಸಾಹಿತ್ಯ ಜಗತ್ತಿನ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದೆ.
- ಮನರಂಜನೆ ಸಾಹಿತ್ಯದ ಉದ್ದೇಶಗಳಲ್ಲಿ ಒಂದಾಗಿದ್ದು, ಪ್ರವಾಸ ಸಾಹಿತ್ಯದಷ್ಟು ಮನೋರಂಜಕವಾದ ಬರವಣಿಗೆ ಮತ್ತೊಂದು ದೊರಕುವುದು ವಿರಳ.
- ಅದರಲ್ಲಿ ಪ್ರವಾಸ ಕೈಗೊಂಡ ದೇಶದ ಮಹಾನಗರಗಳು, ಅವುಗಳ ಪ್ರೇಕ್ಷಣೀಯ ಸ್ಥಳಗಳು, ವಿವಿಧ ಮತಗಳಿಗೆ ಸೇರಿದ ಜನರ ರೀತಿನೀತಿ, ನಡೆನುಡಿ, ಸಂಸ್ಕೃತಿ, ಕಲೆ, ಉಡುಪು, ನಂಬಿಕೆ, ಆಚಾರವಿಚಾರಗಳನ್ನು ಕುರಿತ ವಿವರಣೆಗಳಿಂದಾಗಿ ಸಮಗ್ರ ಜೀವನವನ್ನು ಅರಿಯಲು ಸಹಾಯಕವಾಗಿದೆ.
- ಪ್ರವಾಸಿ ಲೇಖಕ ಅಥವಾ ಲೇಖಕಿಯೇ ಕಣ್ಣಾರೆ ಕಂಡದ್ದು, ಪಡೆದ ಅನುಭವಗಳು, ಅವುಗಳ ರಸಾನುಭವದೊಂದಿಗೆ ಭಿನ್ನ ಭಿನ್ನ ಜನಾಂಗಗಳ ಬಗ್ಗೆ ತಿಳಿವಳಿಕೆಯೂ ಬೆರೆತು ಪ್ರವಾಸ ಸಾಹಿತ್ಯದ ಉಪಯುಕ್ತತೆ ಮೌಲ್ಯ ಹೆಚ್ಚುತ್ತದೆ.
- ಪ್ರತಿಯೊಬ್ಬ ಪ್ರವಾಸಿಗ ನೋಡುವ ದೃಷ್ಟಿ, ಗಮನಿಸುವ ವಿಚಾರಗಳು ಆತನ ಅಥವಾ ಆಕೆಯ ವಿದ್ಯೆ, ವಯಸ್ಸು, ಸಂಸ್ಕಾರ, ವೃತ್ತಿ, ದೃಷ್ಟಿಕೋನ ಮತ್ತು ಅಭಿರುಚಿಗಳಿಗೆ ಅನುಗುಣವಾಗಿರುವುದರಿಂದ ಪ್ರತಿಯೊಬ್ಬರ ಅನುಭವವೂ ವಿಭಿನ್ನವಾಗಿರುತ್ತದೆ. ಹೀಗಾಗಿ ಪ್ರವಾಸ ಸಾಹಿತ್ಯ ವೈವಿಧ್ಯಮಯವಾಗಿರುವುದು ಕಂಡುಬರುತ್ತದೆ. ಕಲ್ಪನಾಶಕ್ತಿಯಿಂದ ಮುಕ್ತವಾಗಿದ್ದು, ವಾಸ್ತವಿಕತೆಗೆ ನೈಜತೆಗೆ ಹತ್ತಿರವಾಗಿರುವ ಪ್ರವಾಸಕಥನ ಕಂಡದ್ದರ, ಅನುಭವಿಸಿದ್ದರ ವರ್ಣನಾತ್ಮಕ ನಿರೂಪಣ ವೈಖರಿಯನ್ನು ಹೊಂದಿರುವ ಪ್ರಕಾರವಾಗಿದೆ.

## ಪ್ರವಾಸ ಸಾಹಿತ್ಯ ಬೆಳೆದುಬಂದ ಬಗೆ

'ಪ್ರವಾಸ ಸಾಹಿತ್ಯ' ವಿಶ್ವಸಾಹಿತ್ಯ ಪ್ರಕಾರಗಳಲ್ಲಿ ಒಂದು ಉಪಯುಕ್ತ ವಿಭಾಗವಾಗಿ ಬೆಳೆಯುತ್ತಿದೆ. ವಿಜ್ಞಾನಿಗಳು, ತಂತ್ರಜ್ಞಾನಿಗಳು, ಪತ್ರಕರ್ತರು, ಕಲಾವಿದರು, ಶಿಕ್ಷಣವೇತ್ತರು – ಹೀಗೆ ಬದುಕಿನ ವಿವಿಧ ರಂಗಗಳಲ್ಲಿ ಕೆಲಸ ಮಾಡುವವರು ಬರೆಯಬಹುದಾದ ಸಾಹಿತ್ಯ ಪ್ರಕಾರವೆಂದರೆ 'ಆತ್ಮಕಥೆ' ಬಿಟ್ಟರೆ ಪ್ರಾಯಶಃ ಪ್ರವಾಸ ಕಥನವೇ ಎನ್ನಬಹುದು.

ವಿಶ್ವದ ಹಲವಾರು ಪ್ರಮುಖ ಪ್ರವಾಸಿ ಕಥನಗಳಲ್ಲಿ ಹೆರೋಡಟಸನು ನೀಡುವಂತಹ ಪ್ರವಾಸಿಕಥನವೇ ಪ್ರಥಮವಾಗಿದೆ. ಆತನು ಪರ್ಷಿಯನ್ ಯುದ್ಧಗಳ ಕುರಿತು ವಿವರಣಾತ್ಮಕವಾದ ಪ್ರವಾಸಿಯ ಮಾಹಿತಿಯನ್ನು ಒದಗಿಸುತ್ತಾನೆ. ಶುದ್ಧ ಜ್ಞಾನದಾಹದ ದೃಷ್ಟಿಯಿಂದ ಆತನು ವಿವರಣೆಗಳನ್ನು ಒದಗಿಸುತ್ತಾನೆ. ಅಲೆಕ್ಸಾಂಡರ್ ಮಹಾನುಭವನೊಡನೆ ಬಂದಂತಹ ಗ್ರೀಕ್ ಪ್ರವಾಸಿಗರ ಕಥನಗಳು ಆಸಕ್ತಿದಾಯಕವಾಗಿದೆ.

ಟಾಲೆಮಿಯ 'ಜಿಯೋಗ್ರಾಫಿಯಾ' ಹಾಗೂ ಅನಾಮಿಕ ಗ್ರೀಕ್ ಪ್ರವಾಸಿಯ 'ಪೆರಿಪ್ಲಸ್ ಆಫ್ ದ ಎರಿತ್ರಿಯನ್ ಸೀ' ಇವು ಬರೇ ಪ್ರವಾಸ ಕಥನಗಳು ಮಾತ್ರವಲ್ಲ ಉನ್ನತ ಮಟ್ಟದ ಇತಿಹಾಸ ಅಧ್ಯಯನ ಕೃತಿಗಳೂ ಆಗಿವೆ. ಮಹಮ್ಮದ್ ಘಜನಿಯೊಡನೆ ಭಾರತಕ್ಕೆ ಬಂದ ಅಲ್‌ಬೆರೂನಿ ಕೂಡಾ ಭಾರತದ ಕುರಿತು ತನ್ನ ಪ್ರವಾಸದ ಸುಂದರ ಕಥನವನ್ನು ಬರೆದಿಟ್ಟಿದ್ದಾನೆ.

ಮಾರ್ಕೋಪೋಲೊ ಚೀನಾ ದೇಶಕ್ಕೆ ತನ್ನ ಪ್ರವಾಸದ ಕುರಿತು ವಿಸ್ತೃತ ವಿವರಣೆಗಳುಳ್ಳ ಪ್ರವಾಸ ಕಥನವನ್ನು ಬರೆದಿಟ್ಟಿದ್ದಾನೆ. ಪರ್ಷಿಯಾ, ಆಫಘನ್, ಜಾವ, ಸುಮಾತ್ರ, ಭಾರತ ಹಾಗೂ ಸಿಲೋನ್‌ಗಳಲ್ಲಿ ತನ್ನ ಭೇಟಿಗಳ ಕುರಿತು ಆತನು ತಿಳಿಸುತ್ತಾನೆ.

"ಸೀಯೂಕೀ" ಹ್ಯೂಯನ್‌ತ್ಸಾಂಗ್‌ನು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಮಾಡಿದ ಸಂಚಾರದ ಕುರಿತಾದ ಕಥೆಯಾಗಿದೆ. "ಫೋ ಕೂರೇ" ಯು ಭಾರತದ ಪ್ರವಾಸದಿಂದ ಫಾಹಿಯಾನ್ ಸಂಪಾದಿಸಿದ ಅನುಭವಗಳ ಕೋಶ.

ಇಬನ್ ಬಟೂಟನು ಇನ್ನೊಬ್ಬ ಶ್ರೇಷ್ಠ ಪ್ರಯಾಣಗಾರ. ಆತನು ಆಫ್ರಿಕಾ, ಪಶ್ಚಿಮ ಏಷ್ಯಾ, ಸಿಂಧ್, ಇಂಡೋನೇಷಿಯಾ, ಚೀನಾಗಳಲ್ಲಿ ಸುಮಾರು ೧೭,೦೦೦ ಮೈಲು ಸುತ್ತಾಡಿದನು. ಈತನು ತನ್ನ ಕಿತಾಬ್, ಉರ್ ರೆಹ್ಲಾ ಗ್ರಂಥದಲ್ಲಿ ನೀಡುವ ವಿವರಗಳು ಆಸಕ್ತಿದಾಯಕವಾಗಿವೆ. ಯುದ್ಧವೀರ ಬಾಬರ್ ಕೂಡಾ ಸೂಕ್ಷ್ಮ ಗ್ರಹಣ ಶಕ್ತಿಯುಳ್ಳ ಪ್ರವಾಸಿ. ಈತನು ಸಮರಖಂಡ, ಪರಗಣ, ಬುಖಾರ, ಕಾಬೂಲ್, ಪಂಜಾಬ್, ಉತ್ತರಭಾರತ ಮುಂತಾದ ಭಾಗಗಳಲ್ಲಿ ಪ್ರವಾಸಗಳನ್ನು ಕೈಗೊಂಡು ತನ್ನ ಅನಿಸಿಕೆ ಮತ್ತು ಗ್ರಹಿಕೆಗಳನ್ನು 'ಬಾಬರ್ ನಾಮ' (ತಜ್ಕ್–ಎ–ಬಾಬ್ರಿ) ಎಂಬ ಗ್ರಂಥದಲ್ಲಿ ಬರೆದಿದ್ದಾನೆ.

ಮಧ್ಯಯುಗಕ್ಕೆ ಬರುವಾಗ ಅಲ್ಫೋನ್ಸೊ–ಡೀ–ಅಲ್ಬುಕರ್ಕ್‌ನ ಪ್ರವಾಸ ಅನುಭವಗಳು, ಅಬ್ದುಲ್‌ರಜಾಕ್, ಸುಲೇಮಾನ್ ಸೌದಾಗರ್‌ರಂತಹ ಪ್ರವಾಸಿಗರ ಬರಹಗಳು ಜಾನ್ ದೇ ಮೊಂತೆಕಾರ್ಲೊನ ಕೃತಿಗಳು ವಿಶ್ವದ ಪ್ರಮುಖ ಪ್ರವಾಸ ಕಥನಗಳಾಗಿವೆ. ಸಾಮ್ರಾಜ್ಯಶಾಹಿ ಯುಗದಲ್ಲಿ ವಿವಿಧ ವಸಾಹತುಶಾಹಿ ರಾಜ್ಯಭಾರಗಳು ತಾವು ಆಳುತ್ತಿರುವ ಜನರ ಮೇಲೆ ಸುಲಭದಲ್ಲಿ ನಿಯಂತ್ರಣವನ್ನು ಸ್ಥಾಪಿಸಲು ಸಾಧ್ಯವಾಗುವಂತೆ ಅವರನ್ನು ಹತ್ತಿರದಿಂದ

ತಿಳಿದುಕೊಳ್ಳಲು ವಿವಿಧ ಅಧಿಕಾರಿಗಳನ್ನು ನೇರ ಪ್ರವಾಸಕ್ಕೆ ಕಳುಹಿಸುವ ಕಾರ್ಯಕ್ರಮಗಳನ್ನು ಹೊಂದಿದ್ದವು.

ಫ್ರಾನ್ಸಿಸ್ ಬುಖಾನನ್ ಮದ್ರಾಸಿನಿಂದ ಹೊರಟು ಮದ್ರಾಸ್ ಪ್ರಾಂತ್ಯದ ವಿವಿಧ ಭಾಗಗಳು, ಮೈಸೂರು, ಮಲಬಾರ್, ಕೆನರಾ ಮುಂತಾದ ಸೀಮೆಗಳನ್ನು ಸುತ್ತಿ "Journeys from madras through the states of Mysore", "Malabar and Canara"ವನ್ನು ಬರೆದನು. ಕರ್ನಲ್ ಟೋಡ್ ರಜಪುತಾನ ಸೀಮೆಯ ಸುತ್ತಾಟದಿಂದ ಪಡೆದ ಅನುಭವವನ್ನು ಸಂಪಾದಿಸಿ "Annals of Rajaputana" ವನ್ನು ರಚಿಸಿದನು. ಇವೆಲ್ಲವೂ ಬ್ರಿಟಿಷ್ ಯುಗದ ಪ್ರಮುಖ ಪ್ರವಾಸಕಥನಗಳಾಗಿವೆ.

**ಕನ್ನಡದಲ್ಲಿ ಪ್ರವಾಸ ಸಾಹಿತ್ಯ**

೧೮೯೦ರಲ್ಲಿ ಕರ್ಕಿ ವೆಂಕಟರಮಣಶಾಸ್ತ್ರೀ ಸೂರಿಯವರು ಬರೆದ 'ದಕ್ಷಿಣ ಭಾರತಯಾತ್ರೆ' ಅಧಿಕೃತವಾಗಿ ಕನ್ನಡದ ಮೊದಲ ಪ್ರವಾಸ ಕಥನ ಕೃತಿ ಎನ್ನಬಹುದು. ಇನ್ನು ಕೆಲವರು ೧೯೨೧ರಲ್ಲಿ ಬಿ.ಪುಟ್ಟಯ್ಯನವರು ಬರೆದಿರುವ "ಅಭಿವೃದ್ಧಿ ಸಂದೇಶ" ಎಂದರೆ, ಮತ್ತೆ ಕೆಲವರು ೧೯೨೮ರಲ್ಲಿ ವಿ.ಸೀತಾರಾಮಯ್ಯನವರು ಬರೆದಿರುವ 'ಪಂಪಾಯಾತ್ರೆ'ಯೇ ಮೊದಲ ಪ್ರವಾಸ ಕಥನವೆಂದು ಹೇಳುವರು. ವಿ.ಸೀ ಮತ್ತು ಅವರ ಮಿತ್ರವೃಂದ ಸೇರಿ ಮಾಡಿದ ಈ ಪ್ರವಾಸ ಕಥನದಲ್ಲಿ ಸರಸ–ಸನ್ನಿವೇಶ ಲವಲವಿಕೆಯ ನಿರೂಪಣೆ, ತಿಳಿಯಾದ ಗದ್ಯವಿದ್ದು ಅಚ್ಚುಕಟ್ಟಾಗಿ ಮೂಡಿಬಂದಿದೆ. ಜೊತೆಗೆ ಕಥನಕ್ಕಿರಬೇಕಾದ ಎಲ್ಲಾ ಲಕ್ಷಣಗಳನ್ನು ಇದು ಒಳಗೊಂಡಿರುವ ಕಾರಣದಿಂದಾಗಿ ಬಹುಪಾಲು ಸಂಶೋಧಕರು ಪ್ರವಾಸ ಕಥನದ ಆರಂಭವನ್ನು ಈ ಕೃತಿಯಿಂದಲೇ ಗುರುತಿಸುತ್ತಾರೆ.

ವಿ.ಸೀ.ಅವರ ಬಳಿಕ ನವೋದಯ ಸಂದರ್ಭದ ಅನೇಕ ಪ್ರಮುಖ ಲೇಖಕರು ತಮ್ಮದೇ ಆದ ವಿಶಿಷ್ಟ ಧಾಟಿಯಲ್ಲಿ ಅನೇಕ ಸೊಗಸಾದ ಪ್ರವಾಸ ಕೃತಿಗಳನ್ನು ರಚಿಸಿದ್ದಾರೆ. ಶಿವರಾಮ ಕಾರಂತರ 'ಅಬೂವಿನಿಂದ ಬರಾಮಕ್ಕೆ' 'ಅಪೂರ್ವ ಪಶ್ಚಿಮ' ಮತ್ತು 'ಪಾತಾಳಕ್ಕೆ ಪಯಣ' ಮೊದಲಾದವು ಇಲ್ಲಿ ಮೊದಲಿಗೆ ನೆನೆಯಬೇಕಾದ ಕೃತಿಗಳು. ವಿ.ಕೃ.ಗೋಕಾಕ್ ಅವರು ಬರೆದಿರುವ 'ಸಮುದ್ರದಾಚೆಯಿಂದ' 'ಸಮುದ್ರದೀಚೆಯಿಂದ' ಮತ್ತು 'ಇಂದಲ್ಲ ನಾಳೆ' ಮೊದಲಾದವು ಪ್ರವಾಸ ಸಾಹಿತ್ಯಕ್ಕೆ ತಮ್ಮ ವಿಶೇಷ ಸ್ವರೂಪದಿಂದ ಹೊಸತನ ನೀಡಿದ ಕೃತಿಗಳು. ಪ್ರವಾಸ ಸಾಹಿತ್ಯಕ್ಕೆ ಸೊಗಸಾದ ಹಾಸ್ಯದ ಲೇಪವನ್ನು ನೀಡಿದ ಲೇಖಕರೆಂದರೆ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಬಿ.ಜಿ.ಎಲ್.ಸ್ವಾಮಿಯವರು. ಗೊರೂರರ 'ಅಮೇರಿಕಾದಲ್ಲಿ ಗೊರೂರು', ಜಿ.ಜಿ.ಎಲ್.ಸ್ವಾಮಿಯವರ 'ಅಮೇರಿಕಾದಲ್ಲಿ ನಾನು' ಈ ಬಗೆಯ ಬರವಣಿಗೆಯ ಅತ್ಯುತ್ತಮ ಮಾದರಿಗಳಾಗಿವೆ.

ಎ.ಎನ್.ಮೂರ್ತಿರಾವ್ ಪ್ರವಾಸ ಸಾಹಿತ್ಯಕ್ಕೆ ಲಲಿತ ಪ್ರಬಂಧದ ಚೆಲುವನ್ನು ತಮ್ಮ ಉತ್ಕೃಷ್ಟ ಕೃತಿ 'ಅಪಾರ ವಯಸ್ಸಿನ ಅಮೆರಿಕಾ ಯಾತ್ರೆ'ಯಲ್ಲಿ ನೀಡಿದ್ದಾರೆ. ಇವರು ಆರ್.ಎಂ.ಬ್ಯಾಲೆಂಟೈನ್‌ನ ಪ್ರವಾಸ ಕೃತಿ Coral Island ಎಂಬುದನ್ನು 'ಹವಳ ದ್ವೀಪ' ಎಂಬ ಹೆಸರಲ್ಲಿ ಅನುವಾದಿಸಿದ್ದಾರೆ. ಜಿ.ಎಸ್.ಶಿವರುದ್ರಪ್ಪನವರ ಮೂರು ಪ್ರವಾಸ ಕೃತಿಗಳು ಈ ಸಾಹಿತ್ಯ ಪ್ರಕಾರಕ್ಕೆ ಬೆಲೆಯುಳ್ಳ ಕಾಣಿಕೆಯನ್ನು ನೀಡಿವೆ. ಅವುಗಳೆಂದರೆ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನಗಳು', 'ಗಂಗೆಯ ಶಿಖರಗಳಲ್ಲಿ' ಮತ್ತು 'ಅಮೆರಿಕಾದಲ್ಲಿ ಕನ್ನಡಿಗ' – ಇವು ಬಹುಚರ್ಚಿತ ಪ್ರವಾಸ ಕೃತಿಗಳು.

ಪ್ರವಾಸ ಕೃತಿಗಳಿಂದಲೇ ಕನ್ನಡದ ಪ್ರಮುಖ ಲೇಖಕರೆಂದು ಪ್ರಸಿದ್ಧವಾಗಿರುವವರು ಕೃಷ್ಣಾನಂದ ಕಾಮತರು. ಅವರ 'ವಂಗದರ್ಶನ' 'ನಾನೂ ಅಮೆರಿಕೆಗೆ ಹೋಗಿದ್ದೆ' ಮತ್ತು 'ನಾ ರಾಜಸ್ಥಾನದಲ್ಲಿ' – ಕನ್ನಡ ಪ್ರವಾಸ ಸಾಹಿತ್ಯ ಸಂದರ್ಭದಲ್ಲಿ ಬಹುಮುಖ್ಯ ಕೃತಿಗಳು.

ವಿಭಿನ್ನ ಆಸಕ್ತಿಯ ಲೇಖಕರು ಹೊರದೇಶಗಳಿಗೆ ಹೋಗಿ ಆ ಬಗ್ಗೆ ತಮ್ಮ ಪ್ರವಾಸ ಕೃತಿಗಳನ್ನು ರಚಿಸಿದಾಗ ಅವರ ಆಸಕ್ತಿಗಳೇ ಕೃತಿಯ ಸ್ವರೂಪದಲ್ಲಿ ನಿರ್ಧರಿಸುತ್ತವೆ. ಶ್ರೀರಂಗರು ತಮ್ಮ ಯೂರೋಪಿನ ಪ್ರವಾಸವನ್ನು ಕುರಿತು ಬರೆದ 'ಶ್ರೀರಂಗಯಾತ್ರೆ', ಇದೇ ಸಂದರ್ಭದಲ್ಲಿ ಗಿರಡ್ಡಿ ಗೋವಿಂದರಾಜ ಅವರ 'ಇಂಗ್ಲೆಂಡಿನ ರಂಗಭೂಮಿ' ಕೃತಿ ನೆನಪಾಗುತ್ತದೆ.

ಸೂಕ್ಷ್ಮ ಒಳನೋಟಗಳಿಂದ, ಆಕರ್ಷಕ ಶೈಲಿಯಿಂದ ನಮ್ಮ ಗಮನಸೆಳೆಯುವ ಪ್ರವಾಸ ಕೃತಿಗಳೆಂದರೆ ಕು.ಶಿ.ಹರಿದಾಸಭಟ್ಟರ 'ನಾ ಕಂಡ ಇಟಾಲಿಯಾ' ಪ್ರಭುಶಂಕರರ 'ಅಮೆರಿಕಾದಲ್ಲಿ ಶಾಂತಿ, ನಾನು'. ಡಾ. ಡಿ.ವಿ.ರಾವ್ ತಾವು ಮಾಡಿದ ಪ್ರಪಂಚ ಪರ್ಯಟನವನ್ನೆಲ್ಲ ಫೋಟೊ – ಪ್ರವಾಸ ಲೇಖನಗಳಾಗಿ ಬರೆದು ಪ್ರಕಟಿಸಿದ್ದಾರೆ. ಪೂರ್ಣಚಂದ್ರ ತೇಜಸ್ವಿಯವರ 'ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್' ಒಂದು ವಿಶಿಷ್ಟ ರೀತಿಯ ಪ್ರವಾಸ ಕಥನವಾಗಿದೆ.

ಪ್ರವಾಸ ಹೋಗಿ ಬಂದ ಕನ್ನಡ ಲೇಖಕರು ತಮ್ಮ ಪ್ರವಾಸದ ಅನುಭವಗಳನ್ನು ಕುರಿತು ಬರೆಯುವ ಒಂದು ಸತ್ಸಂಪ್ರದಾಯ ನಮ್ಮಲ್ಲಿ ಆರಂಭವಾಗಿದೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ ದೇಜಗೌ ಅವರ 'ವಿದೇಶಗಳಲ್ಲಿ ನಾಲ್ಕು ವಾರಗಳು', ನವರತ್ನರಾಮ್ ಅವರ 'ಪ್ಯಾರಿಸ್ಸಿನಿಂದ ಪ್ರೇಯಸಿಗೆ', ಎಚ್.ವಿ.ಶ್ರೀರಂಗರಾಜ್ ಅವರ 'ಸೋವಿಯತ್ ದಿನಚರಿ', ಕೆ.ಆರ್.ಕಾರಂತರ 'ಪ್ರವಾಸಿಯ ಪತ್ರಗಳು', ದಿನಕರ ದೇಸಾಯಿಯವರ 'ನಾ ಕಂಡ ಪಡುವಣ', ಟಿ.ಕೆ.ರಾಮರಾಯರ 'ಗೋಳದ ಮೇಲೊಂದು ಸುತ್ತು', ಹೊ.ಶ್ರೀನಿವಾಸಯ್ಯ ಅವರ 'ನಾ ಕಂಡ ಜರ್ಮನಿ', ಪ್ರಭುಪ್ರಸಾದರ 'ದೇಗುಲಗಳ

ದಾರಿಯಲ್ಲಿ', ನಾಡಿಗ ಕೃಷ್ಣಮೂರ್ತಿ ಅವರ 'ಸಾಗರಯಾತ್ರೆ' ಮೊದಲಾದವು ಹೆಸರಿಸಬೇಕಾದ ಕೃತಿಗಳು.

ಬೇರೆ ಬೇರೆ ದೇಶಗಳ ಬಗ್ಗೆ, ಆ ಜನರ ಬಗ್ಗೆ ನಮಗೆ ಕುತೂಹಲ ಸಹಜ. ಅನೇಕ ಕಾರಣಗಳಿಂದಾಗಿ ವಿದೇಶ ಪ್ರವಾಸ ಕಷ್ಟ. ಬೇರೆ ದೇಶಗಳಿಗೆ ಹೋಗುವಂಥದು. ಅಲ್ಲಿಯ ಬದುಕನ್ನು ಹತ್ತಿರದಿಂದ ನೋಡುವಂಥದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಆದರೆ ಬೇರೆ ಬೇರೆ ಮಾಧ್ಯಮಗಳ ಮೂಲಕ ನಾವು ಒಂದು ದೇಶದ ಪರಿಚಯವನ್ನು ಮಾಡಿಕೊಳ್ಳಬಹುದು. ಅಂಥ ಮಾಧ್ಯಮಗಳಲ್ಲಿ ಒಂದು ದೇಶದ ಆತ್ಮದರ್ಶನ ಮಾಡಲು ಇರುವ ಅತ್ಯಂತ ಸೂಕ್ತವಾದ ಮಾಧ್ಯಮವೆಂದರೆ ಸಾಹಿತ್ಯವೇ ಎನ್ನಬಹುದು. ಸಾಹಿತ್ಯದಲ್ಲೂ ಪ್ರವಾಸ ಸಾಹಿತ್ಯ ನೇರ ವಿವರಗಳ ರೂಪದಲ್ಲಿರುವುದರಿಂದ ನಾವು ಆ ದೇಶಕ್ಕೆ ಹೆಚ್ಚು ಹತ್ತಿರದವರಾಗುವುದು ಸಾಧ್ಯ. ಹೀಗಾಗಿ ಪ್ರವಾಸ ಸಾಹಿತ್ಯ ಸಮೃದ್ಧವಾದಂತೆ, ನಮ್ಮ ಅನುಭವ ಜಗತ್ತು ವಿಸ್ತಾರವಾಗುತ್ತಾ ಹೋಗುತ್ತದೆ. ಬದುಕಿಗೆ ಹೊಸ ಆಯಾಮಗಳು ಸೇರಿಕೊಳ್ಳುತ್ತವೆ.

**ಮಹಿಳೆಯರ ಪ್ರವಾಸ ಸಾಹಿತ್ಯ**

ಸ್ವಾತಂತ್ರ್ಯಪೂರ್ವದಲ್ಲಿಯೇ ಪ್ರವಾಸ ಕಥನಗಳು ರಚನೆಯಾಗಿದ್ದರೂ, ಮಹಿಳೆಯರು ಬರೆದಿರುವ ಪ್ರವಾಸ ಕಥನಗಳನ್ನು ನಾವು ನೋಡುವುದು ಸ್ವಾತಂತ್ರ್ಯೋತ್ತರದಲ್ಲಿಯೇ. ಏಕೆಂದರೆ ಮಹಿಳೆಯರು ಒಬ್ಬರೇ ಪ್ರವಾಸ ಮಾಡುತ್ತಿದ್ದುದು ವಿರಳ. ಕಾಲ ಬದಲಾದಂತೆ ಶಿಕ್ಷಣದ ಪ್ರಭಾವದಿಂದ ದೇಶ ಸುತ್ತುವ ಹಂಬಲವೂ ಮಹಿಳೆಯರಲ್ಲಿ ಹೆಚ್ಚಾಯಿತು. ಈಗ ಮಹಿಳೆಯರು ಸಾಕಷ್ಟು ಪ್ರವಾಸ ಮಾಡುತ್ತಿದ್ದಾರೆ. ತಮ್ಮ ಪ್ರವಾಸ ಅನುಭವಗಳನ್ನು ಕೃತಿರೂಪದಲ್ಲಿ ಹೊರತರುತ್ತಿದ್ದಾರೆ.

ಮಹಿಳೆಯರು ಬರೆದಿರುವ ಪ್ರವಾಸ ಕಥನಗಳಲ್ಲಿ ಬಹುಪಾಲು ವಿದೇಶ ಪ್ರವಾಸ ಕಥನಗಳೇ ಕಂಡುಬರುತ್ತವೆ. ಹಾಗಾಗಿ ಸ್ವದೇಶ ಪ್ರವಾಸ ಕಥನಗಳ ಸಂಖ್ಯೆ ಕಡಿಮೆ ಎನ್ನಬಹುದು. ೧೯೩೭-೩೮ರಲ್ಲಿ ಪ್ರಕಟವಾದ 'ನನ್ನ ಪ್ರಪಂಚ ಸಂಚಾರ' ಅರಸು ಮನೆತನದ ರಾಜಕುಮಾರಿ ಚನ್ನಾಜಮ್ಮಣ್ಣಿ ಬರೆದ ಮಹಿಳೆಯೊಬ್ಬಳ ಮೊದಲ ಪ್ರವಾಸ ಕೃತಿ. ಯಾರ ಕಣ್ಣಿಗೂ ಬೀಳದಿರುವ ಅಪರೂಪದ ಕೃತಿ. "ಇವರ ಬರವಣಿಗೆ ಯಂತೂ ಸ್ಫುಟವಾಗಿದೆ. ಅನುಭವಗಳನ್ನು ನೇರವಾಗಿ ನಿರ್ಭಿಡೆಯಿಂದ ಹೇಳುತ್ತಾ ಹೋಗುತ್ತಾರೆ. ಕೈಯಂತೂ ಪಳಗಿದೆ. ಸರಳತೆ, ಖಚಿತತೆ, ರಮ್ಯ ನಿರೂಪಣೆ, ವಸ್ತು ನಿರ್ವಹಣೆಯಲ್ಲಿ ನಮ್ಮ ಆಸಕ್ತಿಯನ್ನು ಕೆರಳಿಸುತ್ತದೆ"[೧೦] ಎನ್ನುತ್ತಾರೆ ಮಲ್ಲೇಪುರಂ ಜಿ.ವೆಂಕಟೇಶ್.

ಇನ್ನಿತರೆ ಕೃತಿಗಳೆಂದರೆ ಅನುಪಮಾ ನಿರಂಜನರವರ "ಅಂಗೈಯಲ್ಲಿ ಯುರೋ ಅಮೆರಿಕಾ', ಆರ್ಯಾಂಬ ಪಟ್ಟಾಭಿಯವರ 'ವಿದೇಶ ಪ್ರವಾಸ', ಸೀತಮ್ಮ ನಂಜೇಗೌಡ ಅವರ 'ನಾವು ಕಂಡ ಅಮೇರಿಕ', ನೀಳಾದೇವಿಯವರ 'ನಾ ಕಂಡ ಆ ಖಂಡ' ಹಾಗೂ 'ಸಬಲನ ವಿದೇಶ ಪ್ರವಾಸ', ಕುಲಶೇಖರಿಯವರ 'ಬೊಗಸೆ ಬುತ್ತಿ', ದೇವಕೀಮೂರ್ತಿಯವರ 'ಯುರೋ–ಅಮೆರಿಕಾದ ಇಣುಕುನೋಟ', ವಸಂತೀಚಂದ್ರ ಅವರ 'ಭೋಗ ಭೂಮಿಯ ಮಡಿಲಲ್ಲಿ ಭಾಗ–೧ ಮತ್ತು ಭಾಗ–೨' ಇವೇ ಮೊದಲಾದವು. ಇನ್ನು ಮಹಿಳೆಯರು ಬರೆದಿರುವ ಬಹುಪಾಲು ಸ್ವದೇಶ ಪ್ರವಾಸ ಕಥನಗಳು ತೀರ್ಥಯಾತ್ರೆ ಮಾಡಿದಾಗ ಅಲ್ಲಿ ಕಂಡುಂಡ ಅನುಭವಗಳ ಚಿತ್ರಣಗಳಾಗಿವೆ.

ಪಿ.ಆರ್.ಜಯಲಕ್ಷ್ಮಮ್ಮರವರ "ಬದರಿಯಾತ್ರೆ", ಚಂದ್ರಭಾಗಾದೇವಿರವರ 'ಗೆಜ್ಜೆಯ ಹೆಜ್ಜೆನುಡಿ', ನಿರ್ಮಲಶೆಣೈ ಮತ್ತು ಜಿ.ಕೆ.ಶೆಣೈ ಅವರ 'ಪುತ್ತೂರಿನಿಂದ ಕಾಶ್ಮೀರಕ್ಕೆ', ಶಾಂತಾದೇವಿ ಮಾಳವಾಡರವರ 'ಶ್ರೀ ಗಿರಿಯಿಂದ ಹಿಮಗಿರಿಗೆ', ರುಕ್ಮಿಣಿ ಗಿರಿಮಾಜಿಯವರ 'ಬೆಂಗಳೂರಿನಿಂದ ಬದರಿನಾಥಕ್ಕೆ', ಆಶಾಪೋತದಾರ ಅವರ 'ಪೌರ್ವಾತ್ಯ ದೇಶಗಳ ಹಕ್ಕಿನೋಟ', ಎಂ.ಕೆ.ಇಂದಿರಾ 'ಅನುಭವ ಕುಂಜ', ಸೀತಮ್ಮ ನಂಜೇಗೌಡ 'ನಾವು ಕಂಡ ಅಮೆರಿಕಾ', ಸರೋಜ ಚಾಮಯ್ಯರವರ 'ಸಿಂಹಾಚಲದಿಂದ ಹೈಮಾಚಲದವರೆಗೆ', ಸರೋಜ ಗೋಪಾಲ್‌ರವರ 'ಭೂಪ್ರದಕ್ಷಿಣೆ' ಇತ್ಯಾದಿ.

ನೇಮಿಚಂದ್ರರವರ 'ಒಂದು ಕನಸಿನ ಪಯಣ' ಮತ್ತು 'ಪೆರುವಿನ ಪವಿತ್ರ ಕಣಿವೆಯಲ್ಲಿ', ಲತಾಗುತ್ತಿಯವರ 'ಯುರೋನಾಡಿನಲ್ಲಿ', ವಿಜಯಾ ದಬ್ಬೆರವರ 'ಉರಿಯೆ ಚಿಗುರ ಉತ್ಕಲೆ', ಬಿ.ಎನ್.ಸುಮಿತ್ರಾಬಾಯಿಯವರ 'ಬ್ರಹ್ಮಪುತ್ರದ ಕಣಿವೆಯಲ್ಲಿ', ಸುಧಾಮೂರ್ತಿಯವರ 'ಅಟ್ಲಾಂಟಿಕ್‌ದಾಚೆಗೆ', 'ಕಾವೇರಿಯಿಂದ ಮೆಕಾಂಗಿಗೆ', 'ಹಕ್ಕಿಯ ತೆರದಲಿ', ಸಾರಾ ಅಬೂಬಕ್ಕರ್‌ರವರ 'ಐಷಾರಾಮದ ಆಳದಲ್ಲಿ' ನರ್ಮದಾ ಬಿ.ಕೆ. ಅವರ 'ಸುಂದರ ಸ್ವಪ್ನ', ಅನುಸೂಯ ರಾವ್‌ರವರ 'ಸುಂದರ ಕರ್ನಾಟಕ', ಜಯಾರಾಜಶೇಖರ್‌ರವರ 'ಮರಳಿ ಬಂದ ಮಧುರಮಾಸ', ಆಶಾನೂಲಾರವರ 'ನನ್ನ ಪ್ರವಾಸ ಕಥನ' ಹಾಗೂ ಎಂ.ಜಾನಕಿ ಬ್ರಹ್ಮಾವರ ಅವರ "ತಿರುಗಾಟದ ತಿರುಳು" ಮುಂತಾದವು ಕನ್ನಡದ ಪ್ರಮುಖ ಮಹಿಳಾ ಪ್ರವಾಸ ಬರಹಗಳು.

ಇವರೆಲ್ಲಾ ವಿದೇಶಿ ಪ್ರವಾಸಗಳನ್ನು ಬರೆದಿರುವ ಮಹಿಳೆಯರು. ತಾವು ಕಂಡ ಪಾಶ್ಚಾತ್ಯ ಜಗತ್ತಿನ ಪರಿಚಯ ಮಾಡಿಕೊಟ್ಟು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಅನ್ಯ ಸಂಸ್ಕೃತಿಯನ್ನು ಕಟ್ಟಿಕೊಡುವ ಸಾಂಸ್ಕೃತಿಕ ರಾಯಭಾರಿಗಳಾಗಿದ್ದಾರೆ.

## ಕೊನೆ ಟಿಪ್ಪಣಿಗಳು

೧. ಉದ್ಧೃತ: ಲತಾಗುತ್ತಿ ; ಪ್ರವಾಸ ಸಾಹಿತ್ಯ–ವಿಶ್ವಸಂಸ್ಕೃತಿಗಳು ; ೨೦೦೭–ಪು.೫

೨. ಅದೇ: ಪು.೫

೩. ಹೆಚ್.ಎಲ್.ನಾಗೇಗೌಡ: ಪ್ರವಾಸಿ ಕಂಡ ಇಂಡಿಯಾ ಸಂಪುಟ–೪ ; ೧೯೭೨– ಪು.V

೪. ಉದ್ಧೃತ: ಲತಾಗುತ್ತಿ ; ಪ್ರವಾಸ ಸಾಹಿತ್ಯ–ವಿಶ್ವಸಂಸ್ಕೃತಿಗಳು ; ೨೦೦೭–ಪು.೬

೫. ಕುವೆಂಪು ಸಮಗ್ರ ಕಾವ್ಯ ಸಂಪುಟ–೧ ; ೨೦೦೦–ಪು.೨೩೩

೬. ಉದ್ಧೃತ: ಪ್ರಭುಶಂಕರ ; ಅಮೆರಿಕಾದಲ್ಲಿ ನಾನು ಮತ್ತು ಶಾಂತಿ ; ೧೯೯೭– ಪು.೧೧೫

೭. ಸಮುದ್ರದಾಚೆಯಿಂದ: ೧೯೬೭–ಪು.೭೨

೮. ಪ್ರವಾಸಿ ಸಾಹಿತ್ಯ: ೧೯೯೦–ಪು.೭

೯. ಉದ್ಧೃತ: ಪ್ರಭುಶಂಕರ ; ಅಮೆರಿಕಾದಲ್ಲಿ ನಾನು ಮತ್ತು ಶಾಂತಿ ; ೧೯೯೭– ಪು.೧೨೦

೧೦. ಪ್ರವಾಸ ಸಾಹಿತ್ಯ–ಒಂದು ಅಧ್ಯಯನ: ೧೯೯೨–ಪು.೩೯

## ಅಧ್ಯಾಯ – ೩

# ನೇಮಿಚಂದ್ರ ಅವರ ಬದುಕು – ಬರಹ : ಪರಿಚಯ

ನೇಮಿಚಂದ್ರ ಅವರು ಕನ್ನಡ ಸಾಹಿತ್ಯದ ಅದರಲ್ಲೂ ಮಹಿಳಾ ಸಾಹಿತ್ಯದ ಸಂಚಲನ ಶಕ್ತಿ, ಅವರ ವ್ಯಕ್ತಿತ್ವ ಮತ್ತು ಸಾಹಿತ್ಯ ಅವರ ಹೆಸರಿನಷ್ಟೇ ವಿಶಿಷ್ಟವಾಗಿದ್ದು, ಬೆರಗು ಮೂಡಿಸುವಂತಿದೆ.

**ಬಾಲ್ಯ ಮತ್ತು ವಿದ್ಯಾಭ್ಯಾಸ**

ನೇಮಿಚಂದ್ರ ಅವರು ಪ್ರೊ॥ ಜಿ.ಗುಂಡಣ್ಣ ಮತ್ತು ತಿಮ್ಮಕ್ಕನವರ ಎರಡನೆಯ ಮಗಳಾಗಿ ೧೯೫೯ರ ಜುಲೈ ೧೬ರಂದು ಚಿತ್ರದುರ್ಗದಲ್ಲಿ ಜನಿಸಿದರು. ಅವರ ನಾಲ್ಕು ಮಕ್ಕಳಲ್ಲಿ ಇಬ್ಬರು ಹೆಣ್ಣುಮಕ್ಕಳು ಮತ್ತು ಇಬ್ಬರು ಗಂಡುಮಕ್ಕಳು. ಅದರಲ್ಲಿ ನೇಮಿಚಂದ್ರರವರು ಎರಡನೇ ಮಗಳಾಗಿದ್ದಾರೆ. ಇವರ ತಂದೆ ಶಿವಮೊಗ್ಗದಲ್ಲಿರುವ ಸಹ್ಯಾದ್ರಿ ಕಾಲೇಜಿನಲ್ಲಿ ಲೆಕ್ಚರರಾಗಿ ಸೇವೆಯಿಂದ ನಿವೃತ್ತರಾದವರು.

ತುಮಕೂರಿನಲ್ಲಿ ನೇಮಿಚಂದ್ರರವರು ಶಾಲಾ ಆರಂಭದ ದಿನಗಳನ್ನು ಕಳೆದರು. ನಂತರ ಅವರ ತಂದೆಯವರಿಗೆ ಮೈಸೂರಿಗೆ ವರ್ಗವಾದ ಮೇಲೆ ಅಲ್ಲಿ ಅವರು ಕ್ರೈಸ್ಟ್ ದ ಕಿಂಗ್ ಕಾನ್ವೆಂಟಿಗೆ ಸೇರಿ ಎಸ್.ಎಸ್.ಎಲ್.ಸಿ.ಯನ್ನು ಪೂರ್ಣಗೊಳಿಸಿದರು. ಶಾಲಾ ಹಾಗೂ ಕಾಲೇಜು ದಿನಗಳಲ್ಲಿ ಅವರು ಪ್ರತಿಭಾವಂತ ವಿದ್ಯಾರ್ಥಿನಿಯಾಗಿದ್ದರು. ನಂತರ ಅವರು ಎನ್.ಐ.ಇ. ಕಾಲೇಜಿಗೆ ಸೇರಿ ೧೯೭೬ರಲ್ಲಿ ತಮ್ಮ ಇಂಜಿನಿಯರಿಂಗ್ ಪದವಿ ಮುಗಿಸಿದರು. ಆನಂತರ ಉನ್ನತ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿನ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್' ಸೇರಿ ಅಲ್ಲಿ ಎಂ.ಎಸ್.ಪದವಿಯನ್ನು ಗಳಿಸಿದರು.

ಪ್ರಸ್ತುತ ಅವರು ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್‌ನ 'ವಿಮಾನ ಸಂಶೋಧನೆ ಮತ್ತು ವಿನ್ಯಾಸ ಕೇಂದ್ರ'ದಲ್ಲಿ 'ಮಾನವರಹಿತ ವಿಮಾನ'ಗಳ ವಿಭಾಗದ ಮುಖ್ಯಸ್ಥರಾಗಿದ್ದಾರೆ. ಇದಕ್ಕೆ ಮೊದಲು ನೇಮಿಚಂದ್ರ ಅವರು 'ಹೆಲಿಕಾಪ್ಟರ್ ಸಂಶೋಧನೆ ಮತ್ತು ವಿನ್ಯಾಸ ಕೇಂದ್ರ'ದಲ್ಲಿ 'ಏವಿಯಾನಿಕ್ಸ್', 'ಮಿಷನ್ ಸೆನ್ಸರ್ಸ್' ಮತ್ತು 'ಆರ್ಮಮೆಂಟ್' ತಂಡಗಳ 'ಗ್ರೂಪ್ ಲೀಡರ್' ಆಗಿ, ದೇಶೀಯ ವಿನ್ಯಾಸದ 'ಧ್ರುವ' – ಅತ್ಯಾಧುನಿಕ ಹಗುರ ಹೆಲಿಕಾಪ್ಟರ್ ಯೋಜನೆಯಲ್ಲಿ ತೀವ್ರವಾಗಿ ತೊಡಗಿಕೊಂಡಿದ್ದರು. ಜೊತೆಗೆ ಅವರು 'ಬಿಎಇ – ಎಚ್.ಎ.ಎಲ್ ಸಾಫ್ಟ್‌ವೇರ್ ಲಿಮಿಟೆಡ್' ಕಂಪನಿಯ ಬೋರ್ಡ್‌ನಲ್ಲಿ ನಾಮಿನಿ ಡೈರೆಕ್ಟರ್ ಕೂಡಾ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ಬಾಲ್ಯದ ನೆನಪುಗಳು**

ಇವರು ತುಮಕೂರಿನ ಸರಕಾರಿ ಶಾಲೆಯಲ್ಲಿ ಐದನೇ ತರಗತಿಯಲ್ಲಿದ್ದಾಗ, ಶಾಲೆಯಿಂದ ಸಿದ್ಧರಬೆಟ್ಟದ ಪ್ರವಾಸಕ್ಕೆ ಕರೆದೊಯ್ದರು. ಪ್ರವಾಸಕ್ಕೆಂದು ಅವರು ಕೊಡಬೇಕಿದ್ದ ಹಣ ಎರಡು ರೂಪಾಯಿ. ಈ ಪ್ರವಾಸ ನೇಮಿಚಂದ್ರ ಅವರ ಬದುಕಿನ ಪ್ರಥಮ ಪ್ರವಾಸವಾಗಿತ್ತು. ದಿನದ ಖರ್ಚಿಗೆಂದು ಅಪ್ಪ ಕೊಟ್ಟಂತಹ ೬೦ ಪೈಸೆಯನ್ನು ಕೈಯಲ್ಲಿ ಹಿಡಿದುಕೊಂಡು ಹೋಗಿದ್ದರು. ಆದರೆ ಆ ಪೈಸೆ ಬಹಳ ಬೇಗ ಬೆಟ್ಟದ ಮೇಲೋ ಅಥವಾ ಕೆಳಗೋ ಖರ್ಚಾಗಿ ಹೋಗಿತ್ತು. ಆನಂತರದಲ್ಲಿ ನೂಕು ಗಾಡಿಯ ಐಸ್‌ಕ್ಯಾಂಡಿಯವನು ಕ್ಯಾಂಡಿಯನ್ನು ಮಾರುತ್ತಿದ್ದನ್ನು ಕಂಡು ಇವರಿಗೂ ತಿನ್ನಲು ಆಸೆಆಗುತ್ತದೆ. ಆದರೆ ಇವರಲ್ಲಿ ಅಷ್ಟುಹೊತ್ತಿಗೆ ಕೈಯಲ್ಲಿದ್ದ ಹಣ ಮುಗಿದಿತ್ತು. ಈ ಪ್ರವಾಸಕ್ಕೆ ಐದು ರೂಪಾಯಿ ತಂದಂತಹ ಹಣವಂತರ ಮಕ್ಕಳು ಇವರೊಡನೆ ಇದ್ದರೂ ಅವರಲ್ಲಿ ಐದುಪೈಸೆ ಕೇಳಿ ಪಡೆಯಲು, ಸ್ವಾಭಿಮಾನದ ಅಡ್ಡಗೋಡೆ ಎದುರಾಗಿತ್ತು. ಆ ದಿನ ಎಲ್ಲ ಮಕ್ಕಳೂ ಐಸ್‌ಕ್ಯಾಂಡಿ ತಿನ್ನುತ್ತಿದ್ದಾಗ, ಇವರಂತೆ ಇಬ್ಬರು ಮೂವರು ಹುಡುಗಿಯರು, ಕೊಳ್ಳದೆ ಒಂದಿಷ್ಟು ದೂರ ನಿಂತಿದ್ದರು. ಇದನ್ನು ಗಮನಿಸಿದ ಪ್ರಾಧ್ಯಾಪಕರಲ್ಲಿ ಒಬ್ಬರು ಸಹಜವಾಗಿ ಐದಾರು ಕ್ಯಾಂಡಿಗಳನ್ನು ಕೊಂಡು ತಾವೂ ಒಂದನ್ನು ಬಾಯಿಗಿಟ್ಟು, ಉಳಿದವನ್ನು ಇವರ ಕೈಗಿಟ್ಟಿದ್ದರು. ಆ ಐದು ಪೈಸೆಗೆ ಆ ದಿನ, ಆ ಕ್ಷಣ ಮಕ್ಕಳ ಮನಸ್ಸನ್ನು ಅರಳಿಸುವ ಅದ್ಭುತ ಮಾಂತ್ರಿಕ ಶಕ್ತಿಯಾಗಿತ್ತು ಎಂಬುದಾಗಿ ಶಾಲೆಯ ದಿನಗಳನ್ನು ಮೆಲುಕುಹಾಕುತ್ತಾರೆ.

ಈಗಲೂ ಈ ಘಟನೆಯನ್ನು ನೆನಪಿಸಿಕೊಳ್ಳುತ್ತಾ ಬದುಕು ಹಿಮ್ಮುಖವಾಗಿ ಹರಿಯುವುದಿಲ್ಲ ಎನ್ನುತ್ತಾ ನನಗೆ ಐದು ಪೈಸೆಯ ಐಸ್‌ಕ್ಯಾಂಡಿ ಕೊಟ್ಟ ಮಾಸ್ತರನ್ನು ಹುಡುಕಿ ಹೋಗಿ ನಾನಿಂದು ಐದಲ್ಲ, ಐವತ್ತು ಸಾವಿರ ಕೊಟ್ಟರೂ ಆ ಕ್ಷಣದ ಋಣ ತೀರುವುದಿಲ್ಲ. ಆದರೆ ನಮ್ಮ ಬದುಕಿನ ಯಾತ್ರೆಯಲ್ಲಿ ಅನಾಯಾಸವಾಗಿ ನಮಗೆ ಎದುರಾಗುವ, ನಮಗಿಂತ ಕಡಿಮೆ ಅದೃಷ್ಟವಂತ ಸಹಯಾತ್ರಿಗಳ ಪುಟ್ಟಪುಟ್ಟ ಆಸೆಗಳನ್ನು ನಾವು ಅವರ ಅಭಿಮಾನಕ್ಕೆ ಭಂಗವಾಗದ ಹಾಗೆ ಈಡೇರಿಸಬಲ್ಲವೇ ಎಂಬ ಎಂಬ ಪ್ರಶ್ನೆ ಸದಾ ನನ್ನೊಳಗೆ ಮೂಡುತ್ತದೆ ಎಂಬುದಾಗಿ ತಮ್ಮ ಮನಸ್ಸಿನ ಭಾವನೆಯನ್ನು ವ್ಯಕ್ತಪಡಿಸುತ್ತಾರೆ.

**ತಂದೆ–ತಾಯಿಯ ಹಿನ್ನೆಲೆ**

ಬಯಲು ಸೀಮೆಯ ಬೆಂಗಾಡಿನಲ್ಲಿ ಇವರ ತಂದೆಯ ಜನನವಾಗಿತ್ತು. ಹಳ್ಳಿ ಜುಂಜರಗುಂಟೆ, ಪರುಷರಾಮಪುರ ಹೋಬಳಿ, ಚಳ್ಳಕೆರೆ ತಾಲ್ಲೂಕು. ಇವರು ಹುಟ್ಟಿದ ದಿನಾಂಕ ದಾಖಲೆಯಲ್ಲಿ ಉಳಿದಿರುವುದು ೮ ಏಪ್ರಿಲ್ ೧೯೨೨ರಂದು. ಇವರು ಹುಟ್ಟಿದ ಸೀಮೆಯಲ್ಲಿ ಊರಿನ ಪೂರ್ವದ ಪಕ್ಕದಲ್ಲಿ ವೇದಾವತಿ ನದಿಯೂ ದಕ್ಷಿಣೋತ್ತರವಾಗಿ ಹರಿಯುತ್ತಿದ್ದು, ದೂರದಲ್ಲಿ ಬೆಟ್ಟಗಳಿಂದ ಆವೃತ್ತವಾಗಿದೆ.

ಇಂತಹ ಒಂದು ಪರಿಸರವು ಇವರನ್ನು ಕವಿಯನ್ನಾಗಿ ರೂಪಿಸಿತು. ಈ ಬಯಲು ಸೀಮೆಯಲ್ಲಿ ಜರ್ಮಿನ್ದಾರಿ ಪದ್ಧತಿಯೂ ಇರಲಿಲ್ಲ. ಎಲ್ಲರದೂ ಸ್ವತಂತ್ರ ರೈತಾಪಿ ಜೀವನ, ಶ್ರಮಪೂರಿತ ವ್ಯವಸಾಯದ ಬದುಕು ನಡೆಸುತ್ತಾ ಬಡತನಕ್ಕೆ ಅಂಜದ ಚುರುಕು ಸ್ವಭಾವದ ಜನ ಅಲ್ಲಿನ ವಿಚಾರ ಬಗ್ಗೆ ಬೆಳಕನ್ನು ಚೆಲ್ಲುತ್ತಾರೆ.

ಹಳ್ಳಿಯ ಕೆಳಮಾಧ್ಯಮ ವರ್ಗದ ರೈತ ಮನೆತನದಲ್ಲಿ ಅವರ ತಂದೆ ಜೆ.ಗುಂಡಪ್ಪ ಜನಿಸುತ್ತಾರೆ. ಇವರ ತಾಯಿ ಅಕ್ಕಮ್ಮ. ಇವರ ತಂದೆ 'ಓದೋ ಗುಂಡಪ್ಪ' ಎಂದೇ ಹೆಸರಾದವರು. ಹಳ್ಳಿಗೆಲ್ಲ ಮೊದಲು ಅಕ್ಷರ ಕಲಿತದ್ದರಿಂದ ಈ ಅಡ್ಡ ಹೆಸರು ಬಂತೆಂದು ತಿಳಿಸುತ್ತಾರೆ.

ಇವರು ಮೊದಲಿಗೆ ಗ್ರಾಂಟ್ ಸ್ಕೂಲಿನಲ್ಲಿ ಕೆಲವಾರು ವರ್ಷಗಳು ಉಪಾಧ್ಯಾಯರಾಗಿದ್ದರು. ನಂತರ ಹುದ್ದೆಯನ್ನು ತ್ಯಜಿಸಿ, ವ್ಯವಸಾಯ ನಿರತರಾದರು. ಇವರು ಬಾಲ್ಯದಿಂದಲೂ 'ತೊರವೆ ರಾಮಾಯಣ', 'ಜೈಮಿನಿ ಭಾರತ'ಗಳನ್ನು ವಾಚನ ಮಾಡುತ್ತಿದ್ದಾಗ ಇವರ ತಂದೆ ಅದಕ್ಕೆ ವ್ಯಾಖ್ಯಾನ ಮಾಡುತ್ತಿದ್ದರು. ಇಂತಹ ಅಪರೂಪದ ಸಾಹಿತ್ಯ ವಾತಾವರಣ ಜೆ.ಗುಂಡಪ್ಪ ಅವರಿಗೆ ಸಾಹಿತ್ಯಾಭಿರುಚಿಗೆ ಹೆಚ್ಚಿನ ಓದಿನ ಆಸೆಯನ್ನು ಹುಟ್ಟುಹಾಕಿತು.

ಹಳ್ಳಿ–ಹೊಲ ಬಿಟ್ಟು ಓದು–ನೌಕರಿ ಎಂದು ಪಟ್ಟಣ ಸೇರುವುದು ಅವರ ತಂದೆಗೆ ಸುತರಾಂ ಒಪ್ಪಿಗೆ ಇರಲಿಲ್ಲ. ಇದರಿಂದ ಹುಟ್ಟಿದ ಹಳ್ಳಿಯನ್ನು ತೊರೆದು, ವಾರಾನ್ನ ಉಂಡುಕೊಂಡು, ಆಲಮ್ಮ ಛತ್ರದಲ್ಲಿ ತಂಗಿದ್ದು ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಮತ್ತು ಬಿ.ಎ. ಆನರ್ಸ್ ಪಡೆದರು.

ಬಿ.ಎ. ಮುಗಿಯುತ್ತಿದ್ದಂತೆ ಹರಿಯಬ್ಬೆ ಗ್ರಾಮದ ಟಿ.ತಿಮ್ಮಕ್ಕನೊಡನೆ ಹಿರಿಯರ ಆದೇಶದಂತೆ ವಿವಾಹವಾಯಿತು. ಪ್ರಥಮವಾಗಿ ೧೯೪೮ರಲ್ಲಿ ಬೆಂಗಳೂರಿನಲ್ಲಿ ಆಗಿನ 'ಆರ್ಟ್ಸ್ ಅಂಡ್ ಸೈನ್ಸ್ ಕಾಲೇಜಿ'ನಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕವಾದರು. ೧೯೫೦ರಲ್ಲಿ ಮೈಸೂರು ಯುವರಾಜಾ ಕಾಲೇಜಿಗೆ ವರ್ಗ, ಆಗ ಉಪನ್ಯಾಸಕ ವೃತ್ತಿಯೊಡನೆ ಮಹಾರಾಜಾ ಕಾಲೇಜಿನಲ್ಲಿ ಎಂ.ಎ. ಶಿಕ್ಷಣವೂ ನಡೆದು ೧೯೫೨ರಲ್ಲಿ ಎಂ.ಎ. ಪದವಿಯನ್ನು ಪಡೆದುಕೊಂಡರು.

ವಿವಾಹವಾದ ಎಂಟು ವರ್ಷಕ್ಕೆ ಮೊದಲು ಮಗಳು ಶ್ರೀದೇವಿ ಜನಿಸುತ್ತಾರೆ. ಆನಂತರ ಇವರಿಗೆ ಚಿತ್ರದುರ್ಗಕ್ಕೆ ವರ್ಗಾವಣೆಯಾಗುತ್ತದೆ. ಚಿತ್ರದುರ್ಗದಲ್ಲಿ ಕೆಳಗೋಟೆ ಶಾಲೆಯ ಹಿಂಭಾಗದ ಒಂದು ಸಣ್ಣಮನೆಯಲ್ಲಿ ನೇಮಿಚಂದ್ರ ಅವರು ಜನಿಸುತ್ತಾರೆ. ಇವರಿಗೆ ತನ್ನ ಬಾಲ್ಯದ ಅತ್ಯಂತ ಹಳೆಯ ನೆನಪುಗಳು, ಊರು, ಈ ಮನೆಗೆ ಜೋಡಿಸಿದ್ದಾಗಿದೆ.

ದುರ್ಗ, ಬೆಟ್ಟ, ಕೋಟೆ, ಒನಕೆ ಓಬವ್ವನ ವೀರ ಚರಿತ್ರೆಯ ಒಂದು ಅದ್ಭುತ ರಮ್ಯ ತಾಣವಾಗಿ ನನ್ನ ಎಳೆಯ ನೆನಪುಗಳಲ್ಲಿ ಅಚ್ಚೊತ್ತಿ ಉಳಿದು ಬಿಟ್ಟಿತ್ತು ಎಂದು ಹೇಳುತ್ತಾರೆ.

ನೇಮಿಚಂದ್ರ ಅವರು ಐದು ವರ್ಷವಿದ್ದಾಗ, ಅವರ ತಂದೆಗೆ ತುಮಕೂರಿಗೆ ವರ್ಗವಾಗಿತ್ತು. ಆನಂತರ ಮತ್ತೆ ಮೈಸೂರಿಗೆ ವರ್ಗವಾಯಿತು. ಈ ಸಂದರ್ಭದಲ್ಲಿ ಮೈಸೂರಿನಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸಕ್ಕಾಗಿ ಕಾನ್ವೆಂಟ್ ಒಂದಕ್ಕೆ ಸೇರುತ್ತಾರೆ. ಹಳ್ಳಿಯ ಹಿನ್ನೆಲೆಯಿಂದ ಬಂದ ಇವರ ತಂದೆ–ತಾಯಿ, ಬಟ್ಟೆ, ಬರಿ ಅಲಂಕಾರ ಎಲ್ಲವನ್ನು ಬಲ್ಲವರಲ್ಲ. ಬಡತನದ ಬದುಕನ್ನು ಕಂಡ ಶ್ರಮಜೀವಿಯಾಗಿದ್ದ ಇವರ ತಂದೆ ಕಾಲೇಜಿನ ಪ್ರೊಫೆಸರ್ ಆಗಿದ್ದರೂ ಪಟ್ಟಣದ ಶೋಕಿ ತಿಳಿದಿರಲಿಲ್ಲ.

ಮಕ್ಕಳಿಗೆ ಸೊಸೈಟಿಯಲ್ಲಿ ಬರುತ್ತಿದ್ದ ಕೋರಾ ಬಟ್ಟೆಯನ್ನೇ ಹರಿಸಿ ಹೊಲೆಸಿದ ಲಂಗವನ್ನು ಹಾಕಿಕೊಳ್ಳುತ್ತಿದ್ದರು. ಅವರ ಲಂಗದ ಬಟ್ಟೆ ಅವರ ಗೆಳತಿಯ ಮನೆಯ ಕಿಟಕಿ ಕರ್ಟನ್ ಎರಡೂ ಒಂದೇ ಆಗಿರುತ್ತಿತ್ತು. ಅವರ ತಂದೆಗೆ ಕಾಲು ಕಾಣಿಸುವಂಥ ಫ್ರಾಕ್, ಸ್ಕರ್ಟ್ ಅಂದರೆ ಕೆಂಡ ಕಾರುತ್ತಿದ್ದರು.

ಆದರೆ ಬಟ್ಟೆಬರೆಗೆ ಹಣವ್ಯರ್ಥ ಎಂದು ಭಾವಿಸಿದ್ದ ಇವರ ಅಪ್ಪ, ಮನೆಯ ತುಂಬಾ ಸಾವಿರ ಸಾವಿರ ಪುಸ್ತಕಗಳನ್ನು ಕೊಂಡು ತುಂಬಿದ್ದರು. ಪುಸ್ತಕದ ವಿಷಯದಲ್ಲಿ ಖರ್ಚು ಮಾಡಲು ಎಂದೂ ಹಿಂದೆ ಮುಂದೆ ನೋಡಿದವರಲ್ಲ. ಈ ವಾತಾವರಣವು ನೇಮಿಚಂದ್ರರವರನ್ನು ಲೇಖಕಿಯಾಗಿ ಬೆಳೆಸಿದ್ದು, ಈ ಸಾವಿರ ಸಾವಿರ ಪುಸ್ತಕಗಳು. ಅವುಗಳಲ್ಲಿ ಅರ್ಧ ಕೂಡ ಓದಿಲ್ಲದ ಇವರು ಲೇಖಕಿಯಾದರು. ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ ಅವರ ಕವನಗಳನ್ನು ಕೇಳುತ್ತಾ ಬೆಳೆದರು. ಶೇಕ್ಸ್‌ಪಿಯರ್, ಬರ್ನಾಡ್ ಶಾ, ಡಾಂಟೆ, ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ತ್ ಎಲ್ಲರ ಪರಿಚಯ ನೇಮಿಚಂದ್ರ ಅವರಿಗೆ ಅವರ ತಂದೆಯ ಈ ಗ್ರಂಥಾಲಯದ ಮೂಲಕ ಉಂಟಾಯಿತು. ಇಂತಹ ಪರಿಸರದಲ್ಲಿ ಬೆಳೆದ ಇವರು ಲೇಖಕಿಯಾಗಿ ರೂಪುಗೊಂಡರು.

ಈಗ ಇವರ ಮನೆಯ ತುಂಬೆಲ್ಲಾ ಪುಸ್ತಕಗಳ ಸಂತೆಯೇ ಇದೆ. ಎಲ್ಲೆಲ್ಲೂ ಪುಸ್ತಕಗಳಿವೆ. ಸಾವಿರ ರೂಪಾಯಿ ಬಟ್ಟೆಗಳಿಗೆ ಸುರಿಯಲು ಇಂದೂ ಮನಸ್ಸಾಗದ ನೇಮಿಚಂದ್ರ ಅವರಿಗೆ, ಸಾವಿರಗಟ್ಟಲೆ ಹಣವನ್ನು ಪುಸ್ತಕಗಳಿಗೆ ಪ್ರವಾಸಗಳಿಗೆ ಖರ್ಚುಮಾಡಲು ಕ್ಷಣ ಕೂಡಾ ಹಿಂಜರಿಯುವುದಿಲ್ಲ. ಪುಸ್ತಕ ಪ್ರೀತಿ ಅನುವಂಶಿಕವಾಗಿ ಈಗ ಮಗಳು ಮೇಘಾಳಿಗೆ ಹರಿದು ಬಂದಿದೆ ಎಂದು ಹೇಳುತ್ತಾರೆ.

**ಮೊದಲ ಬರಹ : ಪ್ರತಿಕ್ರಿಯೆ**

ಆದರೆ ನೇಮಿಚಂದ್ರ ಅವರಿಗೆ ಅವರ ತಂದೆ ಎಂದೂ 'ಹೀಗೆ ಬರೆಯಬೇಕು, ಎಲ್ಲಿ ಏನು ಬರೆದಿದ್ದೀಯಾ ತೋರಿಸು?' ಎಂದು ಬಾಲ್ಯದಲ್ಲಿ ಇವರ ಬರಹದಲ್ಲಿ ಆಸಕ್ತಿ ತೋರಿಸಿ

ಪ್ರೋತ್ಸಾಹಿಸಿದವರಲ್ಲ. ಅತ್ಯಂತ ಸಂಕೋಚ ಸ್ವಭಾವದಲ್ಲಿದ್ದ ಇವರು ಸಹ ಬರೆದದ್ದನ್ನು ಪ್ರಕಟಣೆಗೆ ಮೊದಲು ಯಾರಿಗೂ ತೋರಿಸಿರಲಿಲ್ಲ.

ತನ್ನ ಹೈಸ್ಕೂಲಿನ ಸಮಯದಲ್ಲಿ ಮೊಟ್ಟಮೊದಲಿಗೆ ಒಂದು ಸಣ್ಣ ಲೇಖನ ಪತ್ರಿಕೆಯೊಂದರಲ್ಲಿ ಪ್ರಕಟವಾದದ್ದು ತಿಳಿದಾಗ, ಕುಣಿಯುತ್ತಾ ಮನೆಗೆ ಬಂದು ತೋರಿಸುತ್ತಾರೆ. ಪತ್ರಿಕೆಯಲ್ಲಿ ಪ್ರಥಮ ಬಾರಿಗೆ ತನ್ನ ಹೆಸರು ಬಂದದ್ದು ಅದ್ಭುತದ ವಿಷಯವಾಗಿತ್ತು. ಇವರ ತಂದೆ ಪೂರ್ತಿ ಓದುವ ಮೊದಲೇ 'ಎಷ್ಟು ಕೊಡ್ತಾರೆ?' ಎಂದ ಪ್ರತಿಕ್ರಿಯೆ ಇವರ ಉತ್ಸಾಹವನ್ನು ಕೆಳಗೆ ಇಳಿಸುತ್ತದೆ. ಇಂತಹ ಅಪ್ಪನ ಪ್ರಥಮ ಪ್ರತಿಕ್ರಿಯೆಗೆ ನೇಮಿಚಂದ್ರ ಅವರು ಕ್ಷಮಿಸಲೇ ಇಲ್ಲ. ಇವರು ಮತ್ತೆ ಬರೆದಾಗ – ಪ್ರಕಟಿಸಿದಾಗ, ಪುಸ್ತಕದ ಮೇಲೆ ಪುಸ್ತಕ ಹೊರತಂದಾಗ ಅಪ್ಪನಿಗೆ ವಿಶೇಷವಾಗಿ ತಿಳಿಸುವುದಿಲ್ಲ. ಆದರೆ ಅವರ ತಂದೆ ಉಳಿಸಿ ಹೋದ ಕಂತೆ ಕಂತೆ ಪುಸ್ತಕಗಳು, ಪತ್ರಿಕೆಗಳ ನಡುವೆ 'ಸುಧಾ'ದಿಂದ ಕತ್ತರಿಸಿಟ್ಟುಕೊಂಡ ಅವರ 'ಮೇರಿಕ್ಯೂರಿ' ಧಾರವಾಹಿಯ ಭಾಗಗಳನ್ನು ಕಂಡಾಗ ಕಂಠ ಉಬ್ಬಿ ಬಂದಿತ್ತಂತೆ!

**ಸಂವಹನದ ಅಂತರ!**

ಎಂದೂ ಮಕ್ಕಳೊಡನೆ ಪೂರ್ಣ ಮುಕ್ತವಾಗಿ, ಸಲಿಗೆಯಾಗಿ, ಸ್ನೇಹವಾಗಿ ಮಾತನಾಡುವಂಥ ಬಿಚ್ಚು ಸಂಬಂಧವನ್ನು ಬೆಳೆಸಿಕೊಳ್ಳುವ ಅವರ ತಂದೆ ಹಾಗೂ ನೇಮಿಚಂದ್ರ ಅವರ ನಡುವೆಯೂ ಸಂವಹನದ ಸಮಸ್ಯೆ ಇತ್ತು. ಇಬ್ಬರು ಲೇಖಕರ ನಡುವೆ ಅಭಿವ್ಯಕ್ತಿಯ ತೊಂದರೆಗಳಿದ್ದವು. ಮಾತಾಗದ ಮೌನಗಳಿದ್ದವು. ಬಹಳಷ್ಟೆ ಎದೆಯ ದನಿಗಳು ಅವ್ಯಕ್ತವಾಗಿಯೇ ಉಳಿದವು.

'ನಿನ್ನ ಕತೆಗಳನ್ನು ಓದಿ ಬಹಳ ಮೆಚ್ಚಿಕೊಂಡ್ರಮ್ಮ.....' ಎಂದು ಅವರಿವರ ಅಭಿಪ್ರಾಯಗಳನ್ನು ಹೇಳುತ್ತಿದ್ದ ಇವರ ತಂದೆಗೆ ತಮ್ಮದೇ ಅಭಿಪ್ರಾಯವನ್ನು ಹೇಳಲು ಎಂಥದ್ದೋ ಮುಜುಗರಪಡುತ್ತಿದ್ದರು. ಎದೆಯ ತುಂಬಾ ಅಭಿಮಾನವಿದ್ದರೂ, ಮೆಚ್ಚುಗೆಯನ್ನು ಪ್ರೀತಿಯನ್ನು ಅಭಿವ್ಯಕ್ತಿಸುವುದು ಹೇಗೆಂದು ತಿಳಿಯದ ಇವರ ತಂದೆ ಹಳೆಯ ತಲೆಮಾರಿಗೆ ಸೇರಿದವರಾಗಿದ್ದರು.

ಕನ್ನಡ ಎಂ.ಎ. ಮಾಡುತ್ತಿದ್ದ ತಮ್ಮ ವಿದ್ಯಾರ್ಥಿನಿ ಫಸ್ಟ್‌ಕ್ಲಾಸ್ ಬಂದಾಗ ಹೊಗಳಿ ಮೆಚ್ಚಿದ್ದ ಅವರ ತಂದೆ ನೇಮಿಚಂದ್ರ ಅವರು ಇಂಜಿನಿಯರಿಂಗ್‌ನಲ್ಲಿ ವಿಶ್ವವಿದ್ಯಾನಿಲಯಕ್ಕೆ ರ‍್ಯಾಂಕ್ ಬಂದಾಗ, 'ಹೌದಾ...' ಎಂದಷ್ಟೆ ಉದ್ಗರಿಸಿದ್ದರು. ಅವರ ತಂದೆಯನ್ನು ಆಗಲೂ ಕ್ಷಮಿಸಿರಲಿಲ್ಲ.

ಮನೆಮಕ್ಕಳ ಪ್ರತಿಭೆಯನ್ನು ಗುರುತಿಸದೆ ಯಾರನ್ನೋ ಹೊಗಳಿದರೆಂದು ಇವರ ಮನಸ್ಸು ಮುನಿಸಿಕೊಂಡಿತ್ತು. ಎಂದೂ ಸಂವಾದವಾಗದ, ಸಂಪರ್ಕವಾಗದ, ಅಂತರದ ನಡುವೆ ಅತ್ತ–ಇತ್ತ ನಿಂತು ಉಳಿದ ಸಂಬಂಧವಾಯಿತು. ಇವರಲ್ಲಿ ಪ್ರೀತಿಯಿತ್ತು.

ಹುಚ್ಚುತನವಿತ್ತು, ವ್ಯಾಮೋಹವಿತ್ತು, ಭ್ರಮೆಗಳಿತ್ತು. ಆದರೆ ಬಿಚ್ಚಿಕೊಳ್ಳಲಿಲ್ಲ. ಎದೆಯ ಗುಟ್ಟುಗಳನ್ನು ಎಲ್ಲೂ ಬರೆದಂತಹ ೩೦೦೦ ಪುಟಗಳಲ್ಲಿ.

**ತಂದೆ : ತಾರತಮ್ಯವಿಲ್ಲದ ಲೇಖಕ**

ಅದೇ ಅವರ ತಂದೆ ಹೆಣ್ಣು-ಗಂಡು ಎಂದು ಯಾರ ತಾರತಮ್ಯ ಮಾಡದೆ ಅವರು ಓದಿದಷ್ಟು ಓದಿಸಿದವರು. ಪುಸ್ತಕ, ಫೀಸುಗಳನ್ನು ಕೇಳಿದಾಕ್ಷಣ ತಂದುಕೊಟ್ಟರು. ಸಾಹಿತ್ಯದ ಅಭಿರುಚಿಯನ್ನು ಬೆಳೆಸಿದರು. ಹೆಣ್ಣುಮಕ್ಕಳ ಮೇಲೆ ಅಭಿಮಾನವಿದ್ದರೂ, ಗಂಡುಮಕ್ಕಳ ಮೇಲೆ ಅಗಾಧ ಮೋಹವನ್ನು ಇಟ್ಟು ಕೊಟ್ಟಿದ್ದರು.

ನೇಮಿಚಂದ್ರ ಅವರ ತಂದೆ ಪ್ರೊ. ಜಿ.ಗುಂಡಣ್ಣನವರು ಕನ್ನಡದ ಲೇಖಕರಾಗಿದ್ದರು. 'ತ್ಯಾಗ', 'ಶಿಲ್ಪಗಂಗೋತ್ರಿ' ಅವರ ಕಥಾಸಂಕಲನಗಳು. ಷೆಲ್ಲಿಯ 'ಕಾವ್ಯ ಸಮರ್ಥನೆ', ಶೇಕ್ಸ್‌ಪಿಯರ್‌ನ 'ವೆನಿಸಿನ ವ್ಯಾಪಾರಿ' ಅವರ ಅನುವಾದಿತ ಕೃತಿಗಳು. 'ಆದಿಜಿನ ತನಯರು', 'ಕಾಯಕರ್ಪೂರ' ಅವರು ಬರೆದ ನಾಟಕಗಳು. ಅವರು ಮೂಲತಃ ಕವಿಯಾಗಿದ್ದರು. ತಮ್ಮ ೨೦ ಮತ್ತು ೩೪ನೇ ವರ್ಷಗಳ ನಡುವೆ ಬರೆದ ಕವನಗಳನ್ನು 'ಕುಮುದ' ಕಾವ್ಯನಾಮದಡಿ ಸ್ವತಃ ಪ್ರಕಟಿಸಿದ್ದರು. ಅವರ ಈ ಕವನ ಸಂಕಲನ 'ವಾಣಿಯ ಕೃಪೆ'ಯ ಕಳೆದುಹೋಗಿದ್ದ ಪ್ರತಿಯನ್ನು ಹುಡುಕಿ ತೆಗೆದಾಗ, ತಮ್ಮ ತಂದೆಯ ಕಾವ್ಯಶಕ್ತಿಗೆ ಬೆರಗಾದರು. ತನ್ನ ತಂದೆಯ ಅಚ್ಚುಮೆಚ್ಚಿನ ನಾಟಕಗಳೊಂದನ್ನು ಮೆಚ್ಚಿಕೊಳ್ಳದ ಮಗಳು 'ವಾಣಿಯ ಕೃಪೆ' ಕವನಕ್ಕೆ ಮುಗ್ಧಳಾಗಿದ್ದರು.

ಇವರ ತಂದೆ ಸತ್ತದ್ದು ತನ್ನದೇ ಊರಿನ ಗುಡಿಯ ಜಗುಲಿಯ ಮೇಲೆ ರಾತ್ರಿ ಮೂರರ ಸುಮಾರಿಗೆ ಹೃದಯಸ್ಥಂಭನಕ್ಕೆ ತುತ್ತಾಗಿ ಹುಟ್ಟೂರಿನಲ್ಲಿಯೇ ಚಿರನಿದ್ರೆಗೆ ಜಾರಿದರು. 'ಬದುಕ' ಪ್ರೀತಿಸಿದ ಲೇಖಕರಾಗಿದ್ದರು. 'ಸಾವೆಂಬುದು ಮಿಥ್ಯೆ! ಬಾಳಿನ್ನೈ ಸಿರಿಗಾಗಿ ಬಾಳುವುದೇ ಕವಿಯ ಸತ್ಯ' ಎಂದ ಕವಿ. ತುಂಬು ಜೀವನೋತ್ಸಾಹದಲ್ಲಿ ಬದುಕ ಪ್ರೀತಿಸಿದ ಕವಿಯಾಗಿದ್ದರು. ಅವರು ಬದುಕಿದ್ದಾಗ ನಾಟಕಕಾರರಾಗಿ ಗುರುತಿಸಲ್ಪಟ್ಟಿದ್ದರು. ಆದರೆ ತನ್ನ ತಂದೆಯನ್ನು ನೇಮಿಚಂದ್ರ ಅವರು ನಿಜವಾದ ಗುರುತು 'ಕವಿ' ಎಂದೇ ನನಗನಿಸುತ್ತದೆ ಎಂದಿದ್ದಾರೆ. ಅಪ್ಪನ ಹಿನ್ನೆಲೆಯನ್ನು, ಅವು ಒಡ್ಡಿರಬಹುದಾದ ಮಿತಿಗಳನ್ನು ಅರ್ಥಮಾಡಿಕೊಳ್ಳುವಷ್ಟರಲ್ಲಿ ಇವರ ಅಪ್ಪ ಇರಲಿಲ್ಲ.

ಅಪ್ಪನ ಬಹಳಷ್ಟು ಆದರ್ಶಗಳು ಇವರಿಗೆ ಮುಗಿಲು ಮುಟ್ಟುವಂತಹವು. ಕಾಯವನ್ನೇ ಕರ್ಪೂರದಂತೆ ಉರಿಸಿದ 'ಕರ್ಣನ ಉದಾರೋದಾರ ಅಂತಿಮದಿವ್ಯ ಚಾರಿತ್ರ್ಯವನ್ನು 'ಕಾಯ ಕರ್ಪೂರ' ನಾಟಕದ ಮೂಲಕ ಚಿತ್ರಿಸ ಹೊರಟರು. ಮಹಾಭಾರತದ ಪಾತ್ರಗಳಲ್ಲಿ ನೇಮಿಚಂದ್ರರವರಿಗೆ ಕಾಡಿದ್ದು ದ್ರೌಪದಿ, ಮಾಧವಿಯ ಹೆಣ್ಣುತನ. ಇವರ ಮತ್ತು ಅಪ್ಪನ ನಡುವೆ ಇಂತಹ ಅನೇಕ ವಿಚಾರಗಳಲ್ಲಿ ವಾದ-ವಿವಾದಕ್ಕೆ ಕಾರಣವಾಗುತ್ತಿತ್ತು.

ನೇಮಿಚಂದ್ರರವರ ಬರಹದ ಮೇಲೆ ತೀವ್ರವಾಗಿ ಪ್ರಭಾವ ಬೀರಿರುವ ಅಂಶವೆಂದರೆ ಸ್ತ್ರೀವಾದ. ಸ್ತ್ರೀವಾದ ಎಂದರೇನು ಎಂದು ತಿಳಿಯುವ ಮೊದಲೇ ಇವರು ಸ್ತ್ರೀವಾದಿಯಾಗಿದ್ದರು. ಕಾರಣ, ಲಿಂಗಾಧಾರಿತ ಅಸಮಾನತೆಗಳು ಅವರಲ್ಲಿ ಅಸಹನೆ – ಆಕ್ರೋಶವನ್ನು ಹುಟ್ಟಿಸಿದ ಪ್ರಸಂಗಗಳಾಗಿತ್ತು.

**ನೇಮಿಚಂದ್ರ ಅವರ ತಾಯಿಯ ವಿಚಾರ**

ಇವರ ತಾಯಿಯ ಹೆಸರು ತಿಮ್ಮಕ್ಕ. ಹಿರಿಯೂರಿನ ಹರಿಯಬ್ಬೆಯವರು. 'ಓದಿದ ಗಂಡ' ಸಿಕ್ಕಿದ ಕಾರಣಕ್ಕೆ ನಗರ ಸೇರಿದರೂ, ಇವರ ತಾಯಿ ತಮ್ಮ ನೆಲದ ದಂತಕತೆಗಳನ್ನು, ಜನಪದ ಹಾಡು–ಹಸೆಗಳನ್ನು ಸೆರಗಲ್ಲಿ ಕಟ್ಟಿಕೊಂಡೇ ಬಂದವರು. ನೇಮಿಚಂದ್ರ ಅವರು ಬಾಲ್ಯದುದ್ದಕ್ಕೂ ಕೇಳಿ ಬೆಳೆದದ್ದು ಅಂಬರದ ಅಪ್ಸರೆಯ ಕತೆಗಳನಲ್ಲ, ಈ ಹಳ್ಳಿಗಾಡಿನ ದುಡಿವ ಹೆಣ್ಣುಮಕ್ಕಳ ಬದುಕಿನ ಕತೆಗಳನ್ನು ತಮ್ಮ ನೋವು, ನಲಿವು, ನಂಬುಗೆ, ಪ್ರೀತಿ, ಸಿಟ್ಟು, ಸೆಡವು, ಶ್ರಮ ಜೀವನವನ್ನು ಹಿಡಿದಿಟ್ಟ ಜನಪದ ಕತೆಗಳನ್ನು.

ಶ್ರಮಜೀವನದಲ್ಲಿ ಅಪ್ಪಟ ನಂಬುಗೆ ಇಟ್ಟ ಇವರ ತಾಯಿ ಎಂದೂ ಕೆಲಸದವರನ್ನು ಇಟ್ಟುಕೊಂಡವರಲ್ಲ. ತಮ್ಮ ಬದುಕಿನ ಬಹುಪಾಲನ್ನು ಪಟ್ಟಣದಲ್ಲಿ ಕಳೆದರೂ ಅವರ ಅಮ್ಮನ ಒಳಗೆ ಇಂದಿಗೂ ಬಯಲು ಸೀಮೆಯ ಬೆವರಿಳಿಸಿ ದುಡಿವ ರೈತ ಹೆಣ್ಣು ಮಗಳಿದ್ದಳು. ಬಿತ್ತಿ ಬೆಳೆಯುವ ಹಸಿರು ಹರಡುವ ಹಸಿ ಮನಸ್ಸಿನ ಹೆಣ್ಣುಮಗಳಾಗಿ 'ಪರಿಸರಪ್ರೇಮ' 'ಪರಿಸರವಾದ' ಘೋಷಣೆಯಾಗದೆ ಅಂತರ್ಗತವಾದ ಜೀವನ ವಿಧಾನ ಅವರ ಅಮ್ಮನಲ್ಲಿತ್ತು.

ಪಟ್ಟಣ ಸೇರಿ ಕಾಲೇಜು ಮೇಷ್ಟ್ರರ ಮಡದಿಯಾಗಿ, ಪ್ರೊಫೆಸರ್ ಪ್ರಾಂಶುಪಾಲರು, ಪತ್ನಿಯಾದಾಗಲೂ ಇವರ ತಾಯಿ ದುಡಿಮೆಯೇ ದೈವವೆಂಬಂತೆ ಬದುಕಿದವರು. ಹೊರಗೆಲ್ಲಾದರೂ ಹೊರಟರೆ, ನಡೆದೇ ಹೋಗುತ್ತಿದ್ದರು. ಇವರಲ್ಲಿ ನಡೆವ ಶಕ್ತಿ, ದುಡಿವ ಅಖಂಡ ಬಲವಿತ್ತು. ನೇಮಿಚಂದ್ರ ಅವರನ್ನು ಅಡಿಗೆ ಮನೆಯತ್ತ ಸುಳಿಯಲೂ ಬಿಟ್ಟಿರಲಿಲ್ಲ. "ಇದೆಲ್ಲ ಕಸಮುಸುರೆ ಇದ್ದದ್ದೇ. ಈಗ ನೀನು ಓದಿಕೋ. ಅಡಿಗೆ ಏನು, ಓದು ಮುಗಿದ ಮೇಲೆ ಕಲೀಬೌದು. ಇಂಜಿನಿಯರ್ ಆಮೇಲಾಗೋಕ್ಕೆ ಆಗುತ್ತಾ?" ಅವರ ಅಮ್ಮನ ಮಾತುಗಳಿಗೆ ತನ್ನದೇ ತರ್ಕವಿತ್ತು.

"ನನಗಿಂದಿಗೂ ಅಡಿಗೆ ಎಂಬುದು ಸುಲಲಿತವಾಗಿ ಹರಿದುಬರದೆ ರೇಜಿಗೆಯ ವಿಷಯವಾಗಿದ್ದರೆ, ಅದಕ್ಕೆ ಅಮ್ಮ ಸ್ವಲ್ಪ ಕಾರಣ. ನಾನಿಂದು ಅರ್ಧ ಡಜನ್ ಪ್ರಾಜೆಕ್ಟ್‌ಗಳನ್ನು ಸಲೀಸಾಗಿ ನಿಭಾಯಿಸುತ್ತ, ದೇಶ ವಿದೇಶ ಸುತ್ತುವ ಆತ್ಮವಿಶ್ವಾಸ, ಕಾಲಬಲವನ್ನು ಗಳಿಸಿದ್ದರೆ, ಅದಕ್ಕೂ ಅಮ್ಮನೇ ಕಾರಣ" ಎಂದು ನೇಮಿಚಂದ್ರ ಅವರು, **"ಹೆಣ್ಣುಮಕ್ಕಳು ಓದಬೇಕು. ಆಗಲೇ ಅವರಿಗೊಂದು ಬೆಲೆ"** ಅಮ್ಮನ ಅನುಭವದ ಮಾತಾಗಿತ್ತು ಎನ್ನುತ್ತಾರೆ. ತಾನು

ಬೇರಿಳಿಸಿ ನಿಂತಲ್ಲಿಂದ ಅಲುಗಾಡದೆಯೂ, ನಮಗೆ ಹಾರಲಿಕ್ಕೆ ರೆಕ್ಕೆ ಕೊಟ್ಟವಳು ಅಮ್ಮ ಎಂದು ಅಭಿಪ್ರಾಯವನ್ನು ಹಂಚಿಕೊಳ್ಳುತ್ತಾರೆ.

ಯಾರದೇ ಕತೆ ಕೇಳಿದರೂ 'ಅಯ್ಯೋ ಪಾಪ' ಎಂದು ಮರುಗುವ ಸ್ವಭಾವ ಅಮ್ಮನದಾಗಿತ್ತು. ಅಮ್ಮನಿಗೆ ಬಲು ದೊಡ್ಡ ಸ್ನೇಹ ವೃಂದವಿತ್ತು. ಅತ್ತೆಯ ಬಗ್ಗೆ ದೂರು ಹೇಳಿಕೊಂಡು ಬರುವ ಸೊಸೆ, ಸೊಸೆಯ ಬಗ್ಗೆ ಗೊಣಗುಟ್ಟುವ ಅತ್ತೆ ಇಬ್ಬರಿಗೂ ಸಮಾಧಾನ ಹೇಳಿ, ಇಬ್ಬರೊಡನೆಯೋ ಸ್ನೇಹ–ಸಂಬಂಧ ಉಳಿಸಿಕೊಂಡಿದ್ದ ಇವರ ತಾಯಿಯ ಸಹಜ 'ಕೌನ್ಸೆಲಿಂಗ್ ಸ್ಕೂಲ್'ನ ಅಲ್ಪಸ್ವಲ್ಪ ಭಾಗ ನೇಮಿಚಂದ್ರ ಅವರಿಗೂ ಹರಿದು ಬರಲು ಸಾಧ್ಯವಾಗಿತ್ತು. ಸಾಂತ್ವನದ ನಾಲ್ಕು ಮಾತಿಗೆ ಅವರ ಅಮ್ಮನಲ್ಲಿ ಸದಾ ಸಮಯವಿತ್ತು. ಗೋಳಿಟ್ಟು ಬಂದವರಿಗೆಲ್ಲ ಏನಾದರೂ ಸಮಾಧಾನ ಹೇಳಿ ಕಳುಹಿಸುತ್ತಿದ್ದರು. ಇತರರ ನೋವಿಗೆ ಸದಾ ಸ್ಪಂದಿಸಿದ ಜೀವವಾದರು.

ನೇಮಿಚಂದ್ರ ಅವರು ಹದಿನೆಂಟು ವರ್ಷಗಳ ಹಿಂದೇ 'ಬೆಳಕಿನೊಂದು ಕಿರಣ ಮೇರಿ ಕ್ಯೂರಿ' ಪುಸ್ತಕವನ್ನು ತಮ್ಮ ತಾಯಿಗೆ ಅರ್ಪಣೆ ಮಾಡಿದರು. "ಚೆನ್ನಾಗಿ ಓದಮ್ಮ, ರ್‍ಯಾಂಕ್ ಬರಬೇಕು, ಈ ಕಸಮುಸರೆಯಲ್ಲೇನಿದೆ?" ಎಂದು ಸದಾ ಹುರಿದುಂಬಿಸಿದ, ಬಯಲುಸೀಮೆಯ ಹಳ್ಳಿಗಾಡಿನ ಅಪ್ಪಟ ಅನಕ್ಷರಸ್ಥೆ ನನ್ನ ಅಮ್ಮನಿಗೆ" ಬರೆದಿದ್ದರು. ಅನಕ್ಷರಸ್ಥ ಅಮ್ಮನ ಮಗಳು ಇಂಜಿನಿಯರ್ ಆದದ್ದೆ ಅನೇಕರಿಗೆ ಅದ್ಭುತವಾಗಿ ಕಂಡಿತ್ತು.

ಮೂಲತಃ ಮನುಷ್ಯರಲ್ಲಿ ನಂಬಿಕೆ – ವಿಶ್ವಾಸ ಕಳೆದುಕೊಳ್ಳದ 'ಅಮ್ಮನ ಸ್ವಭಾವ ನೇಮಿಚಂದ್ರರವರಿಗೆ ಮುದ ಕೊಟ್ಟಿತ್ತು. ನಂಬಿಕೆ, ವಿಶ್ವಾಸವಿಲ್ಲದೆ ಬದುಕು ಸಾಧ್ಯವೆ? ಇವರ ಓದು, ವಿದ್ಯಾಭ್ಯಾಸ, ಲೋಕಾನುಭವ ತನ್ನೊಳಗಿನ ಮುಗ್ಧತೆಯನ್ನು ಮಸುಕಾಗಿಸಿದ್ದರೂ, ಅನೇಕ ಕಹಿ ಅನುಭವಗಳೂ ತನ್ನ ಹಾದಿಯಲ್ಲೂ ತೊಡರಿದ್ದರೂ ಮೂಲತಃ ಮನುಷ್ಯರಲ್ಲಿ ವಿಶ್ವಾಸವಿಡುವ ನೇಮಿಚಂದ್ರರವರ ಸ್ವಭಾವ ಅಮ್ಮನಿಂದಲೇ ಹರಿದುಬಂದಿದೆ. ಸ್ತ್ರೀವಾದ, ಮಾನವತಾವಾದಕ್ಕೆ ಇವರ ತಾಯಿ ಭದ್ರ ಬುನಾದಿ ಹಾಕಿಟ್ಟರು.

ಅನೇಕ ವಿಷಯಗಳಲ್ಲಿ ಇವರ ತಾಯಿಯು ಇವರನ್ನು ಅಚ್ಚರಿಗೊಳಿಸಿದೆ. ನೇಮಿಚಂದ್ರ ಅವರದು ಅಂತರಜಾತಿ, ಅಂತರಭಾಷೆ, ಅಂತರರಾಜ್ಯ ವಿವಾಹವಾದರೂ, ಇವರಿಗೆ ಅಂತಹ ಅಂತರಗಳೇನೂ ನೇಮಿಚಂದ್ರ ಕೀರ್ತಿಯ ನಡುವೆ ಕಾಣಲಿಲ್ಲ. ಮೊಟ್ಟ ಮೊದಲಿಗೆ ಪಂಜಾಬಿ ಹುಡುಗ ಕೀರ್ತಿ ಮೈಸೂರಿಗೆ ಬಂದು, ಇವರ ತಾಯಿಯ ಅಡಿಗೆ ಮನೆಗೆ ನುಗ್ಗಿ ಬಿಸಿ ಆಲೂ ಪರೋಟ ಮಾಡಿ ಮನೆಯವರಿಗೆಲ್ಲ ಬಡಿಸಿದ ಕ್ಷಣ, ಅವರ ತಾಯಿಗೆ ಕೀರ್ತಿಯವರು ಅಚ್ಚುಮೆಚ್ಚಿನ ಅಳಿಯನಾಗಿದ್ದರು. ಅಪ್ಪ ಇವರ ಬಗ್ಗೆ 'ನಮ್ಮ ಜಾತಿ ಅಲ್ಲ, ಬಾಂಬೆ ಹುಡುಗ ಸ್ಮಾಲ್‌ಸ್ಕೇಲ್ ಇಂಡಸ್ಟ್ರೀ ಇಡುವವನು...' ಎಂದೂ ಇನ್ನೂ ರಾಗ ತೆಗೆಯುವಾಗಲೇ, 'ಕೀರ್ತಿಯಂತಹ ಹುಡುಗ ಎಲ್ಲಿ ಸಿಗುತ್ತಾನೆ? ಓದಿ ಕೆಲಸ ಹಿಡಿಯೋ

ನೇಮಿಚಂದ್ರಳಿಗೆ ಸಹಾಯ ಮಾಡುವಂತಹ ಹುಡುಗ ಆಗಬೇಕು' ಎಂದು ಮೆಚ್ಚಿದ್ದಳು ಇವರ ತಾಯಿ ತಿಮ್ಮಕ್ಕ.

ಅಕ್ಟೋಬರ್ ೨, ೨೦೦೭ರಂದು ನೇಮಿಚಂದ್ರ ಅವರ 'ಯಾದ್ ವಶೇಮ್' ಕಾದಂಬರಿಯ ಬಿಡುಗಡೆಯ ಸಮಾರಂಭಕ್ಕೆ ಇವರ ತಾಯಿ ಇವರ ಅಕ್ಕ ಶ್ರೀದೇವಿಯೊಡನೆ ಬೆಂಗಳೂರಿಗೆ ಬಂದಿದ್ದರು.

ಆದರೆ ಈ ಸಮಾರಂಭದಲ್ಲಿ ಈ ಕಾದಂಬರಿಗೆ ಸ್ಫೂರ್ತಿ ನೀಡಿದಂತಹ ತನ್ನಮ್ಮನಿಗೆ ಒಂದು ಪುಷ್ಪ ಮಾಲೆಯನ್ನು ಅರ್ಪಿಸಿ ಕೃತಜ್ಞತೆ ತಿಳಿಸಲು ಇಚ್ಛಿಸುತ್ತೇನೆ, ಎಂದು ಹೇಳಿ ವೇದಿಕೆಯಿಂದ ಕೆಳಗಿಳಿದು ಬಂದು, ಮುಂದಿನ ಸಾಲಿನಲ್ಲಿ ಕುಳಿತ ತನ್ನ ಅಮ್ಮನ ಕೊರಳಿಗೆ ಹೂವಿನ ಹಾರ ಹಾಕಿದಾಗ ಅವರ ತಾಯಿ ತುಂಬ ಖುಷಿಪಟ್ಟರು. ಆ ಕ್ಷಣವನ್ನು ಪ್ರತಿಭಾವಂತ ಯುವಮಿತ್ರ ಮಲ್ಲಿಕಾರ್ಜುನ ಕ್ಯಾಮರಾದಲ್ಲಿ ಸೆರೆಹಿಡಿದು ಫೋಟೋ ಕಳುಹಿಸಿದಾಗ ಅವರ ತಾಯಿ ಸಂತೋಷಗೊಂಡು ಜೋಪಾನವಾಗಿ ಇಟ್ಟುಕೊಂಡರು.

'ಯಾದ್ ವಶೇಮ್'ಗೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಾಗ ಜಮಖಂಡಿಗೆ ಹೋಗಿ ಪ್ರಶಸ್ತಿ ಪಡೆದು ಸೀದಾ ಮೈಸೂರಿಗೆ ಶಾಲು, ಗಂಧದಹಾರ, ಪ್ರಶಸ್ತಿ ಫಲಕವನ್ನು ನೇಮಿಚಂದ್ರ ಅವರು ತಂದಿದ್ದರು. "ಅಮ್ಮ ಕಾದಂಬರಿಯ ಅರ್ಧಭಾಗ ನೀನು ಹೇಳಿದ ಕತೆಗಳನ್ನೇ ಬರೆದಿದ್ದೇನೆ. ಇಗೋ ನಿನಗೆ ಅರ್ಧ ಪ್ರಶಸ್ತಿ" ಎಂದು ನಗೆಯಾಡಿ, ಅಮ್ಮನ ಕೊರಳಿಗೆ ಹಾರ ಹಾಕಿ, ಫಲಕ ಕೈಯಲ್ಲಿಟ್ಟಾಗ ಅಮ್ಮ ಬಾಯ್ತುಂಬಾ ನಕ್ಕು ಸಂತೋಷದಿಂದ ಹರಸಿದರು. ಕಾಲದಾಚೆಗೆ ಕೈಚಾಚಿ ನಿಲ್ಲಬಲ್ಲ ಸಂಬಂಧವಾಯಿತು ಎನ್ನುತ್ತಾರೆ ನೇಮಿಚಂದ್ರರವರು.

**ಪ್ರವಾಸ ಪ್ರೀತಿಗೆ ಪ್ರೇರಣೆ**

ಸಾವು ದೇಹವನ್ನಷ್ಟೇ ಕೊಂಡೊಯ್ಯುತ್ತದೆ. ವ್ಯಕ್ತಿಯ ನೆನಪುಗಳನ್ನಲ್ಲ. ಏಕೆಂದರೆ ಬದುಕಿನಾಚೆಗೂ ಬರಹಗಳು ಕೈಚಾಚುತ್ತವೆ, ಸಂವಾದಿಸುತ್ತವೆ ಎಂಬುದಾಗಿ ನೇಮಿಚಂದ್ರ ಅವರು ತಮ್ಮ ಅನುಭವವನ್ನೇ ಹಂಚಿಕೊಳ್ಳುತ್ತಾರೆ.

ಇವರ ತಂದೆ ಬರೆದ ಪುಸ್ತಕವಾದ "ಪ್ರವಾಸ ತೀರ್ಥ"ವನ್ನು ೧೯೫೫ರಲ್ಲಿ ಮುಂಬಯಿಗೆ ಭೇಟಿನೀಡಿ ಬರೆದಂತಹ ಪ್ರವಾಸ ಕಥನವಿದು. ಆದರೆ ಇಂಗ್ಲೆಂಡ್, ಯುರೋಪ್, ರಷಿಯಾ, ಉತ್ತರ ಮತ್ತು ದಕ್ಷಿಣ ಅಮೆರಿಕಗಳನ್ನು ಅಲೆದು ಬಂದಂತಹ ನೇಮಿಚಂದ್ರರವರು ಮುಂಬಯಿ ಪ್ರವಾಸ ಕಥನವನ್ನು ಏನು ಓದುವುದು ಎಂದು ಈ ಪುಸ್ತಕವನ್ನು ಓದಿರಲಿಲ್ಲ. ಆದರೆ ೨೦೦೪ ಡಿಸೆಂಬರ್ ತಿಂಗಳ ಒಂದು ಭಾನುವಾರದಂದು ನೇಮಿಚಂದ್ರ ಮತ್ತು ಅವರ ಮಗಳು ಮೇಘನಾ ಈ ಪುಸ್ತಕವನ್ನು ಕುಳಿತು ಓದಿದಾಗ ಅರ್ಧ ಶತಮಾನದ ಹಿಂದಿನ ಮುಂಬಯಿ ಇವರೆದುರಿಗೆ ತೆರೆದುಕೊಂಡದ್ದು ಆಶ್ಚರ್ಯವೇನಲ್ಲ.

ಇವರ ತಂದೆ ೧೯೫೫, ಡಿಸೆಂಬರ್ ತಿಂಗಳು ಮಂಡ್ಯದಲ್ಲಿ ಕಾಲೇಜು ಉಪನ್ಯಾಸಕರಾಗಿದ್ದ ಸಂದರ್ಭದಲ್ಲಿ ಮೈಸೂರಿನ ಅವರ ಸ್ನೇಹಿತರಾದ ಮುದ್ದಲಿಂಗಣ್ಣನವರ ಜೊತೆಯಲ್ಲಿ ಪ್ರವಾಸವನ್ನು ಕೈಗೊಂಡಿದ್ದರು.

ಇವರ ತಂದೆ ಈಗ ಇರಲಿಲ್ಲ. ಆದರೆ ತಂದೆಯ ಅನುಭವಗಳು. ಪ್ರವಾಸ ಪ್ರಿಯತೆ, ಪ್ರಕೃತಿ ಪ್ರೇಮ, ಪುಸ್ತಕದ ಪುಟಗಳಿಂದ ತಿಳಿದುಕೊಂಡು ದಶಕಗಳ ಆಚೆಗೆ ಕೈಚಾಚಿ ನಿಂತಿದ್ದ ಮಗಳನ್ನು, ಮೊಮ್ಮಗಳನ್ನು ತಲುಪಲು ಸಾಧ್ಯವಾಯಿತು. ಬಯಲುಸೀಮೆಯ ಬಡಹಳ್ಳಿಯಿಂದ ಬಂದ ಇವರ ತಂದೆ ಕಂಡಂತಹ ಮುಂಬಯಿ ಮಹಾನಗರ, ನಗರದಲ್ಲಿಯೇ ಹುಟ್ಟಿ ಬೆಳೆಯುತ್ತಿರುವ ನೇಮಿಚಂದ್ರರವರ ಮಗಳಿಗೆ ಹೇಗೆ ಕಾಣಬಹುದು ಎಂಬ ಕುತೂಹಲದಲ್ಲಿ ಇವರ ತಂದೆಯ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಅವರ ತಂದೆಯ ಅದೇ ಹಾದಿಯಲ್ಲಿ ಅರ್ಧ ಶತಮಾನದ ನಂತರ ಕಾಣಲು ಹೊರಡುತ್ತಾರೆ. ಇದು ಅವರ ಜೀವನದ ವಿಶೇಷ ಅನುಭವಗಳಲ್ಲಿ ಒಂದಾಗಿತ್ತು.

ಹೀಗೆ ನೇಮಿಚಂದ್ರ ಅವರು ತಮ್ಮ ಬಾಲ್ಯ ಜೀವನದಲ್ಲಿ ತಂದೆ-ತಾಯಿಯ ಅವರ ಅನುಭವ ಮತ್ತು ಪ್ರಭಾವ ಇವರ ಮೇಲೆ ಬಹಳಷ್ಟು ಬೀರಿದವು ಎಂದು ಹೇಳಬಹುದು. ಸುಮಾರು ಎರಡೂವರೆ ದಶಕಗಳ ಅಧ್ಯಯನ ಮತ್ತು ದೇಶವಿದೇಶಗಳ ಪ್ರವಾಸದಲ್ಲಿ, ವಿಜ್ಞಾನರಂಗದ ಮಹಿಳೆಯರನ್ನು, ವೈಮಾನಿಕ ರಂಗದ ಮಹಿಳೆಯರ ಬಗ್ಗೆ ಬಹಳಷ್ಟು ಮಾಹಿತಿ ಸಂಗ್ರಹಿಸಿ ನೇಮಿಚಂದ್ರ ಅವರು ನಮ್ಮ ಸ್ತ್ರೀ ಪರಂಪರೆಯನ್ನು ಪುನರ್-ಪರಿಚಯಿಸುವ ಯತ್ನ ಇವರ ಅಧ್ಯಯನ ಮತ್ತು ಬರಹದ ವಸ್ತುವಾಯಿತು. ಈ ಹಿನ್ನೆಲೆಯಲ್ಲಿ ಮಹಿಳಾ ವಿಜ್ಞಾನಿಗಳು, ಮಹಿಳಾ ಅನ್ವೇಷಕರು, ಮಹಿಳಾ ವೈದ್ಯರು, ಮಹಿಳಾ ವೈಮಾನಿಕರು, ನೊಬೆಲ್ ಪ್ರಶಸ್ತಿ ಪಡೆದ ಮಹಿಳಾ ವಿಜ್ಞಾನಿಗಳು, ನೊಬೆಲ್ ವಂಚಿತ ಮಹಿಳಾ ವಿಜ್ಞಾನಿಗಳು – ಈ ಎಲ್ಲ ಲೇಖನಗಳು, ಪುಸ್ತಕಗಳು ಹೊರಬಂದವು.

ಇವರ ಬರಹಗಳಿಗಾಗಿಯೇ ಸ್ವತಃ ಖರ್ಚಿನಲ್ಲಿ ಪ್ರವಾಸ ಕೈಗೊಂಡು ಮಾಹಿತಿಯನ್ನು ಕಲೆಹಾಕಲು ಬಹಳಷ್ಟು ಅಲೆದಾಡಿದರು. ಭಾರತದ ಮಹಿಳೆಯರಿಗೆ ವೈದ್ಯರಂಗದ ಬಾಗಿಲು ತೆರೆಸಿದ ಮೇರಿಶರ್ಲಿಯನ್ನು ಹುಡುಕಿಕೊಂಡು ಮೂರುಬಾರಿ ಮದ್ರಾಸ್‌ಗೆ ಹೋಗಿದ್ದರು. ಜಲಿಯನ್ ವಾಲ್‌ಬಾಗ್ ಹತ್ಯಾಕಾಂಡದಲ್ಲಿ ಹುತಾತ್ಮನಾದ ಪತಿಯ ಹೆಣಕ್ಕೆ ಹೆಗಲುಕೊಟ್ಟು ಹೊತ್ತು ತಂದ ಸ್ವಾಭಿಮಾನಿ ಮಹಿಳೆ ಅತ್ತರ್ ಕೌರ್ ಹುಡುಕಿಕೊಂಡು ಅಮೃತಸರಕ್ಕೆ ತಲುಪಿದರು. ಕೌಟುಂಬಿಕ ಕ್ರೌರ್ಯದಿಂದ ಜಿಗಿದು ಹೊರಬಂದು ನಲವತ್ತರ ವಯಸ್ಸಿನಲ್ಲಿ ವಿದ್ಯಾಭ್ಯಾಸ ಮಾಡಿ, ಲಾ ಓದಿ, ಸುಪ್ರಸಿದ್ಧ ನ್ಯಾಯವಾದಿಯಾದ ಫ್ಲೇವಿಯಾರ ಜೀವನ ಚರಿತ್ರೆಯನ್ನು ಪರಿಚಯಿಸಲು ಮುಂಬಯಿಗೆ ಮೂರ್ನಾಲ್ಕು ಬಾರಿ ಅಲೆದಾಡಿದರು. ಈ ಅಲೆದಾಟ ನೇಮಿಚಂದ್ರ ಅವರಿಗೆ ಬಲುಪ್ರಿಯವಾಗಿದೆ. ಈ ಎಲ್ಲ ಅನುಭವಗಳು ನೇಮಿಚಂದ್ರ

ಅವರ ಬರಹದ ವಸ್ತುವಾದವು. ಮಹಿಳಾ ಸಾಧಕಿಯರ ಪರಂಪರೆಯನ್ನು ಹುಡುಕಿ ಹೊರಟ ಇವರ ವೈಯಕ್ತಿಕ ಪ್ರವಾಸಗಳ ಅನುಭವವು ಮುಂದೆ 'ಪ್ರವಾಸ ಸಾಹಿತ್ಯ'ವಾಗಿಯೂ ಹೊರಬಂದಿತು.

ಇಂದು ನಮ್ಮೆದುರು ಎಲ್ಲಾ ಕ್ಷೇತ್ರಗಳಲ್ಲಿ ಬಹಳಷ್ಟು ಬಾಗಿಲುಗಳು ತೆರೆದಿವೆ. ಸಾಧನೆಯ ರಂಗ ಕೈಬೀಸಿ ಕರೆಯುತ್ತಿದೆ. ಈ ಎಲ್ಲ ಅವಕಾಶಗಳನ್ನು ನಮ್ಮ ಹೆಣ್ಣು ಮಕ್ಕಳು ಬಳಸಿಕೊಂಡು ತಮ್ಮ ಸಾಧನೆಯ ರಂಗಕ್ಕೆ, ಶಕ್ತ ಸ್ವಾವಲಂಬನೆಯ ಬದುಕಿಗೆ ಅವರನ್ನು ಆಹ್ವಾನಿಸುವ ಮುಖ್ಯ ಉದ್ದೇಶವನ್ನು ಇವರ ಪ್ರವಾಸ ಸಾಹಿತ್ಯದ ಮೂಲಕ ತಮ್ಮ ಆಸೆಯನ್ನು ವ್ಯಕ್ತಪಡಿಸುತ್ತಾರೆ.

**ನೇಮಿಚಂದ್ರ ಅವರ ವೈವಾಹಿಕ ಜೀವನಕ್ಕೆ ಸಂಬಂಧಿಸಿದ ವಿಚಾರ:**

ಅವರದು ಸುಂದರವಾದ ಸಂಸಾರ. ಪಂಜಾಬಿ ಕುಟುಂಬದವರಾದ ಹಾಗೂ ದೆಹಲಿಯ ಐಐಟಿಯಿಂದ ಬಿ.ಟೆಕ್ ಪದವಿಯನ್ನು ಪಡೆದ ಇವರ ಪತಿ ಕೀರ್ತಿ ಮಲ್ಹೋತ್ರ ಅವರನ್ನು ಮದುವೆಯಾದರು. ಇವರಿಗೆ ಮೇಘ ಎನ್ನುವ ಮಗಳಿದ್ದಾಳೆ. ಅವರ ಮಗಳು ಕೂಡ ಇಂಜಿನಿಯರಿಂಗ್ ಪದವೀಧರೆ.

ದೇಶ ಇಬ್ಭಾಗವಾಗಿ ಲಾಹೋರಿನಿಂದ ನೇಮಿಚಂದ್ರ ಅವರ ಅತ್ತೆ ಮಾವನವರ ಕುಟುಂಬಗಳು ಹಳೆಯ ದಿಲ್ಲಿಯಲ್ಲಿ ನಿರಾಶ್ರಿತರಾಗಿ ನೆಲೆಸಿದ್ದರು. ದೆಹಲಿಯ ಅರಾಕಣಾ ರಸ್ತೆಯಲ್ಲಿರುವ "ನವಶಕ್ತಿ ವಿದ್ಯಾ ಮಂದಿರ್" ಈ ಶಾಲೆಯಲ್ಲಿ ಕೀರ್ತಿಯವರು ವಿದ್ಯಾಭ್ಯಾಸ ಮಾಡಿದರು. ಕೀರ್ತಿಯವರಿಗೆ ಒಬ್ಬರು ಅಕ್ಕ ಮತ್ತು ಒಬ್ಬ ತಮ್ಮ ಇದ್ದಾರೆ.

ಲಾಹೋರಿನಿಂದ ನಿರಾಶ್ರಿತರಾಗಿ ಬಂದಾಗ ಮೊದಲು ಅವರನ್ನು ನಿರಾಶ್ರಿತರ ಕ್ಯಾಂಪ್‌ಗಳಲ್ಲಿ ಉಳಿಸಿದ್ದರು. ನಂತರದ ಸಮಯದಲ್ಲಿ ಇದೇ ಪಹಾರ್‌ಗಾಂಜ್‌ನ ಮುಖ್ಯ ಬೀದಿಗಳಿಂದ ಒಳಗಲ್ಲಿಯ ಸಣ್ಣ ಮನೆಯಲ್ಲಿ ಅವರು ನೆಲೆಸಿದ್ದರು. ಹಿಂದೆ ನಿರಾಶ್ರಿತರು ಬಂದು ನೆಲೆಸಿದ ಅಂತಹುದೇ ಒಂದು ಮನೆಯಲ್ಲಿ ಕೀರ್ತಿಯವರ ದೊಡ್ಡಮ್ಮ ನಂತರದ ವರ್ಷಗಳಲ್ಲಿ ವಾಸಿಸತೊಡಗಿದರು. ದೊಡ್ಡಮ್ಮನ ಮನೆ ತನ್ನ ಶತಮಾನದ ಹಿಂದಿನ ರೂಪದಲ್ಲಿ ಇತಿಹಾಸದ ಕತೆ ಹೇಳಲೆಂದು ಇವರಿಗಾಗಿ ಕಾದಿತ್ತು. ಏಕೆಂದರೆ ನಿಜವಾಗಿ ತಾರಸಿ ಕುಸಿದಿತ್ತು, ಬಾಗಿಲು ಮುರಿದಿತ್ತು. ಆದರೆ ಇನ್ನೂ ನೆಲಸಮವಾಗಿರಲಿಲ್ಲ. ಮಣ್ಣಿನ ಗೋಡೆಗಳ ಸಣ್ಣ ಇಕ್ಕಟ್ಟಿನ ಮನೆಗಳಾಗಿದ್ದವು. ಇಡೀ ವಠಾರದಲ್ಲಿದ್ದ ಮೂರು ಶೌಚಲಯಗಳು ಹಾಗೆಯೇ ಉಳಿದು ಬಂದಿದ್ದವು. ಈ ವಠಾರದ ಕೆಲವು ಕುಸಿಯದ ಪುರಾತನ ಮನೆಗಳಲ್ಲಿ ಬದುಕು ಬಡತನದಲ್ಲಿ ಬಳಲಿದ ಜನ ಇನ್ನೂ ವಾಸಿಸುತ್ತಿದ್ದಾರೆ.

ಕೀರ್ತಿಯವರ ಅಪ್ಪ ರೈಲ್ವೆ ಇಲಾಖೆಯಲ್ಲಿ ಅತ್ಯಂತ ಕಡಿಮೆ ಸಂಬಳದ ಕೆಲಸದಲ್ಲಿದ್ದರು. ದಿಲ್ಲಿಗೆ ವರ್ಗವಾಗಿತ್ತು. ಇಲ್ಲಿ 'ಪೃಥ್ವಿರಾಜ್ ಚೌಹಾನ್ ಕಿಲಾದೊಳಗೆ ನಮ್ಮ ಪುಟ್ಟ ಮನೆಯಿತ್ತು' ಕೀರ್ತಿಯವರು ಹೇಳುತ್ತಾರೆ.

ದೆಹಲಿಯ ನಬಿಕರೀಮ್ ಗಲ್ಲಿಯಲ್ಲಿ ೧೨ನೇ ಶತಮಾನದ ಕೋಟೆಯ ಗೋಡೆಗೆ ಅಂಟಿದ ೨೦ನೇ ಶತಮಾನದ ಮನೆಗಳನ್ನು ಕಾಣಬಹುದು. ಕೇವಲ ಮೂರುನಾಲ್ಕು ಅಡಿ ಅಗಲವಿದ್ದ, ಅತ್ತ ಕಡೆಯಿಂದ ಬಂದವರಿಗೆ ದಾರಿಬಿಟ್ಟು ಪಕ್ಕಕ್ಕೆ ಸರಿದು ಅವರು ಹೋದಮೇಲೆ ಇವರು ಹೋಗಬೇಕಾಗಿತ್ತು. ಒತ್ತಿ ಕಟ್ಟೆ ಏರಿ ನಿಂತ ಎದುರು ಬದರು ಮನೆಗಳ ಮೊದಲು ಮಹಡಿಯ ಗೋಡೆಗಳ ನಡುವೆ ಕೈಚಾಚುವಷ್ಟು ಮಾತ್ರ ಅಂತರ ಈ ಕತ್ತಲ ಗಲ್ಲಿಯ ಕೊನೆಯಲ್ಲಿ ಒಂದಿಷ್ಟು ತೆರೆದ ಸಣ್ಣ ಅಂಗಳವಿತ್ತು. ನಾಲ್ಕುವರೆ ದಶಕಗಳ ನಂತರವೂ ಆ ಮನೆ ಹಾಗೆಯೇ ಉಳಿದಿದೆ. ಇವರು ಮನೆಗೆ ಕೊಡುತ್ತಿದ್ದ ಬಾಡಿಗೆ ೪೦ ರೂಪಾಯಿಗಳು ೪೫ಕ್ಕೆ ಏರಿಸುವಂತೆ ತಾಕೀತು ಮಾಡಿದಾಗ, ಮಾಲೀಕನೊಡನೆ 'ಸಾಧ್ಯವೇ ಇಲ್ಲ' ಎಂದು ಕೀರ್ತಿಯವರ ತಂದೆ ಕಿತ್ತಾಡಿದ್ದರು. ೫ ಪೈಸೆಗೆ ಸಿಗುತ್ತಿದ್ದ ಚಹಾಪುಡಿ ತರಲೂ ಹಿಂದೆ ಮುಂದೆ ಯೋಚಿಸಬೇಕಿದ್ದ ಕಾಲವಾಗಿತ್ತು. ಆದರೆ ಈ ತಾಣದಲ್ಲಿ, ಈ ಪುಟ್ಟ ಮನೆಯಲ್ಲಿ ನೇಮಿಚಂದ್ರ ಅವರ ಮಾವನವರು ತಮ್ಮ ಮೂರೂ ಮಕ್ಕಳನ್ನು ಅಗಾಧವಾಗಿ ಓದಿಸುವ ಆಕಾಂಕ್ಷೆ ಹೊಂದಿ ಮುಂದುವರೆದ ಕಾರಣ ಅವರ ಪರಿಶ್ರಮಕ್ಕೆ ಫಲಕೊಟ್ಟಿತ್ತು. ಕೀರ್ತಿ ಅವರ ಅಕ್ಕ ಗಣಿತದಲ್ಲಿ ಡಾಕ್ಟರೇಟ್ ಪದವಿಯನ್ನು, ಕೀರ್ತಿಯವರು ದಿಲ್ಲಿಯ ಐಐಟಿ ಪದವಿಯನ್ನು ತಮ್ಮ ಅಶೋಕ್ ವಾರ್ಧಾದಲ್ಲಿ ಎಂ.ಡಿ. ಪದವಿಯನ್ನು ಪಡೆದರು. ಕೀರ್ತಿಯವರು ಬೆಂಗಳೂರಿನ ಇಂಜಿನಿಯರಿಂಗ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆಯನ್ನು ಸಲ್ಲಿಸಿ ಈಗ ನಿವೃತ್ತಿ ಜೀವನವನ್ನು ನಡೆಸುತ್ತಿದ್ದಾರೆ.

**ಬರಹಗಳ ಪರಿಚಯ**

ನೇಮಿಚಂದ್ರರವರು ಕಡಿಮೆ ವಯಸ್ಸಿನಲ್ಲಿಯೇ ಬರವಣಿಗೆಯನ್ನು ಪ್ರಾರಂಭಿಸಿದ್ದರು. ನೇಮಿಚಂದ್ರರ ತಂದೆ ವೃತ್ತಿಯಿಂದ ಕನ್ನಡ ಪ್ರಾಧ್ಯಾಪಕರು, ಪ್ರವೃತ್ತಿಯಿಂದ ಲೇಖಕರು. ಇವರ ಪ್ರಭಾವ ಮಗಳಾದ ನೇಮಿಚಂದ್ರರ ಮೇಲಾಯಿತು. ಇನ್ನು ಇವರ ತಾಯಿ ಗೃಹಿಣಿಯಾಗಿದ್ದರೂ ಮಗಳು ಚೆನ್ನಾಗಿ ಓದಿ, ರ್‍ಯಾಂಕ್ ಬರಬೇಕೆಂದು ಸದಾ ಹುರಿದುಂಬಿಸುತ್ತಿದ್ದರು. ಇವರುಗಳ ಪ್ರೋತ್ಸಾಹದಿಂದ ನೇಮಿಚಂದ್ರ ಅವರು ವಿಜ್ಞಾನ ಹಾಗೂ ಸಾಹಿತ್ಯ ಎರಡು ಕ್ಷೇತ್ರಗಳಲ್ಲೂ ತಮ್ಮನ್ನು ತಾವು ಗುರುತಿಸಿಕೊಳ್ಳಲು ಸಾಧ್ಯವಾಯಿತು. ಬಾಲ್ಯದಿಂದ ವಿವಾಹವಾಗುವವರೆಗೆ ಅವರಿಗೆ ತಂದೆತಾಯಿಗಳು ಸಾಹಿತ್ಯ ರಚನೆಗೆ ತೋರಿಸಿದ ಆಸಕ್ತಿ ಒಂದೆಡೆಯಾದರೆ, ವಿವಾಹ ನಂತರದಲ್ಲಿ ಅವರ ಪತಿ ಡಾ. ಕೀರ್ತಿ ಮಲ್ಹೋತ್ರರವರು ನೀಡಿದ ಸಹಕಾರ ಇನ್ನೂ ಹೆಚ್ಚಿನ ರೀತಿಯಲ್ಲಿ ತೆರೆದು ತೋರಿಸಲು ಪ್ರೇರಣೆಯಾಯಿತು.

ಮಗಳು ಮೇಘಳೊಂದಿಗೆ ವೃತ್ತಿಯಲ್ಲೂ ತೃಪ್ತಿ ಹೊಂದಿರುವ ಇವರಿಗೆ ಬರವಣಿಗೆಯೆಂಬುದು ಸಂತೃಪ್ತಿ ಕೊಡುವ ಅಭಿವ್ಯಕ್ತಿ ಮಾಧ್ಯಮವಾಗಿದೆ.

ಮಹಿಳೆಯರು ಇಂಜಿನಿಯರಿಂಗ್ ಪದವಿಯನ್ನು ಓದಲು ಅತಿ ಅಪರೂಪವೆನಿಸಿದ್ದ ಆ ಕಾಲದಲ್ಲಿ ನಿಜಕ್ಕೂ ನೇಮಿಚಂದ್ರ ಅವರು ಇಂಜಿನಿಯರಿಂಗ್ ಓದಲು ತೀರ್ಮಾನಿಸಿದ್ದಕ್ಕೆ ತುಂಬಾ ವಿಶೇಷವೆನಿಸುತ್ತದೆ ಮತ್ತು ಹೆಚ್ಚಾಗಿ ಆ ಕಾಲದಲ್ಲಿ ಮಹಿಳೆಯರಿಗೆ ಓದಲು ನಿಷೇಧವಿದ್ದುದರಿಂದ ಅವರ ವೃತ್ತಿ ಜೀವನದ ಆಯ್ಕೆಗೆ ತಡೆಯಾಯಿತು. ಆಗ ಮರಗೆಲಸ, ಕುಲುಮೆ ಕೆಲಸಗಳು, ಯಂತ್ರಗಳ ಜೊತೆ ಗಂಡಸರು ಮಾಡುವ ಕೆಲಸಗಳಾಗಿದ್ದವು. ಆದರೆ ನೇಮಿಚಂದ್ರರವರು ದೃಢ ನಿಶ್ಚಯಿಸಿದಾಗ ಅವರು ವಿಶ್ವವಿದ್ಯಾನಿಲಯಕ್ಕೆ ರ್‍ಯಾಂಕ್ ಬಂದಿದ್ದರು. ಅಂದಿನ ಕಾಲದಲ್ಲಿ ಜನರು ಇಂಜಿನಿಯರಿಂಗ್‌ನ್ನು ಅತಿ ಪರಿಶ್ರಮದಿಂದ ಮಾಡುವ ಕೆಲಸವೆಂದು ನಂಬಿದ್ದರು. ಈ ಕಾರಣಕ್ಕಾಗಿ ಹೆಂಗಸರನ್ನು ಈ ಪದವಿಯಿಂದ ದೂರವಿಟ್ಟಿದ್ದರು. ಇಂದು ಒಟ್ಟಾರೆಯಾಗಿ ಚಿತ್ರಣವೇ ಬದಲಾಗಿದೆ.

ನೇಮಿಚಂದ್ರ ಅವರಿಗೆ ಅವರ ಎಳೆಯ ವಯಸ್ಸಿನಲ್ಲಿ ಎಲ್ಲಿಲ್ಲದ ರೀತಿ ಪ್ರಭಾವ ಬೀರಿದ ಪುಸ್ತಕವೆಂದರೆ ಮೇರಿಕ್ಯೂರಿಯವರ ಅಸಾಧಾರಣ ಬದುಕನ್ನು ಕುರಿತಾದ ಪುಸ್ತಕ. ಇದರಿಂದ ಪ್ರೇರಿತರಾಗಿ ವಿಜ್ಞಾನ-ತಂತ್ರಜ್ಞಾನದ ರಂಗವನ್ನು ಆಯ್ದುಕೊಳ್ಳುವ ಹಿನ್ನೆಲೆಯಲ್ಲಿ ನೇಮಿಚಂದ್ರ ಅವರಿಗೆ ಸೂಕ್ಷ್ಮವಾಗಿ ಸುಪ್ತಪ್ರಜ್ಞೆಯಲ್ಲಿ ಇವರ ಬದುಕು ಪ್ರೇರೇಪಿಸಿದೆ ಎಂದು ಹೇಳಬಹುದು.

ಮೇರಿಕ್ಯೂರಿ ಬಗ್ಗೆ ಹೇಳುತ್ತಾ ಮೇರಿಗೆಂದೂ ವಿವಾಹ-ವಿಜ್ಞಾನಗಳ ನಡುವೆ ಆಯ್ದುಕೊಳ್ಳುವ ವಿಚಾರವೇ ಬಂದಿರಲಿಲ್ಲ. ಅವಳಲ್ಲಿ ಶಕ್ತಿ ಇತ್ತು, ಛಲವಿತ್ತು, ವಿವಾಹವನ್ನು, ತಾಯ್ತನವನ್ನು, ವಿಜ್ಞಾನವನ್ನು ಎಲ್ಲವನ್ನೂ ತನ್ನ ಪ್ರೀತಿಯಿಂದ, ತೀವ್ರತೆಯಿಂದ ನಿಭಾಯಿಸಿ ಗೆಲ್ಲಬಲ್ಲ ಆತ್ಮವಿಶ್ವಾಸವಿತ್ತು. ಮೇರಿಯ ವ್ಯಕ್ತಿತ್ವ ಪತ್ನಿಯಾಗಿ, ಮಾತೆಯಾಗಿ, ವಿಜ್ಞಾನಿಯಾಗಿ, ಪ್ರಾಧ್ಯಾಪಕಳಾಗಿ ಹರಿದು ಹಂಚಿಹೋಗಲಿಲ್ಲ. ಆ ಎಲ್ಲಾ ಪಾತ್ರಗಳು ಪರಸ್ಪರ ಪೂರಕವಾದ ಘನ ಚಿತ್ರದಂತಿದ್ದಳು ಮೇರಿ.

ಈ ಎಲ್ಲ ಕೆಲಸ, ಸಂಶೋಧನೆಯ ನಡುವೆಯೂ, ಹಗಲಿರುಳ ಪರಿಶ್ರಮದಲ್ಲೂ ಮೇರಿಗೆ ಸಮಯವಿತ್ತು. ಹತ್ತು ತಿಂಗಳ ಐರೀನಳ ದಿನದಿನದ ತೂಕವನ್ನು, ಇಟ್ಟ ಒಂದೊಂದು ಹೆಜ್ಜೆಯನ್ನೂ, ಬೊಚ್ಚು ಬಾಯಿ ಬಿಟ್ಟು ನಕ್ಕದ್ದನ್ನೂ, ತೊದಲು ನುಡಿದದ್ದನ್ನು, ಹಲ್ಲು ಮೊಳೆತದ್ದನ್ನು ಹಂಚಿಕೊಳ್ಳಲು, ತನ್ನ ದಿನಚರಿಯಲ್ಲಿ ದಾಖಲಿಸಿದಳು. ಜೊತೆಯಲ್ಲಿಯೇ ದಿನದಿನದ ಬದುಕಿನ ಹೋರಾಟವಿತ್ತು. ಕಾಸುಕಾಸಿಗೂ ಲೆಕ್ಕ ಇಡಬೇಕಾದ ಆರ್ಥಿಕ ಮುಗ್ಗಟ್ಟಿತ್ತು. ಆದರೆ ಮೇರಿ ಅಷ್ಟರಲ್ಲೂ ತೂಗಿಸಬಲ್ಲ ಕಲೆ ಕಲಿತಿದ್ದಳು.

ಹಿಡಿದ ಯಾವ ಕೆಲಸವನ್ನೂ ಅರೆಬರೆ ಮಾಡದ ಈ ಹೆಣ್ಣು, ಶ್ರೇಷ್ಠ ವಿಜ್ಞಾನಿಯಂತೆಯೇ, ಮಹಾಮಾತೆಯೂ ಆದಳು. ಸಮಯವಿತ್ತು ಮೇರಿಗೆ ತನ್ನ ಮಕ್ಕಳ ಬದುಕನ್ನು ರೂಪಿಸಲು, ತನ್ನ ಹೆಣ್ಣು ಮಕ್ಕಳನ್ನು ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ಸಬಲರಾಗಿಸುವ ಸಮಯ. ಮೇರಿಯ ಬಳಿ ಎಲ್ಲಕ್ಕೂ ಸಮಯವಿತ್ತು.

ಬದುಕಿನ ಈ ಹಂತದಲ್ಲಿ ನೇಮಿಚಂದ್ರ ಅವರಿಗೆ ಮೇರಿ ಕ್ಯೂರಿಯ ಜೀವನ ಮತ್ತೂ ಪ್ರಸ್ತುತವೆನಿಸಿತ್ತು. 'ಸಮಯವಿಲ್ಲ' ಎಂಬ ಪದಕ್ಕೆ ಅರ್ಥವೇ ಉಳಿದಿರಲಿಲ್ಲ. ಇವರಿಗೆ ಮತ್ತೊಮ್ಮೆ ಮೇರಿಕ್ಯೂರಿ ಸ್ಫೂರ್ತಿಯಾಗಿದ್ದಳು. ಇದರ ಹಿನ್ನೆಲೆಯಾಗಿ ನೇಮಿಚಂದ್ರ ಅವರು 'ಬೆಳಕಿನೊಂದು ಕಿರಣ ಮೇರಿ ಕ್ಯೂರಿ' ಹೃದಯದಿಂದ ಪುಸ್ತಕವನ್ನು ಬರೆಯುತ್ತಾರೆ. ಇವರಿಗೆ ಬದುಕಿನುದ್ದಕ್ಕೂ ಪ್ರಭಾವ ಬೀರಿದ ಮಹಿಳೆಯಾಗಿ ಮೇರಿಕ್ಯೂರಿ ಕಂಡುಬರುತ್ತಾರೆ.

ನೇಮಿಚಂದ್ರರವರು ವಿದ್ಯಾರ್ಥಿ ಜೀವನದಲ್ಲಿ ವಿಜ್ಞಾನವನ್ನೇ ಪ್ರಮುಖ ಕ್ಷೇತ್ರವಾಗಿರಿಸಿಕೊಂಡಿದ್ದರು. ಈಗ ಕನ್ನಡದ ಬಗ್ಗೆ ವಿಶೇಷ ಆಸಕ್ತಿಯನ್ನು ಬೆಳೆಸಿಕೊಂಡಿದ್ದಾರೆ ಎಂದೇ ಹೇಳಬಹುದು. ಒಮ್ಮೆ ಅವರು ಮೈಸೂರಿನ ಎನ್.ಐ.ಇ. ಕಾಲೇಜಿನಲ್ಲಿ ಬಿ.ಇ. ಓದುತ್ತಿರುವ ಸಂದರ್ಭದಲ್ಲಿ ಕಾಲೇಜಿನಲ್ಲಿದ್ದ 'ಕನ್ನಡ ಸಂಘ' ಮುಚ್ಚಿಹೋಗಿರುವುದಕ್ಕೆ ವಿಷಾದ ವ್ಯಕ್ತಪಡಿಸಿ, ಮತ್ತೆ ಕನ್ನಡ ಸಂಘವನ್ನು ಪುನರ್ ಸ್ಥಾಪಿಸಿ ಕಾಲೇಜಿನಲ್ಲಿ ಕನ್ನಡ ಪರ ಚಟುವಟಿಕೆಗಳು ನಡೆಯಲು ಅವಕಾಶ ಮಾಡಿಕೊಟ್ಟರು.

ನೇಮಿಚಂದ್ರ ಅವರು ಹಿರಿದಾದ, ಜವಾಬ್ದಾರಿಯುತವಾದಂತಹ ವೃತ್ತಿಯಲ್ಲಿದ್ದರೂ ಪ್ರವೃತ್ತಿಯಲ್ಲಿ ಹಿಂಜರಿದವರಲ್ಲ ಎಂಬುದನ್ನು ಇವರು ರಚಿಸಿರುವ ಕೃತಿಗಳು ಸಾಕ್ಷಿ ನುಡಿಯುತ್ತದೆ. ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳು ಇವರ ಅಭಿವ್ಯಕ್ತಿಯ ಮಾಧ್ಯಮಗಳಾಗಿವೆ. ಬಹುಮುಖ ವ್ಯಕ್ತಿತ್ವದ ನೇಮಿಚಂದ್ರ ಅವರ ಕೃತಿಗಳು ಒಂದಕ್ಕಿಂತ ಒಂದು ಭಿನ್ನ. ಕಥೆ, ಕಾದಂಬರಿ, ಜೀವನ ಚಿತ್ರ, ಪ್ರವಾಸ ಕಥನ, ಸಂಪಾದನೆ, ಅನುವಾದ, ಸಮಕಾಲೀನ ಚಿಂತನೆ, ಸಾಹಿತ್ಯ ಮತ್ತು ವಿಜ್ಞಾನದ ಅಂತರಶಿಸ್ತೀಯ ಅಧ್ಯಯನ – ಹೀಗೆ ಅವರ ಆಸಕ್ತಿಯ ವಿಷಯಗಳು ಹಲವು. ಅವರ ಒಟ್ಟು ಕೃತಿಗಳನ್ನೂ ಹೀಗೆ ಹೆಸರಿಸಬಹುದು.

**ಪ್ರಕಟಿತ ಕೃತಿಗಳು : ೨೭**

೧. ನಮ್ಮ ಕನಸುಗಳಲ್ಲಿ ನೀವಿದ್ದೀರಿ (ಕಥಾಸಂಕಲನ)

೨. ಬೆಳಗೆರೆ ಜಾನಕಮ್ಮ ಬದುಕು-ಬರಹ (ಸಂಪಾದಿತ)

೩. ಮತ್ತೆ ಬರೆದ ಕತೆಗಳು (ಕಥಾಸಂಕಲನ)

೪. ನೋವಿಗದ್ದಿದ ಕುಂಚ (ಪ್ರಸಿದ್ಧ ಚಿತ್ರಕಾರ ವ್ಯಾನ್ ಗೋನ ಜೀವನ ಚಿತ್ರ)

೫. ಸಾಹಿತ್ಯ ಮತ್ತು ವಿಜ್ಞಾನ (ಅಂತರ್ ಶಿಸ್ತೀಯ ಅಧ್ಯಯನ)

೬. ಬೆಳಕಿನೊಂದು ಕಿರಣ – ಮೇರಿ ಕ್ಯೂರಿ (ಜೀವನ ಚರಿತ್ರೆ)

೭. ಥಾಮಸ್ ಆಲ್ವಾ ಎಡಿಸನ್ (ಜೀವನ ಚರಿತ್ರೆ)

೮. ನಿಮ್ಮ ಮನೆಗೊಂದು ಕಂಪ್ಯೂಟರ್

೯. ಎಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ಸ್

೧೦. ನನ್ನ ಕತೆ..... ನಮ್ಮ ಕತೆ (ಅನುವಾದ)

೧೧. ಒಂದು ಕನಸಿನ ಪಯಣ (ಪ್ರವಾಸ ಕಥನ)

೧೨. ನೊಬೆಲ್ ಪ್ರಶಸ್ತಿ ವಿಜೇತ ಮಹಿಳಾ ವಿಜ್ಞಾನಿಗಳು

೧೩. ನ್ಯಾಯಕ್ಕಾಗಿ ಕಾದ ಭಾಂವ್ರಿ ದೇವಿ

೧೪. ಒಂದು ಶ್ಯಾಮಲ ಸಂಜೆ (ಕಥಾಸಂಕಲನ)

೧೫. ಮಹಿಳಾ ಅಧ್ಯಯನ

೧೬. ನೇಮಿಚಂದ್ರರ ಕತೆಗಳು (ಇಲ್ಲಿಯವರೆಗಿನ ಕತೆಗಳು)

೧೭. ಪೆರುವಿನ ಪವಿತ್ರ ಕಣಿವೆಯಲ್ಲಿ (ಪ್ರವಾಸ ಸಾಹಿತ್ಯ)

೧೮. ಬದುಕು ಬದಲಿಸಬಹುದು (ಅಂಕಣ ಸಂಗ್ರಹ)

೧೯. ಬೆಳಕು ತಂದ ಜೀವ – ಡಾ. ಈಡಾ ಸ್ಕಡರ್ (ಜೀವನ ಚಿತ್ರ)

೨೦. ಮಹಿಳಾ ಲೋಕ (ಸಂಪಾದಿತ)

೨೧. ದುಡಿವ ಹಾದಿಯಲ್ಲಿ ಜೊತೆಯಾಗಿ (ದುಡಿದ ದಂಪತಿಗಳಿಗಾಗಿ)

೨೨. ವಿಜ್ಞಾನ ಸಾಹಿತ್ಯ ೨೦೦೧ (ಸಂಪಾದಿತ)

೨೩. ಯಾದ್ ವಶೇಮ್ (ಕಾದಂಬರಿ)

೨೪. ಮಹಿಳಾ ವಿಜ್ಞಾನಿಗಳು

೨೫. ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು

೨೬. ಜೇನ್ ಗುಡಾಲ್ (ಜೀವನ ಚಿತ್ರ)

೨೭. ಗುಬ್ಬಿಯ ಕರೆದರು ಮನೆಯಂಗಳಕೆ–ಮೊಹಮ್ಮದ್ ದಿಲಾವರ್ (ಜೀವನಚಿತ್ರ)

**ಬರಲಿರುವ ಪುಸ್ತಕಗಳು**

೧. ಸಾವೇ, ಬರುವುದಿದ್ದರೆ ನಾಳೆ ಬಾ (ಅಂಕಣ ಬರಹ)

೨. ಸೋಲೆಂಬುದು ಅಲ್ಪವಿರಾಮ (ಅಂಕಣ ಬರಹ)

ವಿಜ್ಞಾನ, ಸಾಹಿತ್ಯ, ಮಹಿಳಾ ಅಧ್ಯಯನ ಮತ್ತು ಪ್ರವಾಸ ನೇಮಿಚಂದ್ರರ ಮುಖ್ಯ ಆಸಕ್ತಿಯ ವಿಷಯಗಳು. ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿ, 'ಅಚಲಾ' ಮಹಿಳಾ ಅಧ್ಯಯನ ಮಾಸಪತ್ರಿಕೆಯ ಸಂಪಾದಕೀಯ ಮಂಡಲಿಯ ಸದಸ್ಯೆಯಾಗಿ,

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, 'ನೆರವು' ಹಿತರಕ್ಷಣಾ ವೇದಿಕೆಗಳ ನಿಕಟ ಸಂಪರ್ಕ ಮತ್ತು ಒಡನಾಟ ಇರಿಸಿಕೊಂಡಿದ್ದಾರೆ. ಇವರ ವಿಜ್ಞಾನ ಸಾಹಿತ್ಯ ಹಾಗೂ ಮಹಿಳಾ ಅಧ್ಯಯನ ಕುರಿತಂತೆ ಹಲವಾರು ಲೇಖನಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿತವಾಗಿ ಹೆಸರು ಗಳಿಸಿವೆ.

'ನಮ್ಮ ಕನಸುಗಳಲ್ಲಿ ನೀವಿದ್ದೀರಿ' (೧೯೭೫) ಕಥಾಸಂಕಲನದ ಮೂಲಕ ಕನ್ನಡ ಸಾಹಿತ್ಯ ಲೋಕವನ್ನು ಪ್ರವೇಶಿಸಿದ ಇವರು, ಈವರೆಗೂ ಐದು ಕಥಾಸಂಕಲನ ಗಳನ್ನು ಪ್ರಕಟಿಸಿದ್ದಾರೆ. ೨೦೧೧ರಲ್ಲಿ ಹೊರಬಂದ 'ನೇಮಿಚಂದ್ರ ಕತೆಗಳು' ಎಂಬ ಸಮಗ್ರ ಕಥಾಸಂಕಲನದಲ್ಲಿ ತಮ್ಮ ಬರಹದ ಹಿನ್ನೆಲೆಯನ್ನು ಕುರಿತು ಹೇಳಿಕೊಂಡ ಅವರ ಮಾತುಗಳು ಇಂತಿವೆ:

"ನಾನು ಯಾವಾಗ ಬರೆಯಲು ಆರಂಭಿಸಿದೆ ನೆನಪಿಲ್ಲ. ಹೈಸ್ಕೂಲು, ಪಿ.ಯು.ಸಿ. ಹಂತದಲ್ಲಿ ಅವು ಪ್ರಕಟವಾಗತೊಡಗಿದವು. ಹೇರಿದ್ದ ಮಡಿವಂತಿಕೆಯನ್ನು ಬಾಲ್ಯದಲ್ಲಿ ಹೊತ್ತವಳು. ಅಂಜುತ್ತಾ, ಅಳುಕುತ್ತಾ ಬರೆಯಲು ಪ್ರಾರಂಭಿಸಿದ್ದೆ. 'ಹೆಣ್ತನಕ್ಕೆ' ಅಂಟಿಸಿದ್ದ ಅಡ್ಡಿ ಆತಂಕಗಳ ನಡುವೆಯೇ ಬರೆಯತೊಡಗಿದ್ದೆ. ಭಯ, ಸಂಕೋಚ ಮುಜುಗರಗಳನ್ನು ಬದಿಗಿಟ್ಟು ನನಗನಿಸಿದ್ದನ್ನು, ಅನಿಸಿದಂತೆ ಬರೆಯ ಹೊರಟದ್ದು, ಬಿ.ಇ. ಮುಗಿಸಿ ಸಂಶೋಧನೆಗೆಂದು ಬೆಂಗಳೂರಿಗೆ ಟಾಟಾ ಇನ್‌ಸ್ಟಿಟ್ಯೂಟ್‌ಗೆ ಬಂದಾಗ ಅವಲಂಬನೆಯ ಅಧ್ಯಾಯ ಮುಗಿದಿತ್ತು. ಸ್ವತಂತ್ರ ವಾತಾವರಣದಲ್ಲಿ ಆರ್ಥಿಕ ಸ್ವಾವಲಂಬನೆಯಲ್ಲಿ ನನ್ನ ಭಾವನೆಗಳು ಹೊರಬಿದ್ದವು. "ಪ್ರೀತಿ" ಎಂಬ ಪದವನ್ನು ಬಳಸಲೂ ಹಿಂಜರಿದ ಹುಡುಗಿ ಪ್ರೀತಿಯ ಸುತ್ತ ಕತೆ ಹೆಣೆದಳು".[೧]

'ನಮ್ಮ ಕನಸುಗಳಲ್ಲಿ ನೀವಿದ್ದೀರಿ' ಸಂಕಲನದಲ್ಲಿ ಒಟ್ಟು ಎಂಟು ಕತೆಗಳಿವೆ. ಇವುಗಳಲ್ಲಿ ತೆರೆಗಳು ಸರಿದವು, ತ್ರಿಕೋನದಾಚೆಗೆ, ಕೆಂಪು ಕಲಕಿದ ನೀರು – ಈ ಸಂಗ್ರಹದ ಒಳ್ಳೆಯ ಕತೆಗಳಾಗಿವೆ. ಈ ಸಂಕಲನದ ಕತೆಗಳಲ್ಲೆಲ್ಲಾ ಸ್ತ್ರೀಮುಕ್ತಿ ಒಂದು ಘೋಷಣೆಯಾಗಿ ವಿಜೃಂಭಿಸದೆ ವಾಸ್ತವದ ಒರೆಗೆ ಹಚ್ಚಿದ ಮಾನವೀಯ ಸಾಧ್ಯತೆಯಾಗಿ ಬರುತ್ತದೆ. ಪ್ರಸಿದ್ಧ ಸಾಹಿತಿ, ವಿಮರ್ಶಕ ಜಿ.ಎಸ್.ಅಮೂರ್‌ರವರು ಈ ಕಥಾಸಂಕಲನವನ್ನು ಕುರಿತು "ಹಗುರವಾದ ಕನಸುಗಾರಿಕೆ ಅಥವಾ ತೀವ್ರವಾದ ಪುರುಷ ದ್ವೇಷ ಇಂತಹ ವೈಪರೀತ್ಯಗಳಿಂದ ಮುಕ್ತರಾಗಿ ಕೇವಲ ಅನುಭವದ ಸಾಚಾತನವನ್ನೇ ನಂಬಿ ಸಾಹಿತ್ಯ ರಚನೆಗೆ ಕೈಹಾಕಿರುವ ನೇಮಿಚಂದ್ರರ ಈ ಸಂಕಲನ ಒಂದು ಮಹತ್ವದ ಕೃತಿ"[೨] ಎಂದು ಅಭಿಪ್ರಾಯಪಟ್ಟಿದ್ದಾರೆ. ನೇಮಿಚಂದ್ರ ಅವರು ಬರೆದಿರುವ ಕೆಲವು ಕತೆಗಳನ್ನು ಮೀನಾ ವಾಂಗೀಕರವರು ಮರಾಠಿ ಭಾಷೆಗೂ ಅನುವಾದಿಸಿದ್ದಾರೆ.

ವಿಜ್ಞಾನ ಹಾಗೂ ಸಾಹಿತ್ಯ, ಲಲಿತಕಲೆ, ಮಹಿಳಾ ಅಧ್ಯಯನಗಳಿಗೆ ಸೇತುವೆಯಂತೆ ಇರುವವರು ನೇಮಿಚಂದ್ರ. ಇವರು ಸಂಪಾದನಾ ಕ್ಷೇತ್ರದಲ್ಲೂ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಈ ಶತಮಾನದ ಮೊದಲ ಭಾಗದಲ್ಲಿ ಬದುಕಿದ್ದು, ಕವನಗಳನ್ನು ರಚಿಸಿದ ಬೆಳಗೆರೆ ಜಾನಕಮ್ಮನವರ ಜೀವನ ಸಾಹಿತ್ಯದ ಬಗ್ಗೆ ಮಾಹಿತಿ ಸಂಗ್ರಹಿಸಿ, ಕೃತಿಗಳನ್ನು ಸಂಪಾದಿಸಿ ಪುಸ್ತಕ ರೂಪದಲ್ಲಿ ಹೊರತಂದಿದ್ದಾರೆ. ಜೊತೆಗೆ ಅವರು ಕನ್ನಡದಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆಯಲ್ಲಿ ಮಹಿಳೆಯ ಪಾತ್ರ ಎಂಬುದರ ಬಗ್ಗೆ ಸಂಶೋಧನೆ ನಡೆಸಿದವರಲ್ಲಿ ಪ್ರಮುಖರು. ಅವರು ಬೇರೆ ಬೇರೆ ದೇಶಗಳಲ್ಲಿ ಪ್ರವಾಸ ಮಾಡಿ ಮತ್ತು ಅಲ್ಲಿ ಮಹಿಳಾ ವಿಜ್ಞಾನಿ ಹಾಗೂ ಮಹಿಳಾ ಸಂಶೋಧಕಿಯರ ಮಾಹಿತಿಯನ್ನು ಕಲೆಹಾಕಿದ್ದಾರೆ.

ಮಹಿಳಾ ಸಾಹಿತ್ಯಿಕಾದವರು ಪ್ರಕಟಿಸಿರುವ 'ಒಂದು ಕನಸಿನ ಪಯಣ' ನೇಮಿಚಂದ್ರರ ಮೊದಲ ಪ್ರವಾಸ ಕಥನ. ಇವರು ಹೇಮಲತಾ ಮಹಿಷಿ ಅವರೊಡನೆ ಅನೇಕ ಲೇಖಕರ, ವಿಜ್ಞಾನಿಗಳ, ವಿಶಿಷ್ಟ ಸಾಧಕರ ವೀಕ್ಷಣೆಗೆ ತಮ್ಮ ಸ್ವಂತ ಖರ್ಚಿನಲ್ಲಿ ಯುರೋಪ್ ಖಂಡ ಸುತ್ತಿ ಬಂದ ಪ್ರವಾಸ ಕಥನವಾಗಿದೆ. ಇವರ ಮತ್ತೊಂದು ಪ್ರವಾಸ ಕಥನ 'ಪೆರುವಿನ ಪವಿತ್ರ ಕಣಿವೆಯಲ್ಲಿ' ಎಂಬುವುದನ್ನು ನವಕರ್ನಾಟಕ ಪಬ್ಲಿಕೇಷನ್ಸ್ ಅವರು ಹೊರತಂದಿದ್ದಾರೆ. ನೇಮಿಚಂದ್ರರವರು ಪೆರುವಿನಲ್ಲಿ ಕಾಲಿಟ್ಟ ಮೊದಲನೇ ಕನ್ನಡ ಮಹಿಳೆಯಾಗಿದ್ದಾರೆ. ಈ ರಹಸ್ಯಮಯ ಭೂಮಿಯ ಬಗ್ಗೆ ತಿಳಿದುಕೊಳ್ಳುವುದಕ್ಕೆ ಕಾತುರರಾಗಿ ಅದನ್ನು ಅವರು ಪ್ರವಾಸ ಕಥನ ರೂಪದಲ್ಲಿ ದಾಖಲಿಸುತ್ತಾರೆ. ಅಲ್ಲಿ ಅವರಿಗೆ ಭಾಷೆ ಗೊತ್ತಿರುವುದಿಲ್ಲ. ಆದರೂ ಅವರು ತುಂಬಾ ಜನರನ್ನ ಭೇಟಿಮಾಡಿ ಮತ್ತು ಅನುಭವವನ್ನು ಗ್ರಹಿಸಿಕೊಂಡು, ಪ್ರತ್ಯಕ್ಷವಾಗಿ ಆ ಸ್ಥಳಗಳಿಗೆ ಭೇಟಿಕೊಟ್ಟು ಅವರ ಪ್ರವಾಸ ಕಥನದಲ್ಲಿ ಒಂದು ವಿಸ್ಮಯವಾದ ಕಥೆಯನ್ನೇ ಹೆಣೆದಿದ್ದಾರೆ.

ನೇಮಿಚಂದ್ರ ಅವರು 'ಥಾಮಸ್ ಆಲ್ವಾ ಎಡಿಸನ್' 'ಬೆಳಕಿನೊಂದು ಕಿರಣ ಮೇರಿ ಕ್ಯೂರಿ' ಎಂಬೆರಡು ವಿಜ್ಞಾನಿಗಳ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ವಿಜ್ಞಾನ ದೀಪಮಾಲೆಯಲ್ಲಿ 'ಥಾಮಸ್ ಆಲ್ವಾ ಎಡಿಸನ್' ಜೀವನಚರಿತ್ರೆ ಪ್ರಕಟಗೊಂಡಿದೆ. ಎಡಿಸನ್ನನ ಹೆಸರನ್ನು ಕೇಳಿರದ ವಿದ್ಯಾರ್ಥಿಗಳಿಲ್ಲ. ಆದರೂ ಆತನ ಒಟ್ಟು ಜೀವನವನ್ನು, ಅವನ ಎಲ್ಲಾ ಸಾಧನೆಗಳೊಂದಿಗೆ ನೀಡಿರುವ ನೇಮಿಚಂದ್ರರ ಕನ್ನಡದ ಈ ಕೃತಿ ತುಂಬಾ ಉಪಯುಕ್ತವಾಗಿದೆ.

'ಬೆಳಕಿನೊಂದು ಕಿರಣ ಮೇರಿಕ್ಯೂರಿ' ನೇಮಿಚಂದ್ರ ಅವರ ಜೀವನ ಚರಿತ್ರೆ ಗ್ರಂಥಗಳ ಸಾಲಿನಲ್ಲೇ ಮಹತ್ವದ್ದಾಗಿದೆ. ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರದಲ್ಲಿ ಎರಡು ಬಾರಿ ನೊಬೆಲ್ ಪ್ರಶಸ್ತಿಯನ್ನು ಪಡೆದಿರುವ ಮೇರಿಕ್ಯೂರಿಯ ಬಗ್ಗೆ ಬರೆದಿರುವುದಕ್ಕೆ ತುಂಬಾ

ಖುಷಿಯಾಗುತ್ತದೆ ಎಂದಿದ್ದಾರೆ. ಬಾಲ್ಯದಲ್ಲಿ ಮೇರಿಕ್ಯೂರಿಯ ಬಗೆಗೆ ಓದಿದ ಒಂದು ಪುಟ್ಟ ಪುಸ್ತಕದಿಂದಾಗಿ ಮುಂದೊಂದು ದಿನ ಆಕೆಯ ಜೀವನ ಚರಿತ್ರೆಯನ್ನು ವಿವರವಾಗಿ ತಿಳಿದು ಕನ್ನಡದಲ್ಲಿ ಬರೆಯುವ ಅವಕಾಶ ಕಲ್ಪಿಸಿತು ಎಂದಿದ್ದಾರೆ. ನೇಮಿಚಂದ್ರರವರು ಮೇರಿಕ್ಯೂರಿ ಅವರನ್ನು ಪ್ರೇರಕಶಕ್ತಿಯೆಂದು ನಂಬಿದ್ದಾರೆ. ಏಕೆಂದರೆ ಮನುಕುಲಕ್ಕೆ ವಿಜ್ಞಾನ ಬೇಕೇ ಬೇಕು ಎಂದು ಒತ್ತಿ ಹೇಳಿದ್ದಾರೆ. ಮೇರಿಕ್ಯೂರಿಯ ಈ ಜೀವನ ಚರಿತ್ರೆ ಕೃತಿರೂಪದಲ್ಲಿ ಹೊರಬರುವ ಮೊದಲೇ 'ಸುಧಾ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ, ಇದನ್ನು ಕುರಿತು ಓದುಗರಿಂದ ಪ್ರತಿಕ್ರಿಯೆಯ ಪತ್ರಗಳ ಮಹಾಪೂರವೇ ಬಂದಿತ್ತು ಎಂದು ನೇಮಿಚಂದ್ರರೇ ಗ್ರಂಥದ ಅರಿಕೆಯಲ್ಲಿ ಹೇಳಿದ್ದಾರೆ.

ಲೇಖಕಿಯ 'ನೋವಿಗದ್ದಿದ ಕುಂಚ' ಪ್ರಸಿದ್ಧ ಚಿತ್ರಕಾರ ವ್ಯಾನ ಗೋನ ಜೀವನ ಚಿತ್ರವಾಗಿದೆ. ವ್ಯಾನ್‌ಗೋನ ವಿಭಿನ್ನ ಮಾದರಿ ಚಿತ್ರಗಳು ಲೇಖಕಿಯನ್ನು ಆಕರ್ಷಿಸಿ, ಅನಂತರದಲ್ಲಿ ಆತನ ಬದುಕಿನ ಬಗೆಗೆ ತಿಳಿಯಬೇಕೆಂದು ಹೊರಟಾಗ ಪತ್ರರೂಪದಲ್ಲಿ ದೊರೆತ ಆತ್ಮಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ಈ ಕೃತಿಯನ್ನು ರಚಿಸಿದ್ದಾರೆ. ಅವರ ಇನ್ನೊಂದು ಪ್ರಮುಖ ಗ್ರಂಥ 'ಸಾಹಿತ್ಯ ಮತ್ತು ವಿಜ್ಞಾನ'. ಇದರಲ್ಲಿ ವೈಜ್ಞಾನಿಕ ಕತೆಗಳ ಕುರಿತ ಚರಿತ್ರೆಯನ್ನು, ವಿಚಾರಗಳಿರುವುದನ್ನು ನೋಡಬಹುದು. 'ಸಾಹಿತ್ಯ ಮತ್ತು ವಿಜ್ಞಾನ', 'ಎಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ಸ್' ಎಂಬ ಕೃತಿಗಳ ಮೂಲಕ ಇವರ ಪ್ರತಿಭೆಯ ಮತ್ತೊಂದು ಮುಖವನ್ನೂ ಕಾಣಿಸಿದ್ದಾರೆ.

ಅವರು ವಿಜ್ಞಾನ ಕ್ಷೇತ್ರವನ್ನು ಕೇಂದ್ರವಾಗಿಟ್ಟುಕೊಂಡು ರಚಿಸಿದ ಮತ್ತೊಂದು ಕೃತಿ 'ನೊಬೆಲ್ ಪ್ರಶಸ್ತಿ ಪಡೆದ ಮಹಿಳಾ ವಿಜ್ಞಾನಿಗಳು' ಎಂಬುವುದು. ಇದರಲ್ಲಿ ಕ್ರಮವಾಗಿ ಹತ್ತು ಮಹಿಳಾ ವಿಜ್ಞಾನಿಗಳು ಪಡೆದ ನೊಬೆಲ್ ಪಾರಿತೋಷಕದ ಬಗ್ಗೆ ಕುತೂಹಲಕರ ಚಿತ್ರವಿದೆ. ಇಲ್ಲಿನ ಒಬ್ಬೊಬ್ಬ ವಿಜ್ಞಾನಿಯ ಕಾರ್ಯವೂ ವಿಸ್ತಾರವಾದ ಜೀವನ ಚರಿತ್ರೆಗೆ ವಸ್ತುವಾಗಿದೆ. ಈ ಪುಸ್ತಕದಲ್ಲಿ ಲೇಖಕಿ ವಿಜ್ಞಾನಿಗಳ ಜೀವನ ಚಿತ್ರಣವನ್ನಷ್ಟೇ ಅಲ್ಲದೆ, ಅವರ ಸಂಶೋಧನಾ ಕಾರ್ಯಗಳನ್ನೂ ರಸವತ್ತಾದ ಕಥಾನಕಗಳನ್ನಾಗಿ ನಿರೂಪಿಸಿದ್ದಾರೆ. ಅಂಥ ವಿಸ್ತಾರ ಗ್ರಂಥಗಳನ್ನು ಓದಿದಾಗ ಸಾಮಾನ್ಯರಿಗೆ ಆಯಾಯ ವಿಜ್ಞಾನಿಗಳ ಬಗ್ಗೆ ಹೆಮ್ಮೆ – ಆಸಕ್ತಿಯನ್ನು ಕೆರಳಿಸುತ್ತದೆ.

ಫ್ಲೇಮಿಯಾ ಅವರ ಬದುಕಿನ ಸಾಹಸಗಾಥೆಯಾದ ಆತ್ಮಕತೆ 'ಮೈ ಸ್ಟೋರಿ – ಅವರ್ ಸ್ಟೋರಿ'ಯನ್ನು ನೇಮಿಚಂದ್ರ "ನನ್ನ ಕತೆ...... ನಮ್ಮ ಕತೆ' ಎಂದು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿ ನೂರು ಸೋಲಿನ ಅಂಚಿನಲ್ಲೂ ಜಯದ ಕನಸು ಕಂಡ ದಿಟ್ಟ

ಹೆಣ್ಣುಮಕ್ಕಳ ಕತೆಯಾಗಿದೆ. ಸ್ತ್ರೀವಾದಿ ಸಾಹಿತ್ಯ ಹಾಗೂ ಬದುಕಿನ ಅಪರೂಪದ ಸಮ್ಮಿಲನವಾದ ಈ ಕೃತಿ ಸಾಮಾಜಿಕ ಬದುಕಿನೊಳಗಿನ ವೈರುಧ್ಯಗಳನ್ನು ಎತ್ತಿ ತೋರಿಸುತ್ತದೆ.

ನೇಮಿಚಂದ್ರ ಅವರು ಹಾಗೂ ಹೇಮಲತಾ ಮಹಿಷಿ ಇವರಿಬ್ಬರೂ ಸೇರಿ 'ನ್ಯಾಯಕ್ಕಾಗಿ ಕಾದಿರುವ ಭ್ರಾಂವಿದೇವಿ' ಎಂಬ ಕಿರುಹೊತ್ತಿಗೆಯನ್ನು ಬರೆದಿದ್ದಾರೆ. ಈ ಕೃತಿಯನ್ನು 'ಜಾಗೃತಿ ಮಹಿಳಾ ಪ್ರಕಾಶನ' ಪ್ರಕಟಿಸಿದೆ. ಮಹಿಳೆಯನ್ನು ಅಧೀನಳಾಗಿಸಲು, ಅಧೀರಳಾಗಿಸಲು ಅವಳ ಮೇಲೆ ಅತ್ಯಾಚಾರವೆಸಗುತ್ತಾ ಬಂದಿರುವ ಪಿತೃಪ್ರಧಾನ ಸಮಾಜದಲ್ಲಿ ಭಾಂವ್ರಿದೇವಿ ಈ ಎಲ್ಲ ಶೋಷಣೆಗಳ ಪ್ರತೀಕವಾಗಿ ನಿಂತಿದ್ದಾಳೆ. ಅದರೊಟ್ಟಿಗೆ ಆ ಶೋಷಣೆಯ ವಿರುದ್ಧ ಬಂಡೆದ್ದ ಮಹಿಳಾ ಚಳುವಳಿಯ ದಿಟ್ಟ ಸಂಕೇತವಾಗಿಯೂ ಭ್ರಾಂವಿದೇವಿ ನಿಲ್ಲುತ್ತಾಳೆ.

ನೇಮಿಚಂದ್ರ ಅವರು ಬರೆದಿರುವ ತುಂಬಾ ಜನಪ್ರಿಯವಾದ ಕಾದಂಬರಿ ಎಂದರೆ 'ಯಾದ್ ವಶೇಮ್' ಈ ಕೃತಿಯನ್ನು ನವಕರ್ನಾಟಕ ಪಬ್ಲಿಕೇಷನ್ಸ್ ಅವರು ಹೊರತಂದಿದ್ದಾರೆ. ಈ ಕಾದಂಬರಿಯಲ್ಲಿ ಯಹೂದಿ ಹುಡುಗಿಯೊಬ್ಬಳು ಹಳೇ ಬೆಂಗಳೂರಿನಲ್ಲಿ ಹಿಂದೂ ಕುಟುಂಬದಲ್ಲಿ ಬೆಳೆದ ಬಗ್ಗೆ ತಿಳಿಸಿದ್ದಾರೆ. ಇದು ಕಥೆ ಆದರೂ ನೇಮಿಚಂದ್ರರವರು ಈ ಜಾಗಗಳಲ್ಲಿ ಪರ್ಯಟನೆ ಮಾಡಿ ಹ್ಯಾನಾ ಎಂಬ ಹುಡುಗಿ ಬಗ್ಗೆ ಬರೆದಿದ್ದಾರೆ. ಈ ಹುಡುಗಿಯು ತನ್ನ ಕುಟುಂಬದವರಿಗಾಗಿ ಜರ್ಮನಿ ಹಾಗೂ ಅಮೆರಿಕಾದಲ್ಲೆಲ್ಲಾ ಹುಡುಕಾಟ ನಡೆಸಿ, ಕೊನೆಗೆ ಇಸ್ರೇಲ್ ತಲುಪುತ್ತಾಳೆ. ಈ ಪುಸ್ತಕವನ್ನು ಬರೆಯಬೇಕಾದರೆ ಅವರು ಜೆರುಸೆಲಂಗೆ ಹೋಗುತ್ತಾರೆ. ಅದು ಪ್ರಪಂಚದ ಮೂರು ಧರ್ಮಗಳ ಪವಿತ್ರ ಭೂಮಿಯಾಗಿರುತ್ತದೆ. ಇದೇ ಜಾಗವನ್ನು ಅದರ ಕಾದಂಬರಿಯಲ್ಲಿ ಮುಗಿಸಲು ನಿರ್ಧರಿಸುತ್ತಾರೆ. ಹಾಗಾಗಿ ಈ ಸ್ಥಳ ಕಾದಂಬರಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಳ್ಳುತ್ತದೆ.

ನೇಮಿಚಂದ್ರ ಅವರು ಯಾವತ್ತೂ ಆರಾಮದ ಕುರ್ಚಿಯ ಬರಹಗಾರರಾಗಿರಲಿಲ್ಲ. ಅವರೇ ಹೇಳಿರುವಂತೆ ಅವರ ಬರವಣಿಗೆಯ ದಾಹವನ್ನು ಅವರೇ ನಿವಾರಿಸಿಕೊಳ್ಳುತ್ತಿದ್ದರು. ತಾವು ನೋವನ್ನು ಅನುಭವಿಸಿದರೂ, ಅದರಿಂದ ಹೊರಹೊಮ್ಮಿದ ಖಚಿತವಾದ ಮಾಹಿತಿಯನ್ನು ಸಂಗ್ರಹಿಸುತ್ತಾರೆ. ಸ್ವಂತ ಖರ್ಚಿನಲ್ಲಿ ದೇಶ–ವಿದೇಶಗಳಲ್ಲಿ ಸುತ್ತಾಡಿ ಅನುಭವದ ಆಳಕ್ಕಿಳಿದು, ನೇರ–ಸರಳವಾದ ಬರವಣಿಗೆಯ ಮೂಲಕ ಶ್ರೀಸಾಮಾನ್ಯನಿಗೂ ಅರ್ಥವಾಗುವ ರೀತಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಬಿಡುವಿಲ್ಲದ ಕೆಲಸದ ಮಧ್ಯೆಯೂ ತಮ್ಮನ್ನು ತಾವು ಇಷ್ಟರಮಟ್ಟಿಗೆ ಗುರುತಿಸಿಕೊಂಡಿರುವ ನೇಮಿಚಂದ್ರರ ಸಾಹಿತ್ಯ ಹಾಗೂ ವಿಜ್ಞಾನ ಕ್ಷೇತ್ರದಲ್ಲಿನ ಸಾಧನೆ ಅಪರೂಪದ್ದಾಗಿದೆ.

ಇವರ ಕೆಲವು ಕೃತಿಗಳಿಗೆ ಪ್ರಶಸ್ತಿಗಳೂ ಲಭಿಸಿವೆ. 'ಬೆಳಕಿನೊಂದು ಕಿರಣ ಮೇರಿಕ್ಯೂರಿ', 'ಪೆರುವಿನ ಪವಿತ್ರ ಕಣಿವೆಯಲ್ಲಿ', 'ಯಾದ್ ವಶೇಮ್' ಪುಸ್ತಕಗಳಿಗೆ 'ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'; 'ಸಾಹಿತ್ಯ ಮತ್ತು ವಿಜ್ಞಾನ' ಹಾಗೂ 'ಒಂದು ಕನಸಿನ ಪಯಣ' ಪುಸ್ತಕಗಳಿಗೆ 'ರತ್ನಮ್ಮ ಹೆಗ್ಗಡೆ ಪ್ರಶಸ್ತಿ'; 'ಮತ್ತೆ ಬರೆದ ಕತೆಗಳು' ಪುಸ್ತಕಕೆ 'ಆರ್ಯಭಟ ಪ್ರಶಸ್ತಿ'; 'ಬದುಕು ಬದಲಿಸಬಹುದು' ಪುಸ್ತಕಕ್ಕೆ ಶಿವಮೊಗ್ಗದ 'ಕರ್ನಾಟಕ ಸಂಘ'ದ 'ಡಾ. ಹಾ.ಮಾ.ನಾಯಕ ಪ್ರಶಸ್ತಿ'; 'ಪೆರುವಿನ ಪವಿತ್ರ ಕಣಿವೆಯಲ್ಲಿ' ಪುಸ್ತಕಕ್ಕೆ 'ಶಿವರಾಮ ಕಾರಂತ ಪುರಸ್ಕಾರ'; 'ಯಾದ್ ವಶೇಮ್'ಗೆ 'ಅಕ್ಕ ಪ್ರಶಸ್ತಿ'. ವಿಜ್ಞಾನ, ಸಾಹಿತ್ಯ, ಮಹಿಳಾ ಅಧ್ಯಯನವನ್ನು ಕುರಿತಂತೆ ಮಂಗಳೂರಿನ 'ಸಂದೇಶ ಪ್ರಶಸ್ತಿ', ಗದಗದ 'ಕಲಾಚೇತನ' ಪ್ರಶಸ್ತಿ ಮತ್ತು 'ಇಂದಿರಾ ತನಯ' ಪ್ರಶಸ್ತಿಗಳು – ಹೀಗೆ ಗೌರವ ಪುರಸ್ಕಾರಗಳ ಸುರಿಮಳೆಯೇ ನೇಮಿಚಂದ್ರ ಅವರ ಪಾಲಿಗೆ ಒದಗಿಬಂದಿದೆ.

ವಿಶೇಷವೆಂದರೆ ನೇಮಿಚಂದ್ರ ಅವರಿಗೆ ಒಂದೇ ವರ್ಷದಲ್ಲಿ ಎರಡು ಪ್ರಶಸ್ತಿ ಲಭಿಸಿರುವುದು. ಸಾಹಿತ್ಯ, ವಿಜ್ಞಾನ ಮತ್ತು ಮಾನವೀಯತೆಯನ್ನು ಬದುಕು ಹಾಗೂ ಬರಹಗಳಲ್ಲಿ ಜನರಿಗೆ ತಲುಪಿಸದ ವಿಶೇಷ ಸಾಧನೆಗಾಗಿ ೨೦೦೧ನೇ ಸಾಲಿನಲ್ಲಿ ಸಂದೇಶ್ ಪ್ರಶಸ್ತಿ ದೊರೆತರೆ, 'ಒಂದು ಕನಸಿನ ಪಯಣ' ಪ್ರವಾಸ ಕಥನಕ್ಕೆ 'ಮಾತೃಶ್ರೀ ರತ್ನಮ್ಮ ಹೆಗ್ಗಡೆ' ಮೊದಲನೆಯ ಬಹುಮಾನವೂ ಲಭಿಸಿದೆ.

ನೇಮಿಚಂದ್ರ ಅವರದು ಬಹುಮುಖ ವ್ಯಕ್ತಿತ್ವ, ಹೆಂಡತಿಯಾಗಿ, ಖಾಸಗಿ ಜೀವನದಲ್ಲಿ ತಾಯಿಯಾಗಿ, ವೃತ್ತಿ ಜೀವನದಲ್ಲಿ ಬರಹಗಾರ್ತಿಯಾಗಿ ಹಾಗೂ ಮುಖ್ಯ ಅಧಿಕಾರಿಯಾಗಿ ಮೂರು ಮುಖ್ಯವಾದ ಪಾತ್ರಗಳನ್ನು ಅವರ ಜೀವನದಲ್ಲಿ ನಿರ್ವಹಿಸಿರುತ್ತಾರೆ. ಅವರ ಆಳವಾದ ಪರಿಶ್ರಮ ಮತ್ತು ಸತತ ಅಭ್ಯಾಸದಿಂದ ಆ ಮೂರು ಪಾತ್ರದಲ್ಲಿ ನೈಪುಣ್ಯತೆಯನ್ನು ಸಾಧಿಸಿದ್ದಾರೆ. ಅವರು ಇಷ್ಟಪಟ್ಟು ಬರವಣಿಗೆಯನ್ನು ಸ್ವಾಧೀನ ಮಾಡಿಕೊಂಡಿದ್ದಾರೆ.

ನೇಮಿಚಂದ್ರ ಅವರು ಚಿಕ್ಕ ವಯಸ್ಸಿನಲ್ಲಿಯೇ ಬರವಣಿಗೆಯನ್ನು ಪ್ರಾರಂಭಿಸಿದವರು. ಅವರ ಬರವಣಿಗೆಯಲ್ಲಿ ಭಿನ್ನವಾದ ಶಾಬ್ದಿಕ ವರ್ಣನೆಯ ಶೈಲಿಯೊಂದು ನಮಗೆ ಗೋಚರವಾಗುತ್ತದೆ. ಜೊತೆಗೆ ಕೆಲವು ಸಲ ಅದು ಹಾಸ್ಯಪ್ರಜ್ಞೆಯಿಂದ ಕೂಡಿರುತ್ತದೆ. ಅಪಾರ ಬೌದ್ಧಿಕ ಶ್ರಮವನ್ನು ಬೇಡುವ ಉದ್ಯೋಗ, ಬಹುಮುಖ ಅಧ್ಯಯನ ಆಸಕ್ತಿ, ಸಾಹಿತ್ಯಾಭಿವ್ಯಕ್ತಿ, ಹೋರಾಟದ ಮನೋಭಾವನೆ, ಮಾನವೀಯ ಕಳಕಳಿಯ ಪ್ರತಿಪಾದನೆ, ಸಮರಸ ಕೌಟುಂಬಿಕ ಸಾಧನೆ – ಹೀಗೆ ಯಾವ ಕೋನದಿಂದ ಅಳೆದು ತೂಗಿದರೂ ಅವರ ಬರಹ ಅಪ್ರತಿಮ ಪ್ರತಿಭಾ ಮಾಪಕವಾಗಿದೆ. ಹೀಗೆ ನೇಮಿಚಂದ್ರರ ಸೃಜನಶೀಲ ಸಾಹಿತ್ಯ ಮತ್ತು ಇತರ ಬರಹಗಳನ್ನು ಅವಲೋಕಿಸಿದಾಗ ಕೆಲವು ಮಹತ್ವವಾದ ಸಂಗತಿಗಳನ್ನು ಕಾಣಬಹುದು.

ನೇಮಿಚಂದ್ರ ಅವರು ಯಶಸ್ವಿ ಸಂವೇದನಾಶೀಲ ಲೇಖಕಿಯೂ ಆಗಿರುವಂತೆ ಅಪಾರ ಧೈರ್ಯದಿಂದ ಹೋರಾಡುವ ಕೆಚ್ಚಿನ ಸ್ವಭಾವದವರು. ಅವರೇ ಹೇಳುವ ಹಾಗೇ ಪ್ರತಿಯೊಬ್ಬ ವ್ಯಕ್ತಿಯು ಸಮಗ್ರವಾದ ವ್ಯಕ್ತಿತ್ವವನ್ನು ಪಡೆದಿರಬೇಕು. ನಾವು ನಮ್ಮಲ್ಲೇ ನಂಬಿಕೆಯಿಟ್ಟು ಮುನ್ನುಗಿದ್ದರೆ ಬಾಗಿಲು ತನ್ನಷ್ಟಕ್ಕೆ ತಾನೇ ತೆರೆದುಕೊಳ್ಳುತ್ತದೆ ಎನ್ನುತ್ತಾರೆ ಅವರು.

ಡಾ. ಸಿ.ಆರ್.ಚಂದ್ರಶೇಖರರ ಸಂಪಾದಕತ್ವದ ವ್ಯಕ್ತಿವಿಕಸನ ಮಾಲೆಯಡಿ ೨೦೦೯ರಲ್ಲಿ ಪ್ರಕಟವಾದ 'ದುಡಿವ ಹಾದಿಯಲಿ ಜೊತೆಯಾಗಿ' ಎಂಬ ಕೃತಿಯಲ್ಲಿ ತಮ್ಮ ಬದುಕಿನ ಅನುಭವವನ್ನು ಬಿಚ್ಚಿಡುತ್ತಾ ತಮ್ಮ ಆತ್ಮಕಥನವಾಗಿ ದುಡಿಯುವ ದಂಪತಿಗಳನ್ನು ನೋಡಿ ಕೇಳಿದ ಸಂಗತಿಗಳನ್ನೂ, ತಮ್ಮ ಸ್ವಾನುಭವಗಳನ್ನು ಬಳಸಿಕೊಂಡು ಸಾಮಾಜಿಕ ಮೌಲ್ಯಗಳನ್ನು ಚಿತ್ರಿಸುತ್ತಾ ಹೋಗುತ್ತಾರೆ. ಈ ಕೃತಿ ಸಮಾಜಶಾಸ್ತ್ರೀಯ ದೃಷ್ಟಿಯಿಂದಲೂ ಮತ್ತು ಉನ್ನತ ಆದರ್ಶ ಬದುಕನ್ನು ರೂಪಿಸಿಕೊಳ್ಳುವಲ್ಲಿ ಅಧ್ಯಯನ ಯೋಗ್ಯವಾದ ಕೃತಿಯಾಗಿದೆ.

ನೇಮಿಚಂದ್ರ ಅವರು ಸಂವೇದನಾಶೀಲ ಲೇಖಕಿಯಾಗಿರುವಂತೆಯೇ ಯಶಸ್ವಿ ದುಡಿಯುವ ಮಹಿಳೆಯೂ ಆಗಿ ಕಂಡುಬರುತ್ತಾರೆ. ಈ ಕೃತಿಯ ಮೂಲಕ ತಮ್ಮ ವ್ಯಕ್ತಿತ್ವವನ್ನು ಹೇಗೆ ಬದಲಿಸಿಕೊಂಡರೆ ತಮಗಷ್ಟೇ ಅಲ್ಲ, ತಮ್ಮ ಕುಟುಂಬಕ್ಕೂ ಮತ್ತು ಮಕ್ಕಳಿಗೂ ಹಿತ ಎಂಬುವುದನ್ನು ಅವರದೇ ಆದ ಆತ್ಮೀಯ ಬರವಣಿಗೆಯ ಮೂಲಕ ಆಪ್ತವಾಗಿ ಹಿತವಾಗಿ ಹೇಳಿ ಸಮಾಜದ ಕಣ್ಣುತೆರೆಸುತ್ತಾರೆ. ವ್ಯಕ್ತಿ ತಮ್ಮ ವ್ಯಕ್ತಿತ್ವ ಮಾತ್ರವಲ್ಲದೆ ತಮ್ಮ ನಡವಳಿಕೆಯ ಮೂಲಕ, ತಮ್ಮ ಸಾಧನೆಗಳ ಮೂಲಕ ಇತರರ ವ್ಯಕ್ತಿತ್ವ ರೂಪುಗೊಳ್ಳುವುದಕ್ಕೂ ಸಹಾಯಕರಾಗಬಹುದು ಎಂಬುದು ಅವರ ತಿಳಿವಳಿಕೆಯ ಒಟ್ಟು ಆಶಯವಾಗಿದೆ.

ಅವರು ಅಭಿಪ್ರಾಯಪಡುವಂತೆ ಬದುಕಿನಲ್ಲಿ ಅನೇಕ ಅನಿರೀಕ್ಷಿತ ಆಘಾತದ ಕ್ಷಣಗಳು ಎದುರಾಗುತ್ತದೆ. "ಒಬ್ಬರು ಕುಸಿದಾಗ, ಇನ್ನೊಬ್ಬರು ಜೊತೆಯಾಗಿ ಕೈ ಹಿಡಿದು ಮೇಲೆ ಏಳಿಸಬೇಕಾದ ಕ್ಷಣಗಳಾಗಿರಬೇಕು. ಆ ಸೋತ ಕ್ಷಣದಲ್ಲಿ ಅವರ ಆತ್ಮವಿಶ್ವಾಸವನ್ನು ಮೇಲೆತ್ತಿ ಮುಂದೆ ಹೆಜ್ಜೆ ಹಾಕಿಸುವ ಅಗತ್ಯವಿರುತ್ತದೆ"[೩] ಎಂಬುದಾಗಿ ದಾಂಪತ್ಯದಲ್ಲಿರಬೇಕಾದ ಹೊಂದಾಣಿಕೆಯನ್ನು ಹೇಳುತ್ತಾರೆ. ಮುಂದುವರೆದು ನಮ್ಮ ದಿನನಿತ್ಯದ ಬದುಕಿನ ಓಟದಲ್ಲಿ, ಒಂದು ಕ್ಷಣ ಕುಳಿತು ಮನಸ್ಸಿನ ಭಾವನೆಯನ್ನು ಹಂಚಿಕೊಳ್ಳದೆ ನಮ್ಮ ಒತ್ತಡಗಳನ್ನು ಏಕಾಂಗಿಗಳಾಗಿ ಹೊತ್ತು ಸಾಗುತ್ತೇವೆ. ಪರಸ್ಪರ ಹಂಚಿಕೊಳ್ಳದೆ ಇದ್ದರೆ ಸಂಬಂಧಗಳು ಬೆಸೆಯುವುದಿಲ್ಲ, ಬೆಳೆಯುವುದಿಲ್ಲ ಎಂದು ಅವರು ಅಭಿಪ್ರಾಯಪಡುತ್ತಾರೆ.

ನೇಮಿಚಂದ್ರ ಅವರ ಪತಿ ಕೀರ್ತಿ ಅವರು ಬಹಳ ದಿನಗಳಿಂದ ಖಿನ್ನರಾಗಿದ್ದನ್ನು ಕಂಡು ಅವರ ಮನಸ್ಸಿಗೆ ಹೊಳೆದಿತ್ತು. ನಾವು ನಮ್ಮ ಬಗ್ಗೆ ಮಾತನಾಡಿಕೊಂಡು ಎಷ್ಟು

ದಿನವಾಗಿದೆ ಎಂದು ಕುಳಿತು ಮಾತನಾಡಿದ ನಂತರ ಅವರನ್ನು ಕಾಡುವ ವಿಷಯವನ್ನು ತಿಳಿದುಕೊಂಡು ಪರಿಹರಿಸಲು ಪ್ರಯತ್ನಿಸುತ್ತಾರೆ. ಒಬ್ಬರನ್ನು ಇನ್ನೊಬ್ಬರಿಗೆ ಹೋಲಿಕೆ ಮಾಡಿಕೊಂಡು ಬದುಕುವುದು ಒಳ್ಳೆಯದಲ್ಲ ಎಂಬುವುದು ನೇಮಿಚಂದ್ರ ಅವರ ಅಭಿಪ್ರಾಯ ವಾಗಿದೆ. ಇದು ಬದುಕಿಗೆ ಮಾರಕವಾಗಿರುತ್ತದೆಯೇ ಹೊರತು ಪೂರಕವಾಗಿರುವುದಿಲ್ಲ. ಇದರಿಂದ ನಮ್ಮ ಮೇಲೆ ಆತ್ಮವಿಶ್ವಾಸವನ್ನೇ ಕಳೆದುಕೊಳ್ಳುತ್ತೇವೆ. ಬದುಕು ನಮ್ಮದು, ಇದು ನಮ್ಮೊಬ್ಬರದು. ಇದರಲ್ಲಿ ಅವರಿವರೊಡನೆ ಹೋಲಿಕೆ ಅಸಹಜವಾಗಿರುತ್ತದೆ ಎಂದು ಹೇಳುತ್ತಾರೆ.

ಗಂಡ ಮತ್ತು ಹೆಂಡತಿ ಸಂಬಂಧವನ್ನು ಕುರಿತು ಮಾತಾನಾಡುತ್ತ ಬಿಚ್ಚಿಕೊಳ್ಳುವ ಸಂಬಂಧ ನಮ್ಮದಾಗಬೇಕು. ಮನೆಗೆ ಬಂದಾಗ 'ನಾವಾಗುವ' ಕ್ಷಣಗಳು ಬೇಕು. ನಮ್ಮ ಸೋಲನ್ನು, ಆತಂಕವನ್ನು, ಭೀತಿಯನ್ನು, ದುಃಸ್ವಪ್ನಗಳನ್ನು ಮಡದಿಯೊಡನೆ, ಮಡದಿ ಗಂಡನೊಡನೆ ಅಳುಕಿಲ್ಲದೆ ತೆರೆದುಕೊಳ್ಳಬಲ್ಲ ಸಂಬಂಧ ನಮ್ಮದಾಗಬೇಕು. ಪರಸ್ಪರರ ಕಠಿಣ ಕ್ಷಣಗಳನ್ನು ಎದುರಿಸಲು ಬೆನ್ನ ಹಿಂದೆ ಬೆಂಗಾವಲಾಗಿ ದಂಪತಿಗಳು ನಿಲ್ಲಬೇಕು. ನಮ್ಮಲ್ಲಿರುವ ಮಿತಿಗಳನ್ನು, ಕೊರತೆಗಳನ್ನು ಹಂಚಿಕೊಂಡಾಗ ಸ್ನೇಹ ಮತ್ತು ಸೌಹಾರ್ದದ ಪರಿಸರ ಮನೆಯಲ್ಲಿ ನಿರ್ಮಾಣವಾಗಬೇಕು. ಇದು ನಮ್ಮ ಮನೆ, ಈಕೆ ನನ್ನವಳು, ಈತ ನನ್ನವನು, ಈಕೆಯೊಡನೆ 'ಹಂಗಿಸುವ ಭಯವಿಲ್ಲದೆ, ಹೋಲಿಕೆಯ ಹೊರೆ ಇಲ್ಲದೆ', ಹಗಲು ಹೊತ್ತಿನಲ್ಲಿ ಹೊರಗೆ ದುಡಿದು ಬಂದಾಗ ಸುಂದರ ಸಂಜೆಗಳು ಮನೆಯೊಳಗೆ ದೊರೆಯುವಂತಾಗಬೇಕೆಂದು ಆಶಿಸುತ್ತಾರೆ.

ನೇಮಿಚಂದ್ರ ಅವರು ಸಂಬಳ, ಬಡ್ತಿ, ಆಸಕ್ತಿ ಮತ್ತು ನೈಪುಣ್ಯತೆ ಬಗ್ಗೆ ಹೇಳುತ್ತಾ ಹೋಗುತ್ತಾರೆ. ಬಡ್ತಿ ಅನ್ನುವುದು ನಮ್ಮ ಅಗಾಧ ಪ್ರತಿಭೆ ಶ್ರಮದ ಪರಿಣಾಮ ಎಂಬ ಭ್ರಮೆ ಸರಿಯಲ್ಲ. ನಮ್ಮ ಸಂಬಳ, ಬಡ್ತಿ ಇವೆಲ್ಲಕ್ಕೂ ಅಗಾಧವಾದ ಬೆಲೆ ಅಂಟಿಸುವ ಅಗತ್ಯವಿಲ್ಲ ಎಂದು ಹೇಳುತ್ತಾರೆ. ಒಮ್ಮೆ ಕಾಲೇಜು ಹಂತದಲ್ಲಿ ಫೇಲ್ ಆಗಿದ್ದವರು ಬದುಕು ಪೂರಾ ಹಾಗೆಯೇ ಮುಂದುವರೆಯಬೇಕು ಎಂಬುದೇನೂ ಇಲ್ಲ. ಅದರಾಚೆಗೆ ಕೆಲಸದಲ್ಲಿ ಯಾವಾಗಲೂ ಆಸಕ್ತಿಯನ್ನು ತೋರಬೇಕು, ನೈಪುಣ್ಯತೆಯನ್ನು ಮೆರೆಯಬೇಕು, ಅಷ್ಟೇ ಶ್ರಮವನ್ನು ಹಾಕಿ ಮುಂದುವರೆಯಬೇಕು.

ನೇಮಿಚಂದ್ರ ಅವರು ದುಡಿಯುವ ಹೆಣ್ಣುಮಕ್ಕಳು ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಎದುರಿಸುವಂತಹ ಸಮಸ್ಯೆ ಸವಾಲುಗಳನ್ನು ಸೂಕ್ಷ್ಮವಾಗಿ ಚಿತ್ರಿಸುತ್ತಾ ಹೋಗುತ್ತಾರೆ. ಬದಲಾಗುತ್ತಿರುವ ಸಮಾಜಕ್ಕೆ ಹೊಂದಿಕೊಂಡಂತೆ ಹೆಣ್ಣುಮಕ್ಕಳು ಹೆಚ್ಚು ಹೆಚ್ಚು ರಂಗಗಳಲ್ಲಿ ದುಡಿಮೆಯಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಹೆಚ್ಚಿನ ಜವಾಬ್ದಾರಿಗಳನ್ನು,

ಸವಾಲುಗಳನ್ನು ತಮ್ಮ ಕೆಲಸ ಸಮಯದಲ್ಲಿ ಎದುರಿಸುತ್ತಿದ್ದಾರೆ. ಹೀಗಿದ್ದೂ ದುಡಿಯುವ ಮಹಿಳೆಯರಿಗೆ ಆತ್ಮವಿಶ್ವಾಸವಿಲ್ಲದ ಗಂಡಸರು ತಮ್ಮ ಪತ್ನಿಯ ಬದುಕನ್ನು ನರಕ ಮಾಡುತ್ತಾರೆ. ಆಕೆಯ ಪ್ರತಿಭೆಯನ್ನು ತುಳಿದುಹಾಕುತ್ತಾರೆ. ಅದರಲ್ಲೂ ಪತ್ನಿಯ ಯಶಸ್ಸು ನಾಲ್ಕು ಜನರಿಗೆ ಕಾಣುವಂತಿದ್ದರೆ ಮತ್ತಷ್ಟು ಪರಿತಪಿಸುತ್ತಾರೆ ಎಂಬುದಾಗಿ ಸಮಕಾಲೀನ ಸಂದರ್ಭದಲ್ಲಿ ಕಂಡುಬರುವ ನೈಜ ಸಂಗತಿಯನ್ನು ತಿಳಿಸುತ್ತಾರೆ.

ಆದರೆ ನೇಮಿಚಂದ್ರ ಅವರ ಪಾಲಿಗೆ ಅವರ ಪತಿ ಕೀರ್ತಿಯವರು "ಪೆಯರಿ"ಯಾಗಿ ಸಿಕ್ಕಿದ್ದಾರೆ ಎಂದು ಹೇಳಿಕೊಳ್ಳುತ್ತಾರೆ. ಅವರ ಹಾದಿಯ ಬಡ್ತಿ ಪ್ರಶಸ್ತಿಗಳನ್ನು ತಮ್ಮದೆಂಬುಷ್ಟು ಖುಷಿಯಿಂದ ಪ್ರೀತಿಯಿಂದ ಸ್ವೀಕರಿಸಿದವರು. ಅವರಿಬ್ಬರ ನಡುವೆ ಅಭಿಮಾನದ ಪ್ರಶ್ನೆಗಳು ಎದ್ದಿರಲಿಲ್ಲ. ಆದರೆ ಅವರ ನಡುವೆ ಅವರ ಕುಟುಂಬದ ಸದಸ್ಯರು ಗೋಡೆಯನ್ನು ಎಬ್ಬಿಸಿದ್ದರು.

ನೇಮಿಚಂದ್ರ ಅವರು ತಮ್ಮದೇ ಮನೆಯ ವಾತಾವರಣದಲ್ಲಿ ಮುಜುಗರಕ್ಕೆ ಈಡಾಗುತ್ತಾರೆ. ಪತಿ ಅಡುಗೆ ಮನೆಯಲ್ಲಿ ಸಹಾಯ ಮಾಡುವುದು ಅಪರಾಧವಾಗಿ ಕಾಣುತ್ತಾರೆ. ಅಡುಗೆ ಮನೆ ಹೊಕ್ಕುವುದು ಅವನ ಪುರುಷತ್ವಕ್ಕೆ ಭಾರೀ ಪೆಟ್ಟು ಎಂಬಂತೆ ವಾದಿಸುತ್ತಾರೆ. ಬಡ್ತಿ, ಸಂಬಳವನ್ನು ಅವರ ಕುಟುಂಬದವರು ಯಶಸ್ಸಿನ ಅಳತೆಗೋಲುಗಳಾಗಿ ಅಳೆಯುತ್ತಾರೆ.

ಆದರೆ ನೇಮಿಚಂದ್ರ ಅವರ ದಾಂಪತ್ಯವು ಇದನ್ನು ಮೀರಿ ಸರಳ ಸಮಾನತಾ ಸೂತ್ರದಲ್ಲಿ ನೆಮ್ಮದಿಯಾಗಿ ಸಂಸಾರ ಸಾಗಿಸಿಕೊಂಡು ಮನೆಯಲ್ಲಿ ಯಾವ ಕೆಲಸಕ್ಕೂ ಹೆಣ್ಣು-ಗಂಡಿನ ಕೆಲಸವೆಂದು ಭೇದ-ಭಾವ ಮಾಡದೆ 'ಇಬ್ಬರೂ ಹಂಚಿ ಮಾಡಿಬಿಡೋಣ' ಎಂಬಂತೆ ಬದುಕನ್ನು ಸ್ವೀಕರಿಸಿದವರು. ಒಂದು ಮಧ್ಯಮವರ್ಗದ ಬದುಕಿಗೆ ಬೇಕಾದ ಸಕಲ ಸೌಲಭ್ಯವನ್ನು ಪಡೆದುಕೊಂಡಿದ್ದರು. ಇದರಿಂದ ಹೊರತಾದ ಆಗಾಧವಾದ ಆಸೆ-ಆಕಾಂಕ್ಷೆಗಳು ಅವರನ್ನು ಬಾಧಿಸಲಿಲ್ಲ. ಬದುಕಲ್ಲಿ ವೇಗ, ಹಣ, ವಿದೇಶದಲ್ಲಿ ಕೆಲಸ, ಡಾಲರ್ ಎಣಿಕೆ, ಆದಷ್ಟು ಬೇಗ ಗುರಿಮುಟ್ಟುವ ಆಸೆ ಅವರದಾಗಿರಲಿಲ್ಲ.

ನೇಮಿಚಂದ್ರರವರಿಗೆ ವೇಗ ಮುಖ್ಯವಾಗುವುದಿಲ್ಲ. ನಡೆಯುವ ದಿಕ್ಕು ಮುಖ್ಯವಾಗುತ್ತ ಹೋಗುತ್ತದೆ. ಜೀವನವನ್ನು ಸಂತೋಷದಿಂದ ಬದುಕುವುದೇ ಯಶಸ್ವಿ ಎಂಬುದು ಅವರ ಅಭಿರುಚಿಯಾಗಿತ್ತು. ಅದಕ್ಕಾಗಿ ಅವರು ಆಯ್ದುಕೊಂಡ ಬದುಕಿನ ಬಗ್ಗೆ ಚಿಂತಿಸಲು, ಕೇಂದ್ರಿಕರಿಸಲು ಸಾಧ್ಯವಾಯಿತು ಎಂದು ಹೇಳುತ್ತಾರೆ. ಹಾಗಾಗೀ ಬದುಕನ್ನು ನಮ್ಮಂತೆ ತಂತಮ್ಮ ಆಯ್ಕೆಯಂತೆ ಬದುಕುವ ನಿರ್ಧಾರವನ್ನು ಮತ್ತಷ್ಟು ಗಟ್ಟಿಗೊಳಿಸಿಕೊಳ್ಳುತ್ತಾರೆ. ಇದರಿಂದ ಮುಂದೆ ದಂಪತಿಗಳ ನಡುವೆ ಬಡ್ತಿ – ಸಂಬಳದಲ್ಲಿಯ ವ್ಯತ್ಯಾಸ ಕಂಡುಬಂದಾಗ

ಬೇರೆಯವರು ಬೊಟ್ಟುಮಾಡಿ ತೋರಿಸಿದರೂ ಈ ದಂಪತಿಗಳು ಇವರಲ್ಲಿರುವ ಆತ್ಮವಿಶ್ವಾಸವನ್ನು ಕಳೆದುಕೊಳ್ಳುವುದಿಲ್ಲ, ಸಂಬಂಧದಲ್ಲಿ ಕಹಿ ಭಾವನೆ ಬೀರುವುದಿಲ್ಲ.

ನೇಮಿಚಂದ್ರ ಅವರ ಕೌಟುಂಬಿಕ ಜೀವನದಲ್ಲಿ ಅವರ ಪತಿ ಕೀರ್ತಿಯವರು ಇವರ ಹಾದಿಯಲ್ಲಿ ಬೆನ್ನೆಲುಬಾಗಿ ನಿಂತರು. ಸೋಲು–ಗೆಲುವುಗಳನ್ನು ತಮ್ಮದೆಂಬಂತೆ ಹಂಚಿಕೊಂಡರು. ಮನೆಯ ಒಳ–ಹೊರಗಿನ ಎಲ್ಲ ಕೆಲಸದಲ್ಲಿ ಭಾಗಿಯಾಗುತ್ತಾರೆ. ನೇಮಿಚಂದ್ರ ಅವರು ಬರೆದ ಪುಸ್ತಕಗಳನ್ನು ಓದಲು ಬಾರದಿದ್ದರೂ, ಅವರು ಓದಿ ಹೇಳುವಾಗ ಸಹನೆಯಿಂದ ಕೇಳುತ್ತಿದ್ದರು. ಸ್ವತಃ ಭಾರತದಿಂದ ಹೊರಗೆ ಕಾಲಿಡದಿದ್ದರೂ, ನೇಮಿಚಂದ್ರರವರ ಬಹುದಿನಗಳ ಕನಸನ್ನು ತಮ್ಮ ವರ್ಷ ವರ್ಷಗಳ ಉಳಿತಾಯವನ್ನು ಇವರ ಕೈಗಿಟ್ಟು ಇಂಗ್ಲೆಂಡ್, ಯೂರೋಪ್, ಅಮೆರಿಕಾ, ಪೆರು, ಬ್ರೆಜಿಲ್ – ಎಂಬೆಲ್ಲ ದೇಶಗಳಿಗೆ ಹೊರಟಂತಹ ಇವರ ವೈಯಕ್ತಿಕ ಪ್ರವಾಸಕ್ಕೆ ಪ್ರೋತ್ಸಾಹಿಸಿದರು.

ದುಡಿಯುವ ಮಹಿಳೆಯ ಬಗ್ಗೆ ಕಾಳಜಿ ವಹಿಸುವ ನೇಮಿಚಂದ್ರ ಅವರು ಅಪರಾಧಿ ಪ್ರಜ್ಞೆಯಿಂದ ಮುಕ್ತರಾಗಬೇಕೆಂದು ಹೇಳುತ್ತಾರೆ. "ಗಂಡನ ಕೈಯಲ್ಲಿ ಕೆಲಸ ಮಾಡಿಸಬಾರದು. ಮಕ್ಕಳಿಗೆ ಕೂತ ಕಡೆ ಬಾಯಿಗೆ ತುತ್ತು ಮಾಡಿ ತಿನ್ನಿಸುವುದೇ ಮಾತೃತ್ವ ಎಂಬ ಭಾವನೆ ತೊರೆದು ಒಳ್ಳೆಯ ತಾಯಿ, ಒಳ್ಳೆಯ ಹೆಂಡತಿ, ಒಳ್ಳೆಯ ಉದ್ಯೋಗಿ ಎಂಬ ಪದಗಳಿಗೆ ಹೊಸ ನಿರ್ವಚನಗಳನ್ನು ಹುಡುಕಬೇಕಿದೆ"[೪] ಎಂದು ಹೇಳುತ್ತಾರೆ.

ಅದರೊಡನೆ ತನ್ನ ಉದ್ಯೋಗಕ್ಕೂ ತಾನು ನ್ಯಾಯ ಒದಗಿಸಿಕೊಡಬಲ್ಲೆ ಎಂಬ ಛಲದ ಅಗತ್ಯವೂ ಇದೆ ಎಂಬ ಸಾಮಾಜಿಕ ಹೊಣೆಗಾರಿಕೆ ಬಗ್ಗೆ ದುಡಿವ ಹೆಣ್ಣುಮಕ್ಕಳಿಗೆ ತಿಳಿಸುತ್ತಾರೆ. ತಮ್ಮ ವೈಯಕ್ತಿಕ ಬದುಕಿನ ಅಡೆತಡೆಗಳನ್ನು ದಾಟಿ, ಗೃಹಿಣಿ, ಹೆಂಡತಿ, ತಾಯ್ತನದ ಕರ್ತವ್ಯಗಳನ್ನು ನಿರ್ವಹಿಸಿಕೊಂಡು ಉದ್ಯೋಗದಲ್ಲಿ ಯಶಸ್ಸು ಕಾಣಬಹುದೆಂದು ಕಿವಿಮಾತನ್ನು ಹೇಳುತ್ತಾರೆ. "ಪತಿ ಮತ್ತು ಕುಟುಂಬ ಬೆಂಬಲವಿಲ್ಲದಿದ್ದರೂ ನಾನು ಉದ್ಯೋಗದ ಈ ಎತ್ತರವನ್ನು ಖಂಡಿತಾ ಮುಟ್ಟುತ್ತಿದ್ದೆ"[೫] ಎಂಬ ಆತ್ಮವಿಶ್ವಾಸ ಮಹಿಳೆಯರದಾಗಿರಬೇಕೆಂದು ಹೇಳುತ್ತಾರೆ. ದುಡಿಯಬೇಕೆಂಬ ನಿರ್ಧಾರ ನಮ್ಮದಾಗಿರುವಾಗ, ಮನೆ, ಮಕ್ಕಳನ್ನು ಹೇಗೆ ಸಂಭಾಳಿಸುತ್ತೇವೆ ಅನ್ನುವುದೂ ನಮ್ಮ ಜವಾಬ್ದಾರಿಯಾಗಿರುತ್ತದೆ.

ನಿಜವಾಗಿ ದುಡಿವ ಹೆಣ್ಣು ಮಕ್ಕಳನ್ನು ಅರ್ಥಮಾಡಿಕೊಳ್ಳಬೇಕಾದವರು ಮೊದಲು ಆಕೆಯ ಪತಿ ಮತ್ತು ಕುಟುಂಬ. ಇವರುಗಳ ಸಹಕಾರ ಬಹಳ ಮುಖ್ಯ ಎಂಬುದಾಗಿ ತಿಳಿಸುತ್ತಾರೆ. ಅಷ್ಟೇ ಅಲ್ಲದೇ ದುಡಿವ ಮಹಿಳೆ 'ಹೊತ್ತಾಗಿ ಹೋದ್ರೆ ನಮ್ಮೇಜಮಾನ್ರು ಹಾರಾಡ್ತಾರೆ, ಮಗು ಬಿಟ್ಟು ಹೋಗೋಕಾಗೊಲ್ಲ' ಎಂಬ ಕಾರಣಗಳಿಂದಾಗಿ ಸದಾ ಸರಪಳಿಯಲ್ಲಿ ಬಂಧಿಯಾಗಿರುತ್ತಾಳೆ. ಆದರೆ ಒಂದು ಕೆಲಸವನ್ನು ತೆಗೆದುಕೊಂಡ ಮೇಲೆ,

ಸಮಾನತೆಯನ್ನು ಬಯಸುವಾಗ ಇದು ಸರಿ ಕಾಣುವುದಿಲ್ಲ. "ನಮ್ಮ ವೈಯಕ್ತಿಕ ಬದುಕನ್ನು ನಾವು ಯೋಜಿಸಿ ನಿಭಾಯಿಸಬೇಕು, ಯಾವುದೇ ರಿಯಾಯಿತಿಯನ್ನು ಕೆಲಸದಲ್ಲಿ ಬೇಡದೆ ದುಡಿದು ತೋರಿಸಬೇಕು"[೬] ಎಂಬುವುದು ನೇಮಿಚಂದ್ರ ಅವರು ಕೆಲಸದ ಬಗ್ಗೆ ದುಡಿವ ಹೆಣ್ಣು ಮಕ್ಕಳಿಗೆ ಇರಬೇಕಾದ ದಕ್ಷತೆಯ ಬಗ್ಗೆ ಎಚ್ಚರಿಸುತ್ತಾರೆ.

ದುಡಿವ ದಂಪತಿಗಳ ಬದುಕಿನಲ್ಲಿ ಎದುರಾಗುವ ಮತ್ತೊಂದು ಸಮಸ್ಯೆಯೆಂದರೆ ಮಕ್ಕಳ ಮೇಲಿನ ಅಧಿಕ ನಿರೀಕ್ಷೆ ಮತ್ತು ಒತ್ತಡ ನಮಗರಿವಿಲ್ಲದೆಯೇ ಅಭಿವ್ಯಕ್ತವಾಗುವ ಆಸೆಗಳಿಗೆ ನಿರೀಕ್ಷೆಗಳಿಗೆ ಕಡಿವಾಣ ಹಾಕಿಕೊಂಡು, ಮಕ್ಕಳನ್ನು ಓದಿಸುವುದು ಅವರ ಪರಿಶ್ರಮದಲ್ಲಿ ನಂಬಿಕೆ ಇಡುವುದು, ದುಡಿದು ತನ್ನ ಕಾಲ ಮೇಲೆ ನಿಲ್ಲುವಂತಹ ಮನೋಭಾವವನ್ನು ಬೆಳೆಸಬೇಕು ಎಂದು ಅಭಿಪ್ರಾಯಪಡುತ್ತಾರೆ. ಮಕ್ಕಳನ್ನು ಬೆಳೆಸಲು ಸುಲಭವಾದ ಸೂತ್ರವೆಂದರೆ – ಅದೇನೇ ಆದರೂ ನಮ್ಮ ಮಗುವನ್ನು ಯಾವ ಷರತ್ತಿಲ್ಲದೆ ಪ್ರೀತಿಸುವುದು. ಕಾರಣ ಪ್ರೀತಿಸಿದ ಮಕ್ಕಳು ಫೇಲ್ ಆಗಬಹುದು, ಆದರೆ ಅಡ್ಡಹಾದಿಯನ್ನು ಹಿಡಿಯಲಾರರು ಎಂಬುದು ನೇಮಿಚಂದ್ರ ಅವರ ಅಭಿಪ್ರಾಯವಾಗಿದೆ.

ನೇಮಿಚಂದ್ರ ಅವರು ಮನೆಗೆಲಸದ ಸಮಸ್ಯೆಗಳನ್ನು ತಮ್ಮದೇ ಆದ ರೀತಿಯಲ್ಲಿ ಪರಿಹರಿಸಿಕೊಂಡು ಇಬ್ಬರೂ ಹಂಚಿ ಮಾಡುವ ದಿನಚರಿ ಕಾರ್ಯವಾದ್ದರಿಂದ ಮನೆಗೆಲಸ ಯಾವುದೇ ರೀತಿಯ ಸಮಸ್ಯೆಯಾಗಿ ಅವರನ್ನು ಕಾಡಲಿಲ್ಲ. ಅಂದರೆ ಅವರ ಪತಿ ಇವರಿಗೆ ಎಲ್ಲ ಕೆಲಸದಲ್ಲಿಯೂ ಸಮಭಾಗಿಯಾಗಿ ಸಹಕಾರವನ್ನು ನೀಡಿದ್ದರು. ಇದರಿಂದ ಸುಸೂತ್ರದ ಸಂಸಾರ ನಿರ್ವಹಣೆ ಇವರಿಗೆ ಸಾಧ್ಯವಾಯಿತು. ಬಹಳಷ್ಟು ಬಾರಿ ಎಲ್ಲರಿಂದ ಎಲ್ಲ ಕೆಲಸವನ್ನು ನಿಭಾಯಿಸಲು ಸಾಧ್ಯವಾಗದಿರಬಹುದು. ಆದರೆ ಒಬ್ಬರಿಗೊಬ್ಬರು ಸಹಕಾರದಿಂದ ದುಡಿಯ ತೊಡಗಿದರೆ ಬದುಕು ಭಾರವಾಗುವುದಿಲ್ಲ. ಸುಖಿ ಸಂಸಾರದ ಗುಟ್ಟು ಎಂದರೆ "ಒಂದೇ ಸಮಯದಲ್ಲಿ ಇಬ್ಬರೂ ಕೋಪಗೊಳ್ಳದಿರುವುದು; ಗುಡ್ಡದಂತೆ ಎದುರು ನಿಂತ ಕೆಲಸವನ್ನು ಹಂಚಿಕೊಂಡು ಮಾಡಿ ಮುಗಿಸಿದರೆ ಕುಟುಂಬದಲ್ಲಿ ಸಾಮರಸ್ಯ ಉಂಟಾಗುತ್ತದೆ"[೭] ಎಂದು ಹೇಳುತ್ತಾರೆ.

ನೇಮಿಚಂದ್ರ ಅವರು ಹೆಣ್ಣುಮಕ್ಕಳ ವಿದ್ಯಾಭ್ಯಾಸ ಮತ್ತು ಉದ್ಯೋಗಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಾರೆ. ಹೆಣ್ಣುಮಕ್ಕಳಿಗೆ ಓದು ವಿದ್ಯಾಭ್ಯಾಸ ನೀಡಿ, ಉದ್ಯೋಗ ಹಿಡಿಯುವಂತೆ ಪ್ರೋತ್ಸಾಹಿಸಿ ಬದುಕಿಗೆ ತಯಾರಿಸುವ ಬದಲು, ಮದುವೆಗಷ್ಟೇ ತಯಾರಿಸಿದರೆ ಸಾಕು ಎಂಬಂತೆ ಬೆಳೆಸುತ್ತಾರೆ. ವೇಗದ ಬದುಕಿನಲ್ಲಿ ಅಭದ್ರತೆಯ ಸಮಯದಲ್ಲಿ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸವಿಲ್ಲದೆ– ಆರ್ಥಿಕ ಸ್ವಾವಲಂಬನೆ ಇಲ್ಲದೆ,

ವಿವಾಹವನ್ನೇ ತಮ್ಮ ಬದುಕಿನಲ್ಲಿ ಮುಖ್ಯವಾಗಿಸಿಕೊಂಡ ಎಷ್ಟೇ ಮಹಿಳೆಯರು ಸಂಕಷ್ಟಗಳಲ್ಲಿ, ವಿಚ್ಛೇದನಗಳಲ್ಲಿ ಛಿದ್ರವಾಗುತ್ತಾರೆ ಎಂದು ತಿಳಿಸುತ್ತಾರೆ.

ತನ್ನ ಬದುಕಿನ ಭದ್ರತೆಗೆ ಹೆಣ್ಣು ದುಡಿಯುವುದು ಅನಿವಾರ್ಯ ಮತ್ತು ಅಗತ್ಯವಾಗಿದೆ. ಆಕೆಯ ಬಹಳಷ್ಟು ಸಮಸ್ಯೆಗಳಿಗೆ ಶಿಕ್ಷಣ–ಉದ್ಯೋಗ ಪರಿಹಾರ–ವಾಗಬಲ್ಲದು ಎಂಬ ಜಾಗೃತಿ ನಮ್ಮ ಸಮಾಜದಲ್ಲಿ ಮೂಡಿಲ್ಲ. ಹೀಗಾಗಿಯೇ ಹೆಣ್ಣಿನ ಉದ್ಯೋಗವು ಒಂದು ಹಗುರವಾದ ವಿಷಯವಾಗಿದೆ.

ಮುಖ್ಯವಾಗಿ ಮಹಿಳೆಯರು ಮಾನಸಿಕವಾಗಿ ಬೆಳೆಯಬೇಕಿದೆ, ಗಟ್ಟಿಯಾಗಬೇಕಿದೆ. ನಮ್ಮ ಕನಸುಗಳನ್ನು ಯಾರದೋ ದುರ್ಬಲ ಹೆಗಲುಗಳ ಮೇಲೆ ಹೇರಲು ಬದಲು ಅದಕ್ಕಾಗಿ ದುಡಿಯಲು ತಯಾರಾಗಬೇಕಿದೆ.

ಮುಂದುವರಿದು ಹೇಳುತ್ತಾ "ನನ್ನ ಉದ್ಯೋಗ ರಂಗದ ಅನುಭವಗಳು ವ್ಯಕ್ತಿಯಾಗಿ ನನ್ನನ್ನು ಬೆಳೆಸಿದವು. ಕೆಲಸದ ಕಾರಣವಾಗಿ ಹೊರ ಊರುಗಳಿಗೆ ಒಬ್ಬಳೇ ಅಲೆಯುವ, ನಿಭಾಯಿಸುವ ಎಲ್ಲಾ ಅನುಭವಗಳು ನನ್ನನ್ನು ಬಹಳಷ್ಟು ಸ್ವಾವಲಂಬಿಯಾಗಿಸಿವೆ. ನನಗೆ ಅಗಾಧ ಆತ್ಮವಿಶ್ವಾಸವನ್ನು ತಂದುಕೊಟ್ಟಿವೆ".

ಒಟ್ಟು ಮಹಿಳಾ ಶಕ್ತಿಯ ಬಗ್ಗೆ ವಿಶ್ವಾಸವನ್ನು ತುಂಬಬಲ್ಲ ಎಲ್ಲಾ ಅನುಭವಗಳು ಅವರ ಬದುಕು ಮತ್ತು ಬರಹಕ್ಕೆ ಹೊಸ ಆಯಾಮಗಳನ್ನು ತಂದುಕೊಟ್ಟಿವೆ. ಲೇಖಕಿಯಾಗಿ, ಮಹಿಳಾ ಅಧ್ಯಯನದಲ್ಲಿ ವಿಶೇಷ ಆಸಕ್ತಿ ಇರುವ ಇವರಿಗೆ ಇವರ ವೃತ್ತಿರಂಗದ ಅನುಭವಗಳು ಅನನ್ಯವಾಗಿವೆ. ಈ ಎಲ್ಲ ಹಿನ್ನೆಲೆಯಲ್ಲಿಯೇ ಇತಿಹಾಸದಾಳದಲ್ಲಿಯ ಮಹಿಳಾವಿಜ್ಞಾನಿಗಳ ಮತ್ತು ಮಹಿಳಾ ವೈಮಾನಿಕೆಯರ ಅದ್ಭುತ ಪರಂಪರೆಯನ್ನು ಬರಹದ ಮೂಲಕ ಉತ್ತರ ಕಂಡುಕೊಂಡು ಮಹಿಳಾ ಧ್ವನಿಯಾಗಿದ್ದಾರೆ.

ಕೆಲಸದ ಬಗ್ಗೆ ಅವರಿಗೆ ಇರುವ ಶ್ರದ್ಧೆ ಅವರದೇ ಮಾತುಗಳಲ್ಲಿ ಕಾಣಬಹುದು. ತಡವಾಗಿ ಕಛೇರಿಯಲ್ಲಿ ಉಳಿದ ಹೊತ್ತು ಇಂತಹ ಓರ್ವ ವ್ಯಕ್ತಿ "ಕೆಲಸ ಮಾಡಿ, ಇಲ್ಲ ಬಿಡಿ, ಕೊಡೋ ಸಂಬಳ ಅಷ್ಟೆ ತಾನೆ. ಈ ಸರಕಾರಿ ಕೆಲಸದಲ್ಲಿ, ಇಷ್ಟು ಗಂಟೆ ದುಡಿಯಲು ನಿಮಗೆ ಬುದ್ಧಿ ಇಲ್ಲ"' ಎಂಬಂತಹ ಮಾತನಾಡಿದಾಗ, ನನಗೆ ಆತನ ಮನೋಭಾವದ ಬಗ್ಗೆ ಅನುಕಂಪವಾಯಿತು. ನಮ್ಮ ದುಡಿಮೆ ಕೇವಲ ಸಂಬಳ ತರುವುದಲ್ಲ. 'ಕಾಯಕದಲ್ಲಿ ಕೈಲಾಸ' ಕಾಣಬಹುದು ಎಂಬುದು ನನಗಂತೂ ಉತ್ಪ್ರೇಕ್ಷೆಯ ಮಾತಾಗಿ ಕಂಡಿಲ್ಲ. ಮನಸ್ಸು ಕೊಟ್ಟು, ನಮ್ಮ ಕೆಲಸದಲ್ಲಿ ತೊಡಗಿ ದುಡಿದು ದಣಿದು ಬರುವಾಗ, ದೇಹವಷ್ಟೇ ದಣಿದಿರುತ್ತದೆ. ಮನಸ್ಸಿಗೆ ಮುದವಿರುತ್ತದೆ. ನನ್ನ ಕೆಲಸವನ್ನು, ಕರ್ತವ್ಯವನ್ನು ನಾನು ಅಚ್ಚುಕಟ್ಟಾಗಿ ಮಾಡಿದೆ ಎಂಬ ಭಾವ, ನಮ್ಮ ಕಣ್ಣ ದೃಷ್ಟಿಯಲ್ಲಿಯೇ ನಮ್ಮ ಬಗ್ಗೆ ನಮಗೆ ಅಭಿಮಾನವನ್ನು

ಹುಟ್ಟಿಸುತ್ತದೆ. ದೇಹ ಮನಸ್ಸುಗಳು ಸ್ವಸ್ಥವಾಗಿ ಉಳಿಯುತ್ತವೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸುವುದರ ಮೂಲಕ ಅವರ ಕೆಲಸ ಅನೇಕ ಮಹಿಳೆಯರಿಗೆ ಖಂಡಿತಾ ಸ್ಫೂರ್ತಿಯಾಗಿದ್ದಾರೆ ಎಂದು ಹೇಳಬಹುದು.

ದುಡಿವ ಮಹಿಳೆಯನ್ನು ಕುರಿತಂತೆ ಕೆಲವು ವಿಷಯಗಳು ಮಾತ್ರ ಇನ್ನೂ ಸುಧಾರಿಸಬೇಕಿದೆ. ವಿದ್ಯಾಭ್ಯಾಸ ಮತ್ತು ದುಡಿಮೆ ಇಂದಿನ ಅನೇಕ ಹೆಣ್ಣುಮಕ್ಕಳಿಗೆ ಹಣವನ್ನು ತಂದುಕೊಟ್ಟರೂ, ಆತ್ಮವಿಶ್ವಾಸವನ್ನು, ಆದರ್ಶಗಳನ್ನು, ದಿಟ್ಟತನವನ್ನು ತಂದುಕೊಟ್ಟಿಲ್ಲ ಎಂದು ಗಮನಿಸಿದಾಗ ನಮ್ಮ ವಿದ್ಯಾಭ್ಯಾಸ ನಮ್ಮ ವ್ಯಕ್ತಿತ್ವವನ್ನು ಅರಳಿಸುವಲ್ಲಿ ಬಹಳಷ್ಟು ಬಾರಿ ಸೋಲುತ್ತದೆ ಎಂದೇ ಹೇಳಬಹುದು.

ಹಾಗಾಗಿ ನಮ್ಮ ದುಡಿಮೆ, ಆರ್ಥಿಕ ಸ್ವಾತಂತ್ರ್ಯ, ನಮ್ಮನ್ನು ಆತ್ಮಗೌರವದ ವ್ಯಕ್ತಿಯಾಗಿ ರೂಪಿಸಬೇಕು. ವರದಕ್ಷಿಣೆಯ ಪಿಡುಗಿಗೆ ಬಲಿಯಾಗದ ಸಾಹಸವನ್ನು ಹೆಣ್ಣುಮಕ್ಕಳು ತೋರಬೇಕು. ಬದುಕಿನ ಏಳುಬೀಳುಗಳಲ್ಲಿ ಕುಸಿಯದೆ ಎದ್ದು ಮುನ್ನಡೆಯುವ ಆತ್ಮಸ್ಥೈರ್ಯ ನಮ್ಮದಾಗಬೇಕು ಎಂಬುದಾಗಿ ನೇಮಿಚಂದ್ರ ಅವರು ಹೆಣ್ಣುಮಕ್ಕಳಿಗೆ ಇರಬೇಕಾದ ಶಕ್ತಿ–ಸಾಮರ್ಥ್ಯದ ಬಗ್ಗೆ ತಿಳುವಳಿಕೆಯನ್ನು ನೀಡುತ್ತಾ ಹೋಗುತ್ತಾರೆ.

ನೇಮಿಚಂದ್ರ ಅವರು ಹೇಳುವ ಹಾಗೆ "ಯಾವುದೇ ಕೆಲಸವನ್ನು ಮಾಡಬಯಸುವಾಗ ನಮಗೆ ಬೇಕಾಗಿರುವುದು ಸಮಯವಲ್ಲ, ಮನಸ್ಸು. ಏಕೆಂದರೆ ಮನಸ್ಸಿದ್ದರೆ ಸಮಯವನ್ನು ೨೪ ಗಂಟೆಗಳಾಚೆಗೂ ಹಿಗ್ಗಿಸಬಹುದು. ಮಾಡಲು ಸಾಧ್ಯವಿಲ್ಲವೆ, ಸಾಧ್ಯವಾಗಿಸಲು ಮಾರ್ಗಗಳಿಲ್ಲವೆ? ಪ್ರಯತ್ನಿಸಿದಾಗ, ನಮ್ಮ ಯತ್ನ ವ್ಯರ್ಥವಾಗುವುದಿಲ್ಲ, ಬಹಳಷ್ಟು ಬಾರಿ ಯಶಸ್ವಿಯಾಗುತ್ತದೆ. ಕೈಗೆತ್ತಿಕೊಂಡರೆ ಸಾಕು, ಎಲ್ಲವೂ ಸರಾಗ, ಆರಂಭವಷ್ಟೇ ಕಷ್ಟದ್ದು, ಒಮ್ಮೆ ಹೆಜ್ಜೆ ಇಟ್ಟರೆ, ಹಾದಿ ಸುಗಮ".[೯]

ಮನಸ್ಸಿಗಿಂತ ದೊಡ್ಡ ಸಾಧಕ, ಬಾಧಕ ಮತ್ತೊಂದಿಲ್ಲ. ನಾವಂದುಕೊಂಡಂತೆ ನಾವಾಗುತ್ತೇವೆ. 'ಸಮಯವಿದೆ'ಯೆಂದು ನಾವಂದುಕೊಳ್ಳಬೇಕಷ್ಟೆ, ಅಲ್ಲಿ ಸಮಯ ಸೃಷ್ಟಿಯಾಗಿರುತ್ತದೆ. ನಮಗಾಗಿ, ಇತರರಿಗಿಲ್ಲದ ಸಮಯ, ನಮ್ಮದಾಗಿರುತ್ತದೆ!

ನಾವು ಮುಂದೂಡಿದ ಕೆಲಸಗಳಿಗೆ 'ಸಮಯವಿಲ್ಲ' ಎಂಬುದು ಕಾರಣವಲ್ಲ. ಕಾರಣ – ಅದರತ್ತ ನಾವು ಗಮನಹರಿಸಿಲ್ಲ, ಅದಕ್ಕೆ ಆದ್ಯತೆ ನೀಡಿಲ್ಲ. 'ಇದು ಮುಖ್ಯ' ಎಂದು ಮೊದಲು ನಾವದನ್ನು ಗುರುತಿಸಬೇಕು, ಸಮಯ ಹೊಂದಿಸಿಕೊಳ್ಳಬೇಕು, ಯೋಚಿಸಿಕೊಳ್ಳಬೇಕು. ಕಡೆಗೆ ಮೈಮನಸ್ಸಿಗೆ ತುಕ್ಕಿನಂತೆ ಹಿಡಿಯುವ ಜಡತ್ವವನ್ನು ಕೊಡವಿ ಎದ್ದು ದುಡಿಯಬೇಕು ಎಂದು ನೇಮಿಚಂದ್ರ ಅವರು ಸಮಯದ ಪರಿಪಾಲನೆಯ ಮೂಲಕ

ಸೋಮಾರಿತನವನ್ನು ಹೋಗಾಡಿಸಿಕೊಂಡು ಛಲದಿಂದ ಗುರಿಯನ್ನು ಮುಟ್ಟುತ್ತಾ ಮುನ್ನಡೆಯುವುದರ ಬಗ್ಗೆ ತಮ್ಮ ವ್ಯಕ್ತಿತ್ವಮಾಲೆ ಪುಸ್ತಕದಲ್ಲಿ ತಿಳಿಸುತ್ತಾ ಹೋಗುತ್ತಾರೆ.

ಒಟ್ಟಾರೆ, ನೇಮಿಚಂದ್ರ ಅವರದು ಬದುಕು–ಬರಹದ ಮೂಲಕ ಸಮಾಜ–ಸಂಸ್ಕೃತಿಯ ನಿರೀಕ್ಷೆಗಳನ್ನು ಮೀರಿನಿಂತ ವ್ಯಕ್ತಿತ್ವ ಕುಟುಂಬ ವ್ಯವಸ್ಥೆಯನ್ನು ಕಡೆಗಣಿಸದೆ ಲೇಖಕಿ ಸಂವಹಿನಿಸುವ 'ಸ್ತ್ರೀ ಪರ ದನಿ' ಇದರ ಧ್ವನಿಮಾತ್ರವಾಗಿರದೇ ಮಾನವೀಯ ದನಿಯಾಗುವುದನ್ನು ಇವರ ಬದುಕು–ಬರಹದ ಮೂಲಕ ತಿಳಿಸಬಹುದು. ಇವರ ಬರವಣಿಗೆ ಮತ್ತು ಬೆಳವಣಿಗೆಯನ್ನು ಗಮನಿಸಿದಾಗ ಹೆಣ್ಣಿನ ಮನಸ್ಥಿತಿ–ಆಶೋತ್ತರಗಳ ಧ್ಯಾನವಾಗಿಸಿಕೊಂಡು, ಸರ್ವಸಮಾನವಾದ ಸಾಮಾಜಿಕ ಪ್ರಜ್ಞೆ, ನೈತಿಕತೆಯ ನೆಲೆಗಟ್ಟಿನ ಮೇಲೆ ಬದುಕನ್ನು ಸಂತೋಷವಾಗಿಟ್ಟುಕೊಂಡು, ನೆಮ್ಮದಿಯ ಜೀವನವನ್ನು ಪಡೆದುಕೊಳ್ಳುವ ರೀತಿ ಬೆರಗು ಹುಟ್ಟಿಸುತ್ತದೆ. ಎಂಥ ಸಂದರ್ಭದಲ್ಲೂ ಸ್ವ–ಅನುಭವದ ಮೂಲಕ ಮುಚ್ಚುಮರೆಯಿಲ್ಲದೆ ಅಭಿವ್ಯಕ್ತಿಗೊಳಿಸಿರುವ ಶೈಲಿ ಅವರ ಅನನ್ಯತೆಯ ದ್ಯೋತಕವಾಗಿದೆ.

**ಕೊನೆಟಿಪ್ಪಣಿಗಳು**

೧. ಲೇಖಕರ ಸಂದರ್ಶನ

೨. ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು ಪುಸ್ತಕದ ಬೆನ್ನುಡಿ, ೨೦೦೧.

೩. ದುಡಿವ ಹಾದಿಯಲ್ಲಿ ಜೊತೆಯಾಗಿ, ೨೦೦೭, ಪು. ೧೩.

೪. ಲೇಖಕರ ಸಂದರ್ಶನ

೫. ದುಡಿವ ಹಾದಿಯಲ್ಲಿ ಜೊತೆಯಾಗಿ, ೨೦೦೭, ಪು. ೨೮.

೬. ಅದೇ, ಪು. ೩೩.

೭. ಲೇಖಕರ ಸಂದರ್ಶನ

೮. ದುಡಿವ ಹಾದಿಯಲ್ಲಿ ಜೊತೆಯಾಗಿ, ೨೦೦೭, ಪು. ೯೧.

೯. ಅದೇ, ಪು. ೧೨೧.

## ಅಧ್ಯಾಯ – ೪

# ನೇಮಿಚಂದ್ರ ಅವರ ಪ್ರವಾಸ ಸಾಹಿತ್ಯದ ಅಧ್ಯಯನ

ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಒಂದು ಪ್ರಕಾರವಾಗಿ ಬೆಳೆದುಕೊಂಡು ಬಂದಿದೆ. ಪ್ರಾಚೀನ ಕಾಲದಿಂದಲೂ ಮನುಷ್ಯ ತನ್ನ ಹೊಟ್ಟೆಪಾಡಿಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸಿದ್ದು ಅನೇಕ ಮೂಲಗಳಿಂದ ತಿಳಿದುಬರುತ್ತದೆ. ಅದೆಲ್ಲ ಅಲೆದಾಟ ಅಥವಾ ಪಯಣವೇ ಹೊರತು ಪ್ರವಾಸವಲ್ಲ. ಹಾಗೆಯೇ ನಾಗರಿಕತೆ ಬೆಳೆದಂತೆ ಬುದ್ಧಿ ಬೆಳೆಯತೊಡಗಿದಂತೆ ಧಾರ್ಮಿಕ ನಂಬಿಕೆ ಇಟ್ಟವರು ತೀರ್ಥಯಾತ್ರಾರ್ಥಿಗಳಾಗ ತೊಡಗಿದರು. ಆರ್ಥಿಕದಲ್ಲಿ ನಂಬಿಕೆ ಇಟ್ಟವರು ಉದ್ಯಮಿಗಳಾಗಿ ಸಂಚರಿಸತೊಡಗಿದರು. ಬುದ್ಧಿಜೀವಿಗಳು ಜ್ಞಾನಾರ್ಜನೆಗಾಗಿ ಸಂಚರಿಸತೊಡಗಿದರೆ ಉತ್ಸಾಹಿ ಯುವಕರು ಹೊಸ ಹೊಸ ಸ್ಥಳಗಳ ಅನ್ವೇಷಣಾರ್ಥಿಗಳಾಗಿ ದೇಶ ವಿದೇಶಗಳ ತುಂಬೆಲ್ಲ ಸಂಚರಿಸತೊಡಗಿದರು.

ಯುದ್ಧ, ವ್ಯಾಪಾರ, ಧಾಮಿಕಯಾತ್ರೆ, ಜ್ಞಾನಾರ್ಜನೆ ಇವು ಉದ್ದಕ್ಕೂ ಪ್ರವಾಸಕ್ಕೆ ಕಾರಣವಾಗುತ್ತ ಬಂದಿವೆ. ಭಾರತೀಯ ಸಮಾಜದಲ್ಲಿ ಪ್ರವಾಸ ನಿಷಿದ್ಧವೂ ಹೌದು; ಪವಿತ್ರವೂ ಹೌದು. ಒಂದು ಕಾಲಕ್ಕೆ ಸಮುದ್ರ ದಾಟುವುದು ಭಾರತೀಯ ಸಂಸ್ಕೃತಿಯ ಮಡಿವಂತ ಸಮುದಾಯಗಳ ಪಾಲಿಗೆ ಅಪವಿತ್ರವಾಗಿತ್ತು. ಆದರೆ ಕೆಲವು ಸಮುದಾಯಗಳಿಗೆ ಪ್ರವಾಸ ಪವಿತ್ರವೂ, ಅನಿವಾರ್ಯವೂ ಆಗಿತ್ತು.

ಅದರಲ್ಲೂ ಯತಿಸಂಸ್ಕೃತಿಯಲ್ಲಿ ಚಾರಣವು ಬಹಳ ಮಹತ್ವದ ಆಚರಣೆಯಾಗಿದೆ. ಬೌದ್ಧಯತಿಗಳು, ಜೈನಮುನಿಗಳು, ಅವಧೂತರು, ಸೂಫಿಗಳು, ಸಿದ್ಧರು, ಜೋಗಿಗಳು, ಮಹಾತಿರುಗಾಟಗಾರರು, ಗುರುವನ್ನು ಹುಡುಕಿಕೊಂಡು ಶಿಷ್ಯರು, ಶಿಷ್ಯರನ್ನು ಅರಸಿಕೊಂಡು ಗುರುಗಳು ಅಲೆಯುತ್ತಾರೆ. ಭಾರತದ ಯೋಗಿಗಳು ಮಾಡುವ ಮಹಾನ್ ತಿರುಗಾಟಗಳು ಸೋಜಿಗ ಹುಟ್ಟಿಸುತ್ತದೆ.

ಆದರೆ ಆಧುನಿಕ ಕಾಲವು ಹೊಸನಾಡನ್ನು ನೋಡಲೆಂದೇ ಮಾಡುವ ಪ್ರವಾಸವನ್ನು ಸಾಧ್ಯವಾಗಿಸಿದೆ. ಕಲಿಕೆಗಾಗಿ, ತರಬೇತಿಗಾಗಿ, ಹೊಸ ಉದ್ಯೋಗಕ್ಕಾಗಿ ಜನ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ವಲಸೆ ಹೋಗುತ್ತಾರೆ. ಆಧುನಿಕ ಸಂಚಾರದ ಸೌಲಭ್ಯಗಳು ಗೋಳದ ಮೇಲೆ ಅಲೆಯುವುದನ್ನು ಸುಲಭ ಮಾಡಿಬಿಟ್ಟಿವೆ. ನಾನಾ ಕಾರಣಗಳಿಂದ ಕನ್ನಡಿಗರು ೨೦ನೇ ಶತಮಾನದ ಉದ್ದಕ್ಕೂ ಜಗತ್ತಿನ ಬೇರೆ ಬೇರೆ ದೇಶಗಳಿಗೆ ಪ್ರವಾಸ ಅಥವಾ ವಲಸೆ ಹೋಗಿದ್ದಾರೆ. ಮರಳಿ ಬಂದ ಬಳಿಕ ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ. ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಎಂದು ಕರೆಯುತ್ತಿರುವ ಬರವಣಿಗೆ ಒಂದು ಪ್ರಕಾರವಾಗಿ ಹುಟ್ಟಿರುವುದು ಈ ಹಿನ್ನೆಲೆಯಲ್ಲಿ ಎಂದು ಹೇಳಬಹುದು.

ಕನ್ನಡ ಪ್ರವಾಸ ಸಾಹಿತ್ಯವು ಪ್ರಧಾನವಾಗಿ "ಮಧ್ಯಮವರ್ಗದ ಲೋಕದೃಷ್ಟಿಯದು. ಈ ವರ್ಗಕ್ಕೆ ಪ್ರವಾಸವು ಯಾಂತ್ರಿಕ ಬದುಕಿನಿಂದ ಕೆಲಕಾಲ ತಪ್ಪಿಸಿಕೊಂಡು ಹೋಗಲು ಸಿಗುವ ಅವಕಾಶ. ಹೋಗಲು ಬೇಕಾದ ಸಮಯ, ಹಣ, ಬರೆಯಲು ಬೇಕಾದ ಅಕ್ಷರ ಇರುವ ವರ್ಗವಿದು. ಹೀಗಾಗಿ ಅವು ಮಧ್ಯಮವರ್ಗದ ಕಣ್ಣಿನಲ್ಲಿ ಕಂಡ ಬದುಕಿನವು."[೧]

ಜ್ಞಾನಾರ್ಜನೆಗಾಗಿ, ಅನುಭವ ಸಂಪತ್ತಿಗಾಗಿ 'ನಮ್ಮಲ್ಲಿ ದೇಶ ಸುತ್ತಿ ನೋಡು, ಕೋಶ ಓದಿ ನೋಡು' ಎಂಬ ಅನುಭಾವಿಕರ ಮಾತೊಂದಿದೆ. ಆದರೆ ಒಮ್ಮೊಮ್ಮೆ ಈ ದೇಶ ಸುತ್ತುವುದು ಅಥವಾ ಪ್ರವಾಸ ಮಾಡುವುದು ಪ್ರಯಾಸವೆನಿಸಿದರೂ, ವ್ಯಕ್ತಿ ವಿಕಾಸಕ್ಕೆ ಅದೊಂದು ಮಹತ್ತರವಾದ ಸಾಧನ. ಪ್ರವಾಸದಿಂದ ಅದರ ಕಥನದಿಂದ ಪ್ರವಾಸಿಗೂ ಲಾಭ; ಓದುಗರಿಗೂ ಲಾಭ. ಪ್ರವಾಸಿ ತಿರುಗಿ ಅರಿತರೆ ಓದುಗ ಕುಳಿತು ಅರಿಯುತ್ತಾನೆ. ಅರಿತಂತೆ ಬೆಳೆಯುತ್ತಾನೆ.

ಶಿಕ್ಷಣದ ಪ್ರಭಾವದಿಂದ ಕಾಲ ಬದಲಾದಂತೆ ದೇಶ ಸುತ್ತುವ ಹಂಬಲವೂ ಮಹಿಳೆಯರಲ್ಲಿ ಹೆಚ್ಚಾಯಿತು. ಮಹಿಳೆಯರಿಗೆ ಆರ್ಥಿಕ ಸ್ವಾತಂತ್ರ್ಯ ದೊರೆತಂತೆ ಆಫೀಸಿನ ವತಿಯಿಂದ, ಶಾಲಾ ಕಾಲೇಜುಗಳಿಂದ ಹೊರ ಹೋಗುವ ಅವಕಾಶವೂ ದೊರೆಯಿತು. ಈಗ ಮಹಿಳೆಯರು ಸಾಕಷ್ಟು ಪ್ರವಾಸ ಮಾಡುತ್ತಿದ್ದಾರೆ. ತಮ್ಮ ಪ್ರವಾಸದ ಅನುಭವಗಳನ್ನು ಕೃತಿರೂಪದಲ್ಲಿ ಹೊರತರುತ್ತಿದ್ದಾರೆ.

**ನೇಮಿಚಂದ್ರ ಅವರ ಪ್ರವಾಸದ ಗುರಿ ಮತ್ತು ಉದ್ದೇಶ**

ಈ ನಿಟ್ಟಿನಲ್ಲಿ ನೇಮಿಚಂದ್ರ ಅವರು ದೇಶ-ವಿದೇಶಗಳನ್ನು ಸುತ್ತಿ ಬಂದು ಮೌಲಿಕವಾದ ಎರಡು ಪ್ರವಾಸ ಕಥನವನ್ನು ಬರೆದಿದ್ದಾರೆ. ಆ ಪ್ರವಾಸ ಕಥನಗಳೇ 'ಒಂದು ಕನಸಿನ ಪಯಣ' ಮತ್ತು 'ಪೆರುವಿನ ಪವಿತ್ರ ಕಣಿವೆಯಲ್ಲಿ'.

ಮಹಿಳಾ ಸಾಹಿತ್ಯಿಕಾದವರು ಪ್ರಕಟಿಸಿರುವ 'ಒಂದು ಕನಸಿನ ಪಯಣ ೧೯೯೯ರಲ್ಲಿ ಬಿಡುಗಡೆಗೊಂಡ ಕೃತಿ. ಇವರು ಹೇಮಲತಾ ಮಹಿಷಿ ಅವರೊಡನೆ ಅನೇಕ ಲೇಖಕರ, ವಿಜ್ಞಾನಿಗಳ, ವಿಶಿಷ್ಟ ಸಾಧಕರ ವೀಕ್ಷಣೆಗೆಂದು ತಮ್ಮ ಸ್ವಂತ ಖರ್ಚಿನಲ್ಲಿ ಯೂರೋಪ್ ಖಂಡ ಸುತ್ತಿ ಬಂದ ಪ್ರವಾಸ ಕಥನವಿದು. ನೇಮಿಚಂದ್ರ ಅವರೇ ಹೇಳುವಂತೆ "ಇದು ಝುಗಝುಗಿಸುವ ಪ್ರವಾಸಿ ತಾಣಗಳನ್ನು ನೋಡಿಬರುವ ಕಂಡಕ್ಟೆಡ್ ಟೂರ್ ಅಲ್ಲ! ಪರದೇಶದಲ್ಲಿ ಇತಿಹಾಸ, ವಿಜ್ಞಾನ, ಸಾಹಿತ್ಯ ಕಲೆಗಳ ಮೂಲಗಳನ್ನು ಅದನ್ನು ನೋಡುವ ಶೋಧಿಸುವ ಕೆಲಸವಾಗಿದೆ".[೨]

ನೇಮಿಚಂದ್ರ ಅವರ ಮತ್ತೊಂದು ಪ್ರವಾಸ ಕಥನವು ೨೦೦೪ರಲ್ಲಿ ನವಕರ್ನಾಟಕ ಪ್ರಕಾಶನದ ಮೂಲಕ ಪ್ರಕಟವಾಯಿತು. ಅದರ ಹೆಸರು 'ಪೆರುವಿನ ಪವಿತ್ರ ಕಣಿವೆಯಲ್ಲಿ' ಎಂದು. ಅಮೆರಿಕ ಸಂಯುಕ್ತ ಸಂಸ್ಥಾನವನ್ನು ಕುರಿತ ಹತ್ತಾರು ಪ್ರವಾಸ ಕಥನಗಳು

ಕನ್ನಡದಲ್ಲಿ ಪ್ರಕಟವಾಗುತ್ತಿವೆ. ಆದರೆ, ದಕ್ಷಿಣ ಅಮೆರಿಕದ ಪೆರುವನ್ನು ಕುರಿತ ಪ್ರವಾಸ ಕಥನವೊಂದು ಕನ್ನಡದಲ್ಲಿ ಮೊದಲ ಬಾರಿ ಪ್ರಕಟವಾಯಿತು. ಇದರಲ್ಲಿ ನೇಮಿಚಂದ್ರ ಅವರು ಒಂದು ಬಗೆಯ ಆಪ್ತತೆ ಹಾಗೂ ವಾಸ್ತವವನ್ನು ಕಣ್ಣಿನ ಮುಂದೆ ಅನಾವರಣಗೊಳಿಸಿದ್ದಾರೆ. ತಾಜಾ ಎನಿಸುವ ಭಾವನೆಗಳನ್ನು, ವಿಚಾರಗಳನ್ನು, ಶಕ್ತಿಯುತವಾಗಿ ತಮ್ಮ ಎರಡು ಪ್ರವಾಸ ಸಾಹಿತ್ಯ ಕೃತಿಗಳಲ್ಲಿ ಪ್ರತಿಪಾದಿಸಿದ್ದಾರೆ. ಅವರು ಕಟ್ಟುಕಟ್ಟಳೆಗಳ ಚೌಕಟ್ಟಿನಿಂದ ಹೊರಬಂದು, ಸಾಂಪ್ರದಾಯಿಕತೆಗೆ ಅಂಜದೆ ಹೊಸ ದಿಕ್ಕಿನಲ್ಲಿ ವಿಚಾರ ಮಾಡಿದ್ದಾರೆ. ಅಷ್ಟೇ ಅಲ್ಲದೆ ಅಂತಹ ವಿಚಾರಗಳನ್ನು ಬಹಿರಂಗವಾಗಿ ನಿರ್ಭಯವಾಗಿ ಪ್ರಕಟ ಮಾಡಿರುವುದು ಕಂಡುಬರುತ್ತದೆ.

ವಿದೇಶ ಪ್ರವಾಸ, ಮಧ್ಯಮ ವರ್ಗದ ಜನರಿಗೆ ದೂರದ ಕನಸಾಗಿದ್ದ ಕಾಲದಲ್ಲಿ ನೇಮಿಚಂದ್ರರಿಗೆ ತಮ್ಮ ಕನಸಿನ ಪ್ರವಾಸಕ್ಕೆ ಬೇಕಾದ ಉತ್ಸಾಹ, ಹುಚ್ಚು, ಆಸೆ ಎಲ್ಲವೂ ಇದ್ದರೂ, ಹಣ ಮತ್ತು ಸಮಯದ ಕೊರತೆಯಿತ್ತು. ತಮ್ಮ ನೆಮ್ಮದಿಯ ಬದುಕಿಗೆ ಮೂಲ ಅಗತ್ಯಗಳನ್ನು ಸಾಧಿಸಿಕೊಂಡ ನಂತರ ತಮ್ಮ ಕನಸಿನ ಪಯಣದತ್ತ ಗಮನ ಹರಿಸಿದರು. ಅವರಿಗೆ "ಸಾಹಿತ್ಯ ರಂಗವಾಗಲಿ, ವಿಜ್ಞಾನ ರಂಗವಾಗಲಿ, ವೈಮಾನಿಕ ರಂಗವಾಗಲಿ ಯಾವುದೇ ವಲಯದಲ್ಲೂ ಚರಿತ್ರೆಯ ಪುಟದಲ್ಲಿ ಮಹಿಳೆಯರು ಬಿಟ್ಟು ಹೋಗಿರುವುದು ಆಕಸ್ಮಿಕವಲ್ಲ ಎನಿಸಿತು. ಅದಕ್ಕಾಗಿ ಇತಿಹಾಸದಲ್ಲಿ ಕಳೆದುಹೋದ ಮಹಿಳಾ ವಿಜ್ಞಾನಿಗಳನ್ನೂ, ವೈಮಾನಿಕರನ್ನೂ ಹೊರ ತೆಗೆದು ಸ್ತ್ರೀ ಪರಂಪರೆಯನ್ನು ಪರಿಚಯಿಸುವ ಯತ್ನ ಕೈಗೊಂಡು ಇದನ್ನೇ ತಮ್ಮ ಅಧ್ಯಯನ ಮತ್ತು ಬರಹದ ವಸ್ತುವನ್ನಾಗಿಸಿಕೊಂಡರು".[೩]

ನೇಮಿಚಂದ್ರ ಅವರು ಬರಹಗಳಿಗಾಗಿಯೇ ಬಹಳಷ್ಟು ಅಲೆದಾಡಿದರು. ಭಾರತದ ಮಹಿಳೆಯರಿಗೆ ವೈದ್ಯರಂಗದ ಬಾಗಿಲು ತೆರೆಸಿದ ಮೇರಿ ಶರ್ಲಿಯನ್ನು ಹುಡುಕಿ ಮೂರು ಬಾರಿ ಮದ್ರಾಸಿಗೆ ಹೋದರು. ಜಲಿಯನ್ ವಾಲ್‌ಬಾಗ್ ಹತ್ಯಾಖಾಂಡದಲ್ಲಿ ಹುತಾತ್ಮನಾದ ಪತಿಯ ಹೆಣಕ್ಕೆ ಹೆಗಲು ಕೊಟ್ಟು ಹೊತ್ತು ತಂದ ಸ್ವಾಭಿಮಾನಿ ಮಹಿಳೆ ಅತ್ತರ್ ಕೌರ್‌ರನ್ನು ಹುಡುಕಿಕೊಂಡು ಅಮೃತಸರಕ್ಕೂ ಭೇಟಿ ನೀಡಿದರು. ಕೌಟುಂಬಿಕ ಕ್ರೌರ್ಯದಿಂದ ಜಿಗಿದು ಹೊರಬಂದು ನಲವತ್ತರ ವಯಸ್ಸಿನಲ್ಲಿ ವಿದ್ಯಾಭ್ಯಾಸ ಮಾಡಿ ಕಾನೂನು ಪದವಿ ಓದಿ, ಸುಪ್ರಸಿದ್ಧ ನ್ಯಾಯವಾದಿಯಾದ ಫ್ಲೇವಿಯಾರ ಜೀವನ ಚರಿತ್ರೆಯನ್ನು ಪರಿಚಯಿಸಲು ಮುಂಬಯಿಗೆ ಮೂರ್ನಾಲ್ಕು ಬಾರಿ ಅಲೆದಾಡಿದರು.

ಈ ಅಲೆದಾಟದಲ್ಲಿ ಅವರಿಗೆ ಬಲು ಪ್ರಿಯವಾದ ಸಂಗತಿಗಳಾಗಿವೆ. ಏಕೆಂದರೆ ಮಹಿಳಾ ವಿಜ್ಞಾನಿಗಳ, ಮಹಿಳಾ ವೈಮಾನಿಕೆಯರ ಶತಶತಮಾಗಳ ಚರಿತ್ರೆಯನ್ನು ಸಂಗ್ರಹಿಸುವ ಬಯಕೆಗಳೇ ನೇಮಿಚಂದ್ರ ಅವರನ್ನು ದೇಶ-ವಿದೇಶಗಳ ಮೂಲೆ ಮೂಲೆಗೆ ಕೊಂಡೊಯ್ದಿತು.

ಪರಂಪರೆಯನ್ನು ಹುಡುಕಿ ಹೊರಟ ಅವರ ವೈಯಕ್ತಿಕ ಪ್ರವಾಸಗಳ ಅನುಭವವು ಕೃತಿಯ ರೂಪದಲ್ಲಿ 'ಪ್ರವಾಸ ಸಾಹಿತ್ಯ'ವಾಗಿ ಹೊರಬಂದಿತು.

ನೇಮಿಚಂದ್ರ ಅವರಿಗೆ ದುಡಿಮೆಗೆ ಸಂಬಂಧಿಸಿದಂತೆ ಅನೇಕ ಬಾರಿ ಕಾರ್ಯಕ್ಷೇತ್ರಕ್ಕೆ ಸಂಬಂಧಿಸಿದ ಪ್ರವಾಸ ಮಾಡಿದರೂ ಅವರಿಗೆ ವಿಶೇಷವೆನಿಸುವುದಿಲ್ಲ. ಆದರೆ ಅವರಿಗೆ ಖುಷಿಕೊಟ್ಟ ಪಯಣಗಳೆಂದರೆ, ಸ್ವಲ್ಪ ಸ್ವಲ್ಪ ಹಣವನ್ನೇ ಕೂಡಿಸಿ, ವರ್ಷ ವರ್ಷಗಳು ಯೋಜಿಸಿ ಕುಡಿಕೆ ಹಣದಲ್ಲಿ ದೂರದ ಯಾವುದೋ ದೇಶದ, ಯಾವುದೋ ಮೂಲೆಯಲ್ಲಿ, ಯಾರನ್ನೋ ಹುಡುಕಿ ಹೋಗುವ ಇಂತಹ ಅಲೆದಾಟಗಳು ಮುಖ್ಯವೆನಿಸಿವೆ.

ನೇಮಿಚಂದ್ರ ಅವರ ಬದುಕು ಮತ್ತು ಪಯಣ ಜೊತೆ ಜೊತೆಯಾಗಿ ಸಾಗಿದೆ. ಪ್ರವಾಸದಲ್ಲಿಯ ಜೀವನ ದರ್ಶನ ಇವರಿಗೆ ಅಮೂಲ್ಯವೆನಿಸಿದೆ. ಇವರು ಕೈಗೊಳ್ಳುವ ಪ್ರವಾಸಗಳು ಒಂದು ನಿರ್ದಿಷ್ಟ ಉದ್ದೇಶದಿಂದ ಆರಂಭವಾದರೂ, ಗುರಿ ಮುಟ್ಟುವುದೊಂದೇ ಇವರಿಗೆ ಮುಖ್ಯವಾಗುವುದಿಲ್ಲ. ಈ ಹಾದಿಯ ಪಯಣ ಮುಖ್ಯವಾಗುತ್ತದೆ. ಏಕೆಂದರೆ ಬೇಕೆಂದಾಗ ನಿಂತು, ಅಲ್ಲಿ ಇಲ್ಲಿ ಕ್ಷಣ ಕುಳಿತುಕೊಂಡು, ಹಾದಿ ಬದಿಯ ಹೂವು, ಹಸಿರು, ಬಿಸಿಲು, ನೆರಳುಗಳನ್ನು ಆಸ್ವಾದಿಸುವುದು ಮುಖ್ಯವಾಗುತ್ತದೆ.

ಹೀಗಾಗಿ ನೇಮಿಚಂದ್ರ ಅವರೇ ಹೇಳುವಂತೆ, ಅಲ್ಪ ಹಣದಲ್ಲಿ ಅಗಾಧವಾಗಿ ಯೋಚಿಸಿ ಹೊರಟ ಈ ಕನಸಿನ ಪಯಣಗಳಿಂದ ನಾನು ಕಲಿತದ್ದು ಎಂದರೆ "ಕನಸು ಕಂಡರೆ ಸಾಕು ಹಾರಲಿಕ್ಕೆ ರೆಕ್ಕೆಗಳು ಮೊಳೆಯುತ್ತವೆ"[೪] ಕಡಿಮೆ ಹಣವಿದ್ದಷ್ಟು ಹೊತ್ತು ತರುವ ಅನುಭವಗಳು ಹೆಚ್ಚುತ್ತವೆ. ಹಾಗೆಯೇ ಮನುಷ್ಯ ಮನುಷ್ಯನ ನಡುವೆ ಸಂಪರ್ಕವಾಗಲು ಭಾಷೆಗಳು ಸಹ ಮುಖ್ಯವಾಗುವುದಿಲ್ಲ. ಮನುಷ್ಯನ ಭಾವನೆಗಳೇ ಸಂವಾದವಾಗುತ್ತದೆ ಎಂಬುದನ್ನು ನೇಮಿಚಂದ್ರ ಅವರ ಪ್ರವಾಸ ಸಾಹಿತ್ಯವನ್ನು ಓದುವಾಗ ಮನವರಿಕೆಯಾಗುತ್ತದೆ.

ಒಂದಕ್ಷರ ಹೀಬ್ರೂ ಬಾರದೆ ಇಸ್ರೇಲಿನಲ್ಲಿ, ಅರೇಬಿಕ್ ತಿಳಿಯದೆ ಪ್ಯಾಲೆಸ್ಟೈನ್‌ನಲ್ಲಿ, ಸ್ಪಾನಿಷ್ ಅರಿಯದೆ ಪೆರುವಿನಲ್ಲಿ, ಫ್ರೆಂಚ್ ಬಾರದೆ ಪ್ಯಾರಿಸ್‌ನಲ್ಲಿ ಜನರೊಡನೆ ಬೆರೆಯುತ್ತಾರೆ. ಯಶಸ್ವಿಯಾಗಿ ಸಂಪರ್ಕವನ್ನು ಸಾಧಿಸುತ್ತಾರೆ. ಇದರಿಂದ ದೇಶ ಕಾಲದ ಗಡಿಗಳಾಚೆಗೂ 'ಮಾನವನ ಭಾವನೆಗಳು ಒಂದು' ಎಂಬುವುದನ್ನು ಇವರ ಕೃತಿಯ ಮೂಲಕ ಕಾಣಬಹುದು.

ನೇಮಿಚಂದ್ರ ಅವರಿಗೆ ಕೆಲವು ಸಂದರ್ಭದಲ್ಲಿ "ಯಾರನ್ನೋ ಹುಡುಕಿ ಹೊರಟದ್ದು, ಏನನ್ನೂ ಅರಸಿ ಹೊರಟದ್ದು, ನಡೆದಂತೆ ಅವರ ಹಾದಿ ಸುಗಮವಾಗಿ ಇದರಿಂದ ಪ್ರವಾಸ ಎಷ್ಟು ಪ್ರಿಯವಾಯಿತು ಎಂದರೆ ಹಲವು ಬಾರಿ ಹೊರಟ ಮೂಲ ಉದ್ದೇಶವನ್ನೇ ಮರೆತು ಬಿಡುತ್ತಾರೆ. ಇವರ ಪಯಣದ ಅನುಭವವೇ ಅನನ್ಯ ಎನಿಸಿದೆ".[೫] ಅಷ್ಟೇ ಶಕ್ತವಾಗಿ ಬರಹದ ಮೂಲಕ ಕೃತಿಯಲ್ಲಿ ಅರ್ಥಪೂರ್ಣವಾಗಿ ಮೂಡಿಬಂದಿದೆ. ಸ್ವತಃ

ವಿಜ್ಞಾನಿಯಾಗಿದ್ದರೂ ಇತಿಹಾಸದ ಪುಟಗಳಲ್ಲಿ ಅಲೆದಾಟ, ಆಸಕ್ತಿ, ತೀವ್ರವಾದ ವಿಷಯ ಜ್ಞಾನ ಸಂಪಾದನೆ ನಿಜಕ್ಕೂ ಸೋಜಿಗವೆನಿಸುತ್ತದೆ.

ಇವರ ತಿರುಗಾಟವು ಕೇವಲ ಹೊಸ ಹೊಸ ಅರಿವು ಮತ್ತು ಅನುಭವಗಳಿಗೆ ಮಾತ್ರ ಕಾರಣವಾಗುವುದಿಲ್ಲ. ಅದು ಜಾತಿ ಮತ ಭಾಷೆ ಮತ್ತು ದೇಶಗಳ ಹೆಸರಿನಲ್ಲಿ ಇಡೀ ಪ್ರಪಂಚವೇ ಬೇರೆ ಬೇರೆ ಎಂದೆನ್ನಿಸದೇ "ನಾವೆಲ್ಲರೂ ಒಂದೇ" ಎಂಬ ಭಾವಾರ್ಥವನ್ನು ಹೊರಹೊಮ್ಮಿಸುತ್ತದೆ. ಇಂತಹ ಅಮೂಲ್ಯವಾದ ಬೆಲೆಯುಳ್ಳ ನೇಮಿಚಂದ್ರ ಅವರ ಪ್ರವಾಸ ಕಥನಗಳಿಗೆ ಯೋಗ್ಯವಾದ ಪುರಸ್ಕಾರಗಳು ಸಹ ದೊರೆತು ಅದರ ಮೌಲ್ಯವನ್ನು ಮತ್ತಷ್ಟು ಹೆಚ್ಚಿಸಿದೆ.

ಈ ಹಿನ್ನಲೆಯಲ್ಲಿ ಅವರ ಪ್ರವಾಸ ಕೃತಿಗಳಾದ 'ಒಂದು ಕನಸಿನ ಪಯಣ' ಮತ್ತು 'ಪೆರುವಿನ ಪವಿತ್ರ ಕಣಿವೆಯಲ್ಲಿ' ಕನ್ನಡದ ಅಪೂರ್ವ ಪ್ರವಾಸ ಕಲಾಕೃತಿಗಳಾಗಿವೆ. ಈ ಕೃತಿಗಳ ಅಧ್ಯಯನದ ಸಂದರ್ಭದಲ್ಲಿ ಕಂಡುಬರುವ ಅಂಶಗಳು ಹೀಗಿವೆ:

**ಒಂದು ಕನಸಿನ ಪಯಣ:** ಇದು ೧೯೯೯ರಲ್ಲಿ ಪ್ರಕಟವಾದ ಪ್ರವಾಸಕಥನ. ಇದನ್ನು ನೇಮಿಚಂದ್ರ ಅವರು ತಮ್ಮ ಗೆಳತಿ ಹೇಮಲತಾ ಮಹಿಷಿಯವರೊಡನೆ ಸೇರಿಕೊಂಡು ಯೂರೋಪ್ ಸುತ್ತಾಡಿ ಬಂದು ಬರೆದ ಪ್ರವಾಸ ಕಥನವಾಗಿದೆ. ಇದು ಕೇವಲ ಪ್ರವಾಸ ಕಥನ ಮಾತ್ರವಾಗಿರದೆ, ಅದರಾಚೆಗೆ ಮಾಹಿತಿಯ ಭಂಡಾರವನ್ನೇ ಮುಂದೊಡ್ಡುತ್ತದೆ. ಖಗೋಳಶಾಸ್ತ್ರಜ್ಞೆ ಕ್ಯಾರೋಲಿನ ಹರ್ಷಲ್ ಕತೆ, ಐನ್‌ಸ್ಟೈನ್ ಪತ್ನಿಯ ವಿವರ, ಪ್ಯಾರಿಸ್‌ನಲ್ಲಿ ಮೇರಿಕ್ಯೂರಿಯ ಸಾಧನೆಯ ವಿವರಗಳು ಇದರಲ್ಲಿ ತುಂಬಿಕೊಂಡಿವೆ. ಇಡೀ ಯೂರೋಪಿನ ಮಹಿಳಾ ಸಾಹಿತಿಗಳು, ಮಹಿಳಾ ವಿಜ್ಞಾನಿಗಳ ರೋಚಕ ಉಪಕತೆಗಳೊಂದಿಗೆ ಈ ಪ್ರವಾಸ ಕಥನವನ್ನು ಅವರು ರಚಿಸಿದ್ದಾರೆ. ಬ್ರಾಂಟೆಯ 'ಮೂರ್'ಗಳಲ್ಲಿ ಅಲೆದು, ಪ್ರಥಮ ಸ್ತ್ರೀವಾದಿ ಲೇಖಕಿ ಆಫ್ರಾಬೆನ್‌ಳ ಹಳ್ಳಿಯನ್ನು ಹುಡುಕಿ, ಆನ್ ಫ್ರಾಂಕ್‌ಳ ಗುಪ್ತ ಗೃಹವನ್ನು ಕಂಡು ಮಾಹಿತಿಗಳನ್ನು ಕಲೆಹಾಕುತ್ತಾರೆ. ರೈಟ್ಸ್ ಸಹೋದರರು ಮೊಟ್ಟ ಮೊದಲ ವಿಮಾನ ಹಾರಿಸಿದ ಕಿಟ್ಟಿ ಹಾಕ್‌ನ ಕಿಲ್ ಡೆವಿಲ್ ಗುಡ್ಡದ ಮೇಲೆ ನಿಲ್ಲುತ್ತಾರೆ. ಕೀಟ್ಸ್‌ನ ಕಾವ್ಯ ರಾತ್ರಿಗಳು ಕಳೆದ ಹ್ಯಾಂಪ್‌ಸ್ಟೆಡ್ ಹಿತ್, ವರ್ಡ್ಸ್‌ವರ್ತ್‌ನ ಲೇಕ್ ಡಿಸ್ಟ್ರಿಕ್ಟ್, ಫ್ಲಾರೆನ್ಸ್ ನೈಟಿಂಗೇಲ್‌ಗಳ ಆಸ್ಪತ್ರೆ, ಐನಸ್ಟೈನ್ ಅವರ ಮನೆ, ವ್ಯಾನ್ ಗೋನ ಬಿಸಿಲು ಹಳದಿ ಸೂರ್ಯಕಾಂತಿಗಳು ಇವೆಲ್ಲವೂ ಅವರ ಮರೆಯಲಾಗದ ಪಯಣನ ಭಾಗಗಳಾಗಿದೆ.

ಅವರ ಮೊದಲನೇ ಯಾತ್ರೆ ಯೂರೋಪಿನದ್ದಾಗಿತ್ತು. ಅಲ್ಲಿ ಅವರು ಮುಖ್ಯವಾಗಿ ಕಳೆದು ಹೋದಂತಹ ಮಹಿಳಾ ವಿಜ್ಞಾನಿಗಳ ಯಶಸ್ಸಿನ ಕತೆಗಳನ್ನು ಬರೆದರು. ಪ್ರವಾಸವನ್ನು ಕೈಗೊಂಡು ಪಡೆದುಕೊಂಡ ಅನುಭವಗಳು, ಆಶೋತ್ತರಗಳನ್ನು ಮಾದರಿ ಸಮಾಜಕ್ಕೆ ಕೊಡುಗೆಯಾಗಿ ನೀಡಲು ಶಕ್ತರಾದರು. ಈ ಮೂಲಕ ಅವರು ಮಹಿಳೆಯರಿಗೆ ಸ್ಫೂರ್ತಿಯ

ಚಿಲುಮೆಯಾಗಿದ್ದಾರೆ. ಅವರೇ ಹೇಳುವಂತೆ "ಒಂದೂವರೆ ಶತಮಾನಗಳ ಹಿಂದೆ ಮಹಿಳೆಯರಿಗೆ ವೈದ್ಯರಂಗಕ್ಕೆ ಪ್ರವೇಶವಿರಲಿಲ್ಲ. ಏಳು ದಶಕಗಳ ಹಿಂದೆ ಹೆಣ್ಣುಮಕ್ಕಳಿಗೆ ಇಂಜಿನಿಯರಿಂಗ್ ರಂಗಕ್ಕೆ ಪ್ರವೇಶವಿರಲಿಲ್ಲ. ೧೯೯೨ರವರೆಗೆ ಹೆಣ್ಣುಮಕ್ಕಳಿಗೆ ಸೇನೆಯ ಬಾಗಿಲು ಮುಚ್ಚಿತ್ತು. ಇಂದು ನಮ್ಮೆದುರು ಬಹಳಷ್ಟು ಬಾಗಿಲುಗಳು ತೆರೆದಿವೆ. ಸಾಧನೆಯ ರಂಗ ಕೈಬೀಸಿ ಕರೆದಿದೆ. ಈ ಎಲ್ಲ ಅವಕಾಶಗಳನ್ನು ನಮ್ಮ ಹೆಣ್ಣು ಮಕ್ಕಳು ಬಳಸಿಕೊಳ್ಳಲಿ ಎಂಬುದು ನನ್ನ ಆಸೆ. ಸಾಧನೆಯ ರಂಗಕ್ಕೆ, ಶಕ್ತ ಸ್ವಾವಲಂಬನೆಯ ಬದುಕಿಗೆ ಅವರನ್ನು ಆಹ್ವಾನಿಸಲು ಇಚ್ಛಿಸುತ್ತೇನೆ"[೬] ಎನ್ನುತ್ತಾರೆ.

ನೇಮಿಚಂದ್ರರ ಈ ಪ್ರವಾಸ ಕಥನದ ವಿಶೇಷತೆ ಗುರುತಿಸಿ ೨೦೦೧ನೇ ವರ್ಷದಲ್ಲಿ 'ಮಾತೃಶ್ರೀ ರತ್ನಮ್ಮ ಹೆಗ್ಗಡೆ' ಮತ್ತು 'ವಿಶ್ವೇಶ್ವರಯ್ಯ' ಪ್ರಶಸ್ತಿಗಳೆರಡೂ ಲಭಿಸಿದೆ.

ಹೀಗೆ ನೇಮಿಚಂದ್ರ ಅವರು ಮೊದಲ ವಿದೇಶಿ ಪ್ರವಾಸದ ಸಿದ್ಧತೆಯನ್ನು ಮಾಡಿಕೊಂಡು ಕೇವಲ ಒಂದು ಲಕ್ಷವನ್ನು ಕೈಯಲ್ಲಿ ಹಿಡಿದು, ಒಂದೂವರೆ ತಿಂಗಳ ಇಂಗ್ಲೆಂಡ್ ಮತ್ತು ಯೂರೋಪಿನ ಪ್ರವಾಸವನ್ನು ಯೋಜಿಸಿ, ಅದನ್ನು ಸ್ವತಃ ಕಾರ್ಯರೂಪಕ್ಕೆ ಇಳಿಸಿ ತಮ್ಮ ಬಹು ದಿನಗಳ ಕನಸನ್ನು ನನಸಾಗಿಸಿಕೊಂಡರು.

ಲಂಡನ್ ನಗರಿ, ಕ್ಯಾಂಟರ್‌ಬರಿ, ಆಕ್ಸ್‌ಫರ್ಡ್, ಹಾರ್ಬಲ್‌ಡೌನ್, ಹ್ಯಾಂಪ್‌ಸ್ಟೆಡ್ ಹೀತ್, ಬೋಡು ಬೆಟ್ಟಳ ಯಾರ್ಕ್‌ಶೈರ್, ನಿಸರ್ಗ ಸ್ವರ್ಗವಾದ ಲೇಕ್ ಡಿಸ್ಟ್ರಿಕ್ಟ್, ಪ್ಯಾರೀಸ್, ರೋಮ್, ಫ್ಲಾರೆನ್ಸ್, ಪೀಸಾ ಪಾಂಪೆ, ವೆನಿಸ್, ನಡುನೀರಿನ ಬಣ್ಣದ ದ್ವೀಪ ಬುರಾನೋ, ಸ್ವಿಟ್ಸರ್‌ಲ್ಯಾಂಡ್‌ನ ಸರೋವರಗಳು, ಬರ್ನ್‌ನಲ್ಲಿ ಐನ್‌ಸ್ಟೈನ್ ಅವರ ಮನೆ, ಶಾಮೋನಿಯ ಹಿಮದ ಶೀಖರ, ಜರ್ಮನಿ ಮುಂತಾದ ಸ್ಥಳಗಳ ಬಗ್ಗೆ ವಿಷಯವನ್ನು ಓದುತ್ತಾ ಹೋಗುವಾಗ ರೋಮಾಂಚನವಾಗುತ್ತದೆ.

'ಹೇಲ್‌ಬಾಪ್' ಧೂಮಕೇತುವಿನ ದರ್ಶನದಿಂದಲೇ ನೇಮಿಚಂದ್ರ ಮತ್ತು ಜೊತೆಗಾರ್ತಿಯಾಗಿ ಹೇಮಲತಾ ಮಹಿಷಿಯವರು ತಮ್ಮ ಪ್ರವಾಸವನ್ನು ಪ್ರಾರಂಭಿಸುತ್ತಾರೆ. ಅವರಿಗೆ ಬೇಕಾಗಿದ್ದು "ಕಂಡಕ್ಟೆಡ್ ಟೂರ್‌ಗೆ ಹೋಗಿ ಇತರರು ತೋರಿಸಿದ್ದನ್ನು ನೊಡಿಕೊಂಡು ಬರುವುದಲ್ಲ."[೭] ತಮ್ಮ ಕನಸಿನ ಕಲ್ಪನೆಗಳಿಗೆ ನೀರೆರೆದು ಅವನ್ನು ನನಸು ಮಾಡಿಕೊಳ್ಳುತ್ತ ಉದ್ದೇಶವನ್ನು ಸಾರ್ಥಕಪಡಿಸಿಕೊಳ್ಳುವುದಾಗಿತ್ತು. ಇದರ ಸಾರ್ಥಕತೆಯ ಮನರಂಜನೆ, ವಿದೇಶಗಳನ್ನು ನೋಡುವ ಹಂಬಲುತನವಲ್ಲ. ಅದಕ್ಕೆ ಬದಲಾಗಿ ಅರ್ಥಪೂರ್ಣ ಸ್ಥಳ ಮಾಹಿತಿಗಳ ಹುಡುಕಾಟವಾಗಿತ್ತು. ಹಾಗಾಗಿಯೇ ಕಥನಗೊಂಡಿರುವ ಇವರ ಪ್ರವಾಸದ ನೈಜತೆಯೂ ಎಲ್ಲರ ಹೃದಯವನ್ನು ತಟ್ಟುವಂತಹದ್ದು ಎಂದು ಹೇಳಿದರೆ ತಪ್ಪಾಗುವುದಿಲ್ಲ.

ಒಟ್ಟಾರೆಯಾಗಿ ನೇಮಿಚಂದ್ರ ಅವರು ವರ್ಷ, ವರ್ಷಗಳಿಂದ ಕಾಣುತ್ತಿದ್ದ ಕನಸಿನ ಪಯಣವನ್ನು ಪ್ರಯತ್ನದ ಮೂಲಕ ನನಸಾಗಿಸಿಕೊಂಡು ತಮ್ಮ ಬದುಕಿನ ಸಾರ್ಥಕತೆಯ ಕ್ಷಣಗಳನ್ನು ಬರಹದ ರೂಪಕ್ಕೆ ಇಳಿಸಿ ಅದನ್ನು ಎಲ್ಲರಿಗೂ ಮನಮುಟ್ಟುವ ರೀತಿಯಲ್ಲಿ ಯಶಸ್ವಿಯಾದುದನ್ನು ಅವರ ಪ್ರವಾಸ ಕಥನಗಳ ಮೂಲಕ ಕಾಣಬಹುದು.

**ಪೆರುವಿನ ಪವಿತ್ರ ಕಣಿವೆಯಲ್ಲಿ**

೨೦೧೦ರಲ್ಲಿ ಪ್ರಕಟವಾದ ಕನ್ನಡದ ವಿಶೇಷ ಪ್ರವಾಸ ಕಥನವಿದು. ಪೆರು ಕಣಿವೆಯು ದಕ್ಷಿಣ ಅಮೇರಿಕದಲ್ಲಿರುವ ಅತ್ಯುನ್ನತ ಸಾಂಸ್ಕೃತಿಕ ದಾಖಲೆ ಎನಿಸಿರುವ ಸ್ಥಳ. ಅಲ್ಲಿನ ವಿಸ್ಮಯಗಳನ್ನು ಬೆರಗುಗಣ್ಣುಗಳಿಂದ ದಾಖಲಿಸುತ್ತಾ ಓದುಗರಿಗೆ ಅದ್ಭುತವೊಂದರ ಅಪೂರ್ವ ಯಾನ ದೊರಕುವಂತೆ ಮಾಡುವಲ್ಲಿ ಲೇಖಕಿ ಯಶಸ್ವಿಯಾಗಿದ್ದಾರೆ.

"ಪೆರು ಪ್ರಾಚೀನ ನಾಗರಿಕತೆಯ ನಾಡು. ಕಡಿದಾದ ಬೆಟ್ಟದ ಸಾಲುಗಳು, ಆಳವಾದ ಕಣಿವೆಗಳು, ಅಭೇದ್ಯವಾದ ಅರಣ್ಯ. ಅನೂಹ್ಯ ವನ್ಯಪ್ರಾಣಿಗಳು, ವಿಶಾಲ ಜಲರಾಶಿ, ಪ್ರಾಕೃತಿಕ ಸಂಪತ್ತು ಗಿಡಿದು ತುಂಬಿದಂತಿರುವ ತಾಣ".[೮] ಈ ಪ್ರಕೃತಿ ವಿಶೇಷಗಳೊಂದಿಗೆ ರಾಜಿ ಮಾಡಿಕೊಂಡು ಪ್ರಾಚೀನರು ರೂಢಿಸಿಕೊಂಡು ಬಂದ ಸಂಸ್ಕೃತಿ, ಆಚರಿಸಿಕೊಂಡು ಬಂದ ಧರ್ಮ, ಕಟ್ಟಿ ಬೆಳೆಸಿದ ನಾಗರಿಕತೆ ಉತ್ಕೃಷ್ಟವಾದುದು. ಇಂತಹ ನಾಡಿಗೆ ಲೇಖಕಿಯ ಪಯಣ ಸಹೋದ್ಯೋಗಿ ಮಾಲತಿಯೊಂದಿಗೆ.

ಏರ್ಪಡಿಸಿದ ಪ್ರವಾಸದಲ್ಲಿ ಭಾಗಿಯಾಗಿ ವಿದೇಶವನ್ನು ಸುತ್ತಿಬರುವುದು ಸಾಮಾನ್ಯವಾಗಿ ಎಲ್ಲರೂ ಆಯ್ದುಕೊಳ್ಳುವ ವಿಧಾನ. ಆದರೆ ಲೇಖಕಿಗೆ ಕಡಿಮೆ ಹಣದಲ್ಲಿ ಗರಿಷ್ಠ ಕನಸುಗಳನ್ನು ಕೊಳ್ಳುವ ಪ್ರವಾಸ ಬೇಕಾಗಿತ್ತು. ಅತ್ಯಾಧುನಿಕ ಐಷಾರಾಮದ ನಗರಗಳಿಗಿಂತ ಅವಕ್ಕೆ ವಿರುದ್ಧವಾದ ಪ್ರಾಚೀನ ಸಂಸ್ಕೃತಿಯ ಬೇರುಗಳನ್ನು ಅರಸಿ ಹೋಗಬೇಕಾಗಿತ್ತು. ಅದಕ್ಕಾಗಿ ಅವರು ಮಾಡಿಕೊಂಡ ಸಿದ್ಧತೆ ಪ್ರವಾಸ ಕಥನವನ್ನು ಓದಲು ಪ್ರೇರೇಪಿಸುವಷ್ಟು ರೋಚಕವಾಗಿದೆ.

'ಪೆರು' ಎಂಬ ಬಡದೇಶದ ಹೃದಯವಂತ ಜನರೊಂದಿಗಿನ ಹೃದಯಸ್ಪರ್ಶಿ ಅನುಭವವನ್ನು ಒಳಗೊಂಡ ಇದು ಇಪ್ಪತ್ತೊಂದು ಅಧ್ಯಾಯಗಳಲ್ಲಿ ಹರವಿಕೊಂಡಿದೆ. ಪೆರು ಕಣಿವೆಗೆಂದು ಹೊರಟು, ಪರವಾನಗಿ ಇಲ್ಲದಿದ್ದರೂ, ಅಕ್ಕಪಕ್ಕದ ದೇಶಗಳಲ್ಲೂ ಸುಳಿದಾಡಿ, ಪ್ರವಾಸದಲ್ಲಿ ಎದುರಾಗುವ ಭಾಷೆಯ ತೊಡಕನ್ನು, ಕೈಬಾಯಿ ಸನ್ನೆಗಳ ಮೂಲಕ ನಿಭಾಯಿಸಿಕೊಂಡು ಅದೇ ರೀತಿ ಆಹಾರದ ಸಮಸ್ಯೆಗಳನ್ನು ಪರಿಹರಿಸಿಕೊಂಡು ಹೋದ ಕಡೆ ನಮ್ಮ ಊರಿನದೇ ಪರಿಸ್ಥಿತಿಯನ್ನು, ನಮ್ಮ ಜನರಂತೆಯೇ ಆದರಿಸುವ, ಪ್ರೀತಿಸುವ ಸ್ನೇಹಭಾವ ತೋರುವ ಜನರನ್ನೇ ಭೇಟಿ ಮಾಡಿದ ಪ್ರಸಂಗಗಳನ್ನು ನೇಮಿಚಂದ್ರ ಅವರು

ಇಲ್ಲಿ ಸ್ವಾರಸ್ಯಕರವಾಗಿ ವರ್ಣಿಸಿದ್ದಾರೆ. ಲೇಖಕಿ ಇಲ್ಲಿ ಕಟ್ಟಿಕೊಟ್ಟಿರುವ ವಿವರಗಳು ಜನಜೀವನದ ಅರ್ಥಪೂರ್ಣ ನೋಟವೂ ಅರಿವಿನ ಪಯಣಕ್ಕೆ ಊರುಗೋಲೂ ಆಗಿದೆ.

ಮಿಯಾಮಿಯಿಂದ ಪೆರುವಿನ ರಾಜಧಾನಿ ಲೀಮಾ–ನಾಸ್ಕಾ, ಅರಿಕೀಪಾ, ಕುಸ್ಕೊ, ಮಾಚುಪಿಚು, ಅಮೆಜಾನ್ ಬೇಸ್, ಅನಂತರ ಬ್ರೆಜಿಲ್‌ಗೆ – ಈ ದೀರ್ಘ ಪಯಣವನ್ನು ವಿಮಾನ, ಕಾಲ್ನಡಿಗೆ, ಬಸ್ಸು, ದೋಣಿ, ಬಾಡಿಗೆ ಕಾರು, ಮೋಟಾರು ಅಳವಡಿಸಿದ ರಿಕ್ಷಾ – ಈ ಎಲ್ಲಾ ಸಂಚಾರ ಸಾಧನಗಳನ್ನುಪಯೋಗಿಸಿ ಎರಡು ತಿಂಗಳುಗಳ ಕಾಲ ಭಾಷೆ ಬಾರದ, ಜಾಗ ತಿಳಿಯದ – ಅಪ್ಪಟ ಅಪರಿಚಿತ ಖಂಡದಲ್ಲಿ ಸಂಚರಿಸಿ ಅಮೂಲ್ಯ ಅನುಭವಗಳನ್ನು, ಅಪೂರ್ವ ಮಾಹಿತಿಗಳನ್ನು ಮೊಗೆಮೊಗೆದು ಓದುಗರಿಗೆ ನೀಡಿದ್ದಾರೆ.

"ಇನ್ಕಾ ನಾಗರಿಕತೆಯ ಬಗ್ಗೆ ಲೇಖಕಿ ಶೋಧಿಸಿ ನೀಡಿದ ಮಾಹಿತಿಗಳು ಬೆರಗುಹುಟ್ಟಿಸುತ್ತವೆ. ಸ್ಪಾನಿಷರ ದಾಳಿ ಆ ನೆಲದ ಚಿನ್ನವನ್ನು ದೇಗುಲ, ಸಮಾಧಿಗಳನ್ನಷ್ಟೇ ಲೂಟಿ ಮಾಡಲಿಲ್ಲ. ಆ ನೆಲದ ಇತಿಹಾಸವನ್ನೂ ಅಳಿಸಿ ಹಾಕಿತು. ಸುಮಾರು ಐದು ನೂರಕ್ಕಿಂತಲೂ ಅಧಿಕ ವರ್ಷಕ್ಕೆ ಹಿಂದಿನ ೨೨೦೦ ಮಮ್ಮಿಗಳು ಒಂದೇ ತಾಣದಲ್ಲಿ ದೊರಕಿವೆ ಎಂದಾದರೆ ಆಕ್ರಮಣಕಾರರ ಕ್ರೌರ್ಯದ ಅಳತೆ ಎಷ್ಟಿರಬಹುದು"[೯] ಎಂಬುದನ್ನು ಊಹಿಸಬಹುದು.

ಇನ್ಕಾ ಸಾಮ್ರಾಜ್ಯದ ರಾಜ ಅತಹುಲ್ಪನನ್ನು ಮೋಸದಿಂದ ತನ್ನ ಡೇರೆಗೆ ಬರಮಾಡಿಕೊಂಡ ಸ್ಪೇನಿನ ದಾಳಿಕೋರ ಪಿಜಾರೋ "ಆತನನ್ನು ಬಿಡುಗಡೆ ಮಾಡಬೇಕಾದರೆ ೨೨ ಅಡಿ ಉದ್ದ ೧೭ ಅಡಿ ಅಗಲದ ಆ ಕೋಣೆಯ ತುಂಬ ಚಿನ್ನವನ್ನು ತುಂಬಲು"[೧೦] ಹೇಳುತ್ತಾನೆ. ಸೈನ್ಯ ಅಂತೆಯೇ ನಡೆದುಕೊಳ್ಳುತ್ತದೆ. ಆದರೆ ರಾಜನನ್ನು ಬಿಡುಗಡೆ ಮಾಡದೆ ಕ್ರೈಸ್ತಧರ್ಮಕ್ಕೆ ಪರಿವರ್ತಿಸಲು ನೋಡಲಾಯಿತು. "ಯಾರದೋ ರಾಜ್ಯಕ್ಕೆ ಬಂದು, ಎಲ್ಲಿಂದಲೋ ಹೊತ್ತು ತಂದ ಧರ್ಮಕ್ಕೆ ಪರಿವರ್ತಿಸಲು ಒತ್ತಾಯ!"[೧೧] ಒಪ್ಪದ ರಾಜನಿಗೆ ಮರಣದಂಡನೆ ವಿಧಿಸಲಾಯಿತು. ಕೊನೆಗೆ ಪ್ರಾಣಉಳಿಸಿಕೊಳ್ಳಲು ಬ್ಯಾಪ್ಟೈಸ್ ಮಾಡಿಕೊಳ್ಳಲು ಒಪ್ಪಿದ. ಆದರೂ ಕ್ರಿಸ್ತಧರ್ಮದ ದೀಕ್ಷೆ ನೀಡಿ ಇದೇ ಚೌಕದಲ್ಲಿ ಆತನ ಕತ್ತು ಹಿಸುಕಿ ಕೊಲ್ಲಲಾಯಿತು. ಅಲ್ಲಿಂದ ಇನ್ಕಾ ಸಂಸ್ಕೃತಿ ಅವನತಿಯತ್ತ ಮುಖ ಮಾಡಿತು. ಚಿನ್ನದ ನಾಡಿನಲ್ಲಿ ರಕ್ತದ ಹೊಳೆ ಹರಿಯಿತು. ಸ್ಪೇನ್ ದೇಶಕ್ಕೆ ಚಿನ್ನದ ಹೊಳೆ ಹರಿಯಿತು. ಶತಮಾನಗಳ ಹಿಂದೆ ಸ್ಪಾನಿಷರ ದುರಾಕ್ರಮಣದಿಂದ ಚಿನ್ನದ ಹೊಳೆ ಪೆರುವಿನಾಚೆಗೆ ಹರಿದರೆ ಇಂದು ಬಹುರಾಷ್ಟ್ರೀಯ ಕಂಪೆನಿಗಳು ಪೆರುವನ್ನು ದೋಚುತ್ತಿವೆ. ಲೀಮಾದ ಶ್ರೀಮಂತ ಬಡಾವಣೆಗಳಲ್ಲಿ ಅಮೆರಿಕದ ಸರಣಿ ಅಂಗಡಿಗಳು ರಾರಾಜಿಸಿ ಅಭಿವೃದ್ಧಿಯ ಭ್ರಮೆಹುಟ್ಟಿಸಿವೆ. ಆದರೆ ದೇಶದ ಕೋಟಿ ಕೋಟಿ ಜನರ ಸ್ಥಿತಿ ಮತ್ತಷ್ಟು ಹದಗೆಟ್ಟಿದೆ.

೪೬೦ ವರ್ಷಗಳ ಹಿಂದೆ ಒಂದು ಕೋಣೆಯ ತುಂಬಾ ಪಿಜಾರೋಗೆ ನೀಡಿದ ಚಿನ್ನದ ಒಂದೂವರೆಯಷ್ಟು ಚಿನ್ನವನ್ನು ಒಂದೇ ವರ್ಷದಲ್ಲಿ 'ಯನಕೋಟಾ' ಚಿನ್ನದ ಗಣಿಯಿಂದ ನಿರಾಯಾಸವಾಗಿ ತೆಗೆದರು. ಆದರೆ ಈ ನೆಲದ ಚಿನ್ನ ಈ ಜನರ ಕೈಗಿಲ್ಲ, ಬಾಯಿಗಿಲ್ಲ. ಚಿನ್ನದ ಅದುರಿಗೆ ಸುರಿಯುವ ಸಯನೈಡ್ ಇಡೀ ಪರಿಸರವನ್ನು ವಿಷಮಯಗೊಳಿಸುತ್ತಿದೆ.

ಇನ್ನೊಂದು ಹೃದಯ ವಿದ್ರಾವಕ ಕಥೆ ಇಕಿಟಸ್‌ನ ರಬ್ಬರ್ ಬೆಳೆಗಾರರದ್ದು. "ವುಟುಮಾಯೋ ಟ್ರಯಲ್ ಎಂದು ಕುಖ್ಯಾತವಾದ ಈ ಹತ್ಯಾ ಸರಣಿ ಎಂಥವರನ್ನೂ ಬೆಚ್ಚಿ ಬೀಳಿಸುತ್ತದೆ."[೧೨] ಇಂತಹ ಹಲವಾರು ಇತಿಹಾಸದ ನೈಜ ಚಿತ್ರಣಗಳಲ್ಲದೆ ಲೇಖಕಿ ಮಾಲತಿಯವರೊಂದಿಗೆ ಸಂದರ್ಶಿಸಿದ ಸ್ಥಳ. ಸಂಪರ್ಕಕ್ಕೆ ಬಂದ ವ್ಯಕ್ತಿಗಳು, ಊಟ ಉಡುಗೆ-ತೊಡುಗೆ, ಮಿಗಿಲಾಗಿ ಅಲ್ಲಿನ ಜನರ ಸರಳತೆ, ಸಭ್ಯತೆ, ಬಲಾತ್ಕಾರವಾಗಿ ನಾಗರಿಕತೆಯ ಕತ್ತು ಹಿಸುಕಿದರೂ ಮೆಲ್ಲಮೆಲ್ಲನೆ ಉಸಿರಾಡುತ್ತಿರುವ ಸಂಸ್ಕೃತಿಯ ಬೇರುಗಳು ಬಹಳ ಆಪ್ತವಾಗುತ್ತವೆ.

ಆಂತರಿಕ್ಷದಿಂದ ಮಾತ್ರ ನೋಡಬಹುದಾದ ನಾಸ್ಕಾಗೆರೆಗಳು, ದೈತ್ಯಚಿತ್ರಗಳು, ಪ್ರಾಚೀನ ಪೆರುವಿಗರ ಅದ್ಭುತ ಕಲ್ಪನಾ ಶಕ್ತಿಯನ್ನೂ, ಜ್ಯಾಮಿತಿ ಜ್ಞಾನವನ್ನೂ ಅನಾವರಣಗೊಳಿಸುತ್ತದೆ. ನಾಸ್ಕಾ ಗೆರೆಗಳ ಉಳಿವಿಗೆ ಕಾರಣವಾದ ವಿಜ್ಞಾನಿ ಮರಿಯಾ ರೇಕಿಯಾ ಕಥೆ, ಪೆರುವಿನ ಮಹಿಳಾ ಹೋರಾಟಗಾರ್ತಿ ಎಲಿನಾಳ ಕಥೆ, ಸಂತ ಕ್ಯಾರೋಲಿನಾ ಮೊನೆಸ್ಟ್ರಿಯ ನಿಗೂಢತೆ, ಅಮೆಜಾನ್ ನದಿಯಲ್ಲಿ ತೇಲಿದ ಅನುಭವ - ಹೀಗೆ ನೂರಾರು ಸಂಗತಿಗಳನ್ನು ಒಳಗೊಂಡಿದೆ. ಈ ಅದ್ಭುತರಮ್ಯ 'ಪೆರುವಿನ ಪವಿತ್ರ ಕಣಿವೆಯಲ್ಲಿ' ಪ್ರವಾಸ ಕಥನ.

ಅಂದು ನಡೆದ ಅನಾಗರಿಕವಾದ, ಆರ್ಥಿಕ-ಮತೀಯ ದುರಾಕ್ರಮಣಗಳು ಇಂದೂ ಸಭ್ಯತೆಯ ಸೋಗಿನಲ್ಲಿ, ಸೇವೆಯ ಹೆಸರಿನಲ್ಲಿ ನಡೆಯುತ್ತಿರುವುದನ್ನು ಜಾಗತಿಕ ಮಟ್ಟದಲ್ಲೇ ತಡೆಯಬೇಕಾಗಿದೆ. ಕೆಚುವಾ ಭಾಷೆಯಲ್ಲಿ 'ಮುನವೇ ವಿನಾಯ್ಪಾಕ್' ಎಂದರೆ 'ನನ್ನನ್ನು ಎಂದೆಂದಿಗೂ ಪ್ರೀತಿಸು'[೧೩] ಎಂದು ಅರ್ಥ. ಲೇಖಕಿ ಹೇಳುತ್ತಾರೆ "ಈ ನೆಲ, ಈ ಪರ್ವತಗಳು, ಈ ಕಣಿವೆ, ಹರಿವ ಉರುಬಂಬಾ ನದಿ ಕೂಗಿ ಹೇಳುತ್ತಿತ್ತು - ನನ್ನನ್ನು ಹಾಳು ಮಾಡಬೇಡಿ 'ಮುನವೇ ವಿನಾಯ್ಪಾಕ್!'"[೧೪]

ಈ ಪ್ರವಾಸ ಕಥನವು ನೇಮಿಚಂದ್ರ ಅವರ ಅಧ್ಯಯನ, ಅವಲೋಕನ, ಸಹೃದಯ ಸ್ಪಂದನ ಹಾಗೂ ಸಾಹಸ ಪ್ರವೃತ್ತಿಯ ಒಂದು ಅಮೂಲ್ಯ ಕೊಡುಗೆಯಾಗಿದೆ. ಅವರ ನವಿರು ಹಾಸ್ಯ, ಸಶಕ್ತ ಬರವಣಿಗೆ, ಅಪರೂಪದ ಚಿತ್ರಗಳು ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿವೆ. ಭಾರತೀಯರಾದ ಇವರನ್ನು ಅಲ್ಲಿನ ಜನ ಗೌರವಿಸಿ ಉಪಚರಿಸುವ ಪರಿ ಖುಷಿ ಕೊಡುತ್ತದೆ.

ಈ ಪ್ರವಾಸ ಕಥನದ ಮೂಲಕ ಕಾಲಾತೀತವಾದ ಸತ್ಯವನ್ನು ಹಿಡಿದಿಟ್ಟಿರುವುದನ್ನು ಕಾಣಬಹುದು. ಇತರರ ಬದುಕನ್ನು ಬೆಳಗಲು, ಈ ಕ್ಷಣದ ಜೀವನವನ್ನು ಅವರಿಗೆ ಸಹ್ಯವಾಗಿಸಲು ನಾವು ದೊಡ್ಡ ತ್ಯಾಗವನ್ನು ಮಾಡಬೇಕಿಲ್ಲ. ಕಡು ಪರಿಶ್ರಮವನ್ನು ಹಾಕಬೇಕಿಲ್ಲ. ನಮ್ಮ ಸಣ್ಣ ಸಹಾಯ, ಸಹೃದಯತೆಯ ಪುಟ್ಟ ಕಾಯಕ, ಯಾರದೋ ದಿನವನ್ನು ಬೆಳಗಿರುತ್ತದೆ. ಕೆಲವೊಮ್ಮೆ ಬದುಕನ್ನು ಬದಲಿಸಿರುತ್ತದೆ ಎಂಬುದಾಗಿ ನೇಮಿಚಂದ್ರ ಅವರು ಲೋಕಾತೀತವಾದ ಜೀವನ ದರ್ಶನವನ್ನು ವ್ಯಕ್ತಪಡಿಸುತ್ತಾರೆ.

ಭಾರತ ಬೆಳಗಬೇಕು, ಆರ್ಥಿಕವಾಗಿ ಶಕ್ತವಾಗಬೇಕು. ಆದರೆ "ನಾವು ವಿದೇಶಿ ಮಾದರಿಯಲ್ಲಿ ಲಾಸ್ ವೇಗಸ್‌ನಂತಹ ಜೂಜುಕಟ್ಟೆಗಳನ್ನು ಕಟ್ಟಿ, 'ಸೆಕ್ಸ್ ಟೂರಿಸಂ' ಅನ್ನು ಆಕರ್ಷಿಸಿ 'ಮುಂದುವರೆದ' ದೇಶವಾಗುವುದು ಬೇಡ. ಈ ನೆಲದ ಬಣ್ಣಗಳನ್ನು ಬಿತ್ತರಿಸಿ, ನಮ್ಮೊಳಗಿನ ಅಂತಃಶಕ್ತಿಯನ್ನು ಜಾಗೃತಗೊಳಿಸಿ, ನೊಂದು ಆಯಾಸಗೊಂಡ ಮನಸ್ಸುಗಳನ್ನು ಗುಣವಾಗಿಸಬಲ್ಲ ವಾತಾವರಣವನ್ನು ಸೃಷ್ಟಿಸಿ ಜಗತ್ತನ್ನು ಇತ್ತ ಆಕರ್ಷಿಸಲು ಸಾಧ್ಯವಿದೆ."[೧೫]

ಒಟ್ಟಾರೆಯಾಗಿ ಅನೇಕ ವಿದೇಶಗಳನ್ನು ಸುತ್ತಿ ಬಂದರೂ ತಮ್ಮ ದೇಶದ ಅಭಿಮಾನದ ಆಗಾಧವಾದ ಸಂದೇಶವನ್ನು ಕೃತಿಯ ಮೂಲಕ ತಿಳಿಸುತ್ತಾರೆ.

**ಎರಡು ಪ್ರವಾಸ ಕಥನಗಳಿಗಿರುವ ಸಾಮ್ಯತೆ**

ನೇಮಿಚಂದ್ರ ಅವರ ಬದುಕು ಮತ್ತು ಪಯಣ ಜೊತೆಜೊತೆಯಾಗಿ ಸಾಗಿದೆ. ಏಕೆಂದರೆ ಅವರ ಅಂತರಂಗದಲ್ಲಿ ಮನೆಮಾಡಿದ್ದ ಪ್ರಶ್ನೆಗಳಿಗೆ ಚಿಂತನೆಗಳಿಗೆ ಉತ್ತರ ರೂಪವಾಗಿ ಕಂಡುಕೊಂಡಂತಹ ಮಾರ್ಗ ಪ್ರವಾಸವಾಗಿದೆ. ಅವರೇ ಹೇಳುವಂತೆ, ಬಾಲ್ಯದಿಂದ ಬಂದಂತಹ ಆಲೋಚನೆಗಳಿಗೆ ತಾನು ಕಂಡ ಜನರನ್ನು, ಜಗತ್ತನ್ನು ಪ್ರತಿಬಿಂಬಿಸುವುದರಿಂದ "ನನ್ನ ಪ್ರವಾಸದಲ್ಲಿನ ಜೀವನ ದರ್ಶನ ನನಗೆ ಅಮೂಲ್ಯವೆನಿಸಿದೆ"[೧೬] ಎಂಬ ಅಂಶದ ಪ್ರತಿಬಿಂಬವಾಗಿ ಎರಡು ಪ್ರವಾಸ ಕಥನಗಳು ಸಾಕ್ಷಿಯಾಗಿ ನಿಲ್ಲುತ್ತದೆ.

ಒಂದು ನಾಡನ್ನು ಮತ್ತು ಅದರ ಜೀವನಕ್ರಮವನ್ನು ನೋಡಲೆಂದೇ ನೇಮಿಚಂದ್ರ ಅವರು ಪ್ರವಾಸ ಮಾಡಿದ್ದಾರೆ. ಅನೇಕ ಸಾಧಕರ, ಇತಿಹಾಸದಲ್ಲಿ ದಾಖಲೆಯಾಗಿ ಉಳಿಯದ ಮಹಿಳಾ ಮಣಿಗಳ ಬಗ್ಗೆ ಖುದ್ದು ಮಾಹಿತಿ ಸಂಗ್ರಹಿಸಿಕೊಂಡು, ಇತಿಹಾಸವನ್ನು ಕೆಣಕುತ್ತಾ, ವರ್ತಮಾನಕ್ಕೆ ಪರಿಚಯಿಸುವುದರ ಮೂಲಕ ನಮಗೆ ಭವ್ಯಭವಿಷ್ಯವನ್ನು ಕಟ್ಟಿಕೊಟ್ಟಿದ್ದಾರೆ.

ಇವರ ಎರಡು ಕೃತಿಯಲ್ಲೂ ಸಮತೆಯ ಅಂಶಗಳನ್ನು ಕಾಣಬಹುದು. ಮಹಿಳಾ ಚಳುವಳಿಯ ಪರಸ್ಪರ ಅನುಭವವನ್ನು ಹಂಚಿಕೊಂಡ ನೇಮಿಚಂದ್ರ ಅವರು ಕ್ಯಾಂಟರ್‌ಬರಿಯಲ್ಲಿರುವ "ಜೋಸೆಫೀನ್ ಬಟ್ಲರ್" ಸಂಸ್ಥೆಯ ಮಹಿಳಾ ಹೋರಾಟದ ಬಗ್ಗೆ ಅದೇ ರೀತಿ ಭಾರತೀಯ ಮಹಿಳಾ ಹೋರಾಟದ ಬಗ್ಗೆ ಲೇಖಕಿಯರ ಸಂಘ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರಗಳ ಬಗ್ಗೆ ಮಾತನಾಡುತ್ತಾರೆ. ಹನ್ನೆರಡು ವರ್ಷಗಳಿಂದ

ಸತತವಾಗಿ ಹೊರತರುತ್ತಿರುವ ಮಹಿಳಾ ಅಧ್ಯಯನಕ್ಕೇ ಮೀಸಲಾದ ತಮ್ಮ "ಅಚಲ" ಪತ್ರಿಕೆಯ ಬಗ್ಗೆ ತಿಳಿಸುತ್ತಾರೆ. ಮುಖ್ಯವಾಗಿ ಇಲ್ಲಿ ಹಂಚಿಕೊಂಡಂತೆ ಸ್ತ್ರೀ ಸಮಸ್ಯೆಗಳು ಕಾಲ ದೇಶದ ಗಡಿಯಾಚೆಗೂ ಒಂದೇ ಆಗಿದೆ ಎಂಬುವುದನ್ನು ತಿಳಿದುಕೊಳ್ಳಬಹುದು.

ನೇಮಿಚಂದ್ರ ಅವರು ಪ್ರವಾಸದ ಸಂದರ್ಭದಲ್ಲಿ ವಿದೇಶಿ ನೆಲದವರ ಕೆಲವು ಭಾವನೆಗಳಿಗೆ ಆತಂಕಗೊಂಡದ್ದು ಉಂಟು. ಏಕೆಂದರೆ ದೇಶಿಯ ನೆಲದಲ್ಲಿ ಜನರ ಆತ್ಮೀಯತೆ–ಬಾಂಧವ್ಯಗಳು ಒಬ್ಬರಿಗೊಬ್ಬರು ಮುಖಪರಿಚಯವಿಲ್ಲದಿದ್ದರೂ ಅನೇಕ ಸಮಾನ ಅಂಶಗಳು ವ್ಯಕ್ತಿಗಳನ್ನು ಪರಸ್ಪರ ಒಗ್ಗೂಡಿಸುತ್ತದೆ. ಆದರೆ ವಿದೇಶಿ ನೆಲದಲ್ಲಿ ವೇಗದ ಬದುಕಿಗೆ ಒಗ್ಗಿಕೊಂಡ ಜನರಿಗೆ ಭಾವನೆಗಳಿಗಿಂತ ಹಣವನ್ನು ಸಂಪಾದನೆಯೇ ಮುಖ್ಯ ಉದ್ದೇಶವಾಗಿರುವುದನ್ನು ಕಾಣುತ್ತೇವೆ. ಹಾಗಾಗಿ ಇಂತಹವರ ನಡುವೆ ಆತ್ಮೀಯತೆಯ ಬೆಸುಗೆ ಕಡಿಮೆ ಎಂದೇ ಹೇಳಬಹುದು.

ಇಂತಹ ಒಂದು ಸಂದರ್ಭವು "ವೂಲ್ವೆರ್ ಹ್ಯಾಂಪ್ಟನ್ ವಿಶ್ವವಿದ್ಯಾನಿಲಯದ ವಾಲ್ಸಾಲ್ ಕ್ಯಾಂಪಸ್‌ನಲ್ಲಿ ಏರ್ಪಡಿಸಿದ್ದ ಕನ್ನಡ ಸಂಘದ ಕಾರ್ಯಕ್ರಮ"[೧೭]ದಲ್ಲಿ ಕಂಡುಬರುತ್ತದೆ. ಹೊರನಾಡ ಕನ್ನಡಿಗರನ್ನು ಭೇಟಿಯಾಗುವ ಕುತೂಹಲದಲ್ಲಿ ಮಾಹಿತಿಯನ್ನು ಸರಿಯಾಗಿ ತಿಳಿದುಕೊಳ್ಳದೇ ಪ್ರಯಾಣಕ್ಕೆ ಹೆಚ್ಚು ದರವನ್ನು ತೆರುತ್ತಾರೆ. ಕನ್ನಡ ಬಳಗದ ಕಾರ್ಯಕ್ರಮಗಳನ್ನೆಲ್ಲಾ ಇಂಗ್ಲಿಷ್‌ನಲ್ಲೇ ನಿರೂಪಿಸುವುದು, ಕನ್ನಡದ ಸಮಾರಂಭವಾದರೂ ಕೇವಲ ಕನ್ನಡಿಗರ ಕರ್ನಾಟಕದ ಬಳಗವಾಗಿ ಕಂಡುಬರುತ್ತದೆ. ಇವರಿಗೆ ಆತ್ಮೀಯವಾದ ಒಂದು ನುಡಿ ಇಲ್ಲದೆ, ಒಂದು ಕಡೆ ಪ್ರೇಕ್ಷಕರಾಗಿ ಕುಳಿತುಕೊಂಡಿದ್ದ ಸಂದರ್ಭದಲ್ಲಿ ತುಂಬ ಸಮಯದ ನಂತರ ಇವರ ಬಯೋಡಾಟಾ ಹಿಡಿದುಕೊಂಡು ತಕ್ಷಣವೇ ವೇದಿಕೆಗೆ ಕರೆದು ಪರಿಚಯವನ್ನು ಮಾಡಿಕೊಡುತ್ತಾರೆ. ಇವರು ತಾವು ಅಂದುಕೊಂಡಿದ್ದ ಪ್ರವಾಸದ ಕನಸುಗಳನ್ನು ಒಂದೊಂದಾಗಿ ಹೇಳುತ್ತಾರೆ. ಅಲ್ಲಿದ್ದವರು ಇವರಿಗೆ ಮಹಿಳೆಯರಿಬ್ಬರೇ ಹೊರಟ ಈ ಪಯಣ ಇತರರಿಗೂ ಸ್ಫೂರ್ತಿ ನೀಡಲಿ ಎಂದು ಹಾರೈಸುತ್ತಾರೆ. ಅನುಭವ, ತಿಳುವಳಿಕೆ, ಒಂದು ದೇಶದ ಸಂಸ್ಕೃತಿಯ ನಾಗರಿಕತೆಯ ಪರಿಚಯವು ಆಧುನಿಕ ಕಾಲದಲ್ಲಿ ಯಾವ ರೀತಿ ವ್ಯಕ್ತವಾಗುತ್ತದೆ ಎಂಬುದನ್ನು ಕಾಣಬಹುದು.

ಆಧುನಿಕ ಸಂಸ್ಕೃತಿಯನ್ನು ಪರಿಚಯಿಸುತ್ತಾ ಲಂಡನ್ ನಗರಿಯಲ್ಲಿ ಕಂಡುಬಂದ ಫ್ಯಾಷನ್ ಜಗತ್ತನ್ನು ತಿಳಿಸುತ್ತಾರೆ. ಇತ್ತೀಚಿನ ಫ್ಯಾಡ್ ಎಂದರೆ ಎಲ್ಲೆಂದರಲ್ಲಿ ಚುಚ್ಚಿಕೊಂಡು ರಿಂಗ್ ಹಾಕಿಕೊಳ್ಳುವುದು, ಚಿತ್ರ–ವಿಚಿತ್ರವಾಗಿ ಕಿವಿ, ಮುಗು, ತುಟಿ, ಹುಬ್ಬುಗಳಿಗೆ ಚುಚ್ಚಿಸಿಕೊಂಡು ರಿಂಗ್ ಹಾಕಿಕೊಂಡ ಜನ. ತಲೆಗೆ ಹಸಿರು, ಕೇಸರಿ ಬಣ್ಣ ಬಳಿದುಕೊಂಡ ಜನ, ಹೊಸತೇನನ್ನೋ ಹುಡುಕಿ ಹೊರಟ ಜನರನ್ನು ಕಾಣುತ್ತಾರೆ.

ಅಲ್ಲಿ ಸ್ವಚ್ಛತೆ, ಸೌಂದರ್ಯದ ನಡುವೆಯೂ ಬೋರ್ ಎನಿಸುತ್ತದೆ. ಬಸ್ಸಿನಲ್ಲಿ ಸದ್ದುಗದ್ದಲವಿಲ್ಲದ ಮೌನ, ಖಾಲಿಖಾಲಿ ರಸ್ತೆಗಳು. ಇಲ್ಲಿ ಹಗಲು ಹಿಗ್ಗುವ ಈ ಬೇಸಿಗೆಯ ದಿನಗಳಲ್ಲೂ, ಸಂಜೆ ಐದು, ಆರಕ್ಕೆಲ್ಲ ಅಂಗಡಿಗಳು ಬಂದ್ ಆಗುತ್ತಿದ್ದವು. ಇವೆಲ್ಲವೂ ಮನಸ್ಸಿಗೆ ಖುಷಿಕೊಡುವ ಪರಿಸ್ಥಿತಿಯಾಗದೇ ಬೇಸರವನ್ನೇ ತರಿಸಿದ್ದವು.

ಅನಿವಾಸಿ ಭಾರತೀಯರು ಆರೋಪಿಸುವ "ಭಾರತದಲ್ಲಿ ಸ್ವಚ್ಛತೆಯಿಲ್ಲ, ವ್ಯವಸ್ಥೆಯಿಲ್ಲ ಲಂಚಸರ್ವಾಂತರ್ಯಾಮಿಯಾಗಿದೆ"[೧೮] ಎಂಬುದೆಲ್ಲವೂ ನಿಜವಿತ್ತು. ಅದನ್ನು ಕುರಿತು, "ನಿಮ್ಮ ದೇಶದ ಸ್ವಚ್ಛತೆ, ವ್ಯವಸ್ಥೆ ಎಲ್ಲವನ್ನು ಖಂಡಿತಾ ನಮ್ಮ ದೇಶದಲ್ಲಿ ಬಯಸುತ್ತೇನೆ. ಆದರೆ ಅದರೊಡನೆ ಹಣವೇ ಮುಖ್ಯ, ಗೆಲುವೇ ಸರ್ವಸ್ವ ಎಂಬ ಒತ್ತಡ ಇನ್ನಷ್ಟು ಬೇಕು ಎಂಬ ಅಖಂಡ ಕೊಳ್ಳುಬಾಕತನವೂ ಇದು ಯಾವುದು ಬೇಡ ನಮ್ಮ ನೆಲದ ನೂರಾರು ಸಮಸ್ಯೆಗಳಿವೆ. ಅವು ನಮ್ಮ ಸಮಸ್ಯೆಗಳು. ಪರಿಹರಿಸಲು ನಮಗೆ ಬಿಡಿ"[೧೯] ಎನ್ನಬೇಕೆನಿಸುತ್ತಿತ್ತು ನೇಮಿಚಂದ್ರ ಅವರಿಗೆ.

ಹೀಗೆ ರಾಷ್ಟ್ರರಾಷ್ಟ್ರಗಳ ಬದುಕು ಬವಣೆಗಳನ್ನು ತೌಲನಿಕವಾಗಿ ತೂಗಿ ನೋಡಿದಾಗ ನಮ್ಮ ಭಾರತದಲ್ಲಿ ಏನಿಲ್ಲದಿದ್ದರೂ ಬದುಕುಳಿಯುವ ಜನರಿದ್ದಾರೆ. "ಬದುಕು ಹೋರಾಟವಾದಾಗ, ಹೋರಾಡಿ ಬದುಕುವ ಜೀವನೋತ್ಸಾಹದ ಜನರನ್ನು ಕಾಣಬಹುದು. ಲಂಡನ್‌ನಲ್ಲಿ ಕಾಣದಷ್ಟು ನಗುವ ಮುಖಗಳನ್ನು ಮುಂಬಯಿಯ ಕಿಕ್ಕಿರಿದ ರೈಲುಗಳಲ್ಲಿ ಕಾಣುತ್ತೇವೆ."[೨೦] ನೇಮಿಚಂದ್ರ ಅವರ ಈ ಮಾತುಗಳಲ್ಲಿ ಉದ್ರೇಕವಿದ್ದರೂ, ಭಾರತೀಯರು ಭಾವುಕಜೀವಿಗಳು ಎಂಬುದನ್ನು ವಾಸ್ತವವಾಗಿ ನೆನಪಿಸುತ್ತವೆ.

ನೇಮಿಚಂದ್ರ ಅವರು ಪ್ರವಾಸದ ಸ್ಥಳಗಳಿಗೆ ಭೇಟಿ ನೀಡುವ ಸಂದರ್ಭದಲ್ಲಿ ಹೆಚ್ಚಾಗಿ ಕಾಲ್ನಡಿಗೆಯಲ್ಲಿ ತಿರುಗಾಡುತ್ತಿದ್ದರು. ಆದಷ್ಟು ಪ್ರತಿಜಾಗದಲ್ಲಿ ನಡೆಯಲು ಪ್ರಯತ್ನಿಸಿದರು. ಈ ಮೂಲಕ ಅಲ್ಲಿಯ ಜನರ ಬಗ್ಗೆ, ಜಾಗದ ಬಗ್ಗೆ ಹೆಚ್ಚಿನ ಮಾಹಿತಿಗಳನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತಿತ್ತು. ಇದನ್ನೆಲ್ಲಾ ನೋಡಿದಾಗ ಇವರ ಪ್ರವಾಸ ಆರಾಮವಾಗಿ ಸುತ್ತಿಕೊಂಡು ಹೋಗಿದಂತೆ ಕಂಡುಬರುವುದಿಲ್ಲ. ನೆಚ್ಚಿನ ಸ್ಥಳಗಳಿಗೆ ಭೇಟಿನೀಡಲು ಅನೇಕ ಪುಸ್ತಕದಂಗಡಿಗಳಿಗೆ, ಬಸ್‌ಸ್ಟಾಪ್ ಟ್ಯೂಬ್‌ಗಳ ಸಹಾಯ, ಅದೇ ರೀತಿ ಹಾಗೂ ತಿಳಿಯದಿದ್ದರೆ ಬೀದಿಯಲ್ಲಿ ಹಾಯುವ ಕೊಂಚ ವಯಸ್ಸಾದವರನ್ನು, ಮೆಲ್ಲನೆ ನಡೆಯುತ್ತಿರುವವರನ್ನು ನಿಲ್ಲಿಸಿಕೊಂಡು ಮಾರ್ಗದರ್ಶನ ಕೇಳುತ್ತಿದ್ದರು. ಅತಿ ತ್ರಾಸದಾಯಕವಾದ ಕೆಲಸವಾದರೂ, ಇಚ್ಛೆಯಿಂದ ತೃಪ್ತಿಯಾಗುವ ರೀತಿಯಲ್ಲಿ ಒಂದು ಸ್ಥಳದ ಬಗ್ಗೆಯಾಗಿರಲೀ, ವ್ಯಕ್ತಿ ಬಗ್ಗೆಯಾಗಲೀ, ಇತಿಹಾಸಕ್ಕೆ ಸಂಬಂಧಿಸಿದ್ದು ಆಗಿರಲೀ ಸಂಪೂರ್ಣವಾದ ವಿಚಾರವನ್ನು ಸಂಗ್ರಹಿಸುವ ಪರಿ ಬೆರಗುಗೊಳಿಸುತ್ತದೆ. ಸ್ವತಃ ಸುಖಕ್ಕಿಂತ ಮನರಂಜನೆಗಿಂತ ಮಿಗಿಲಾಗಿ ಸಮಾಜಕ್ಕೆ ಅಮೂಲ್ಯವಾದ ಕೊಡುಗೆಯನ್ನು ಪ್ರವಾಸ ಕಥನದ ಮೂಲಕ ನೀಡಿದ್ದಾರೆ.

ಭಾರತದಲ್ಲಿ ಇದುವರೆಗಿನ ಪ್ರವಾಸ ಕಥನಗಳೆಲ್ಲಾವು ಒಂದು ರೀತಿ ಜ್ಞಾನದ ತಿಳುವಳಿಕೆಯನ್ನು ನೀಡಿದರೆ, ನೇಮಿಚಂದ್ರ ಅವರ ಪ್ರವಾಸ ಕಥನವು ಮತ್ತೊಂದು ರೀತಿಯಲ್ಲಿ ತಿಳುವಳಿಕೆಯನ್ನು ನೀಡುತ್ತದೆ. ಹಾಗೆಯೇ ಬರವಣಿಗೆ ಓದುಗರ ನೆನಪನ್ನು ಉದ್ದೀಪಿಸಿ ಜೀವನೋತ್ಸಾಹವನ್ನು ಮೂಡಿಸುತ್ತವೆ.

ನೇಮಿಚಂದ್ರ ಅವರಿಗೆ ತೆರೆಯ ಮರೆಯಲ್ಲಿ ಕಳೆದುಹೋದ ಮಹಿಳಾ ವಿಜ್ಞಾನಿಗಳ ಸಾಹಿತಿಗಳ ಹಾಗೂ ಸಾಮಾಜಿಕ ಹೋರಾಟಗಾರ್ತಿಯರ ಅಧ್ಯಯನ ಮುಖ್ಯ ಉದ್ದೇಶವಾಗಿತ್ತು. ಪ್ರವಾಸ ಕಥನಗಳು ಅಂಥವರ ಬದುಕನ್ನು ಕುರಿತು ವಿಶೇಷ ಬೆಳಕು ಚೆಲ್ಲುತ್ತವೆ. ಹೀಗೆ ಇತಿಹಾಸದಲ್ಲಿ ಮರೆಯಾದ ವ್ಯಕ್ತಿಗೆ ಸಂಬಂಧಿಸಿದ ಒಂದೊಂದು ವಸ್ತುವನ್ನು ಸಂಗ್ರಹಿಸಿ ಆ ಕಾಲದ ಪರಿಸರವನ್ನು ಪುನರ್ ಸೃಷ್ಟಿಸುವ ಅಖಂಡ ಪ್ರಯತ್ನ ಈ ಮೂಲಕ ಮಾಡಿರುವುದನ್ನು ಕಾಣಬಹುದು.

**ಪೆರುವಿನ ಪವಿತ್ರ ಕಣಿವೆಯಲ್ಲಿ**

ನೇಮಿಚಂದ್ರ ಅವರು ದಿ। ಕೃಷ್ಣಾನಂದ ಕಾಮತರಿಗೆ ಅರ್ಪಿಸಿರುವ ಮತ್ತೊಂದು ಪ್ರವಾಸ ಕಥನವಾಗಿದೆ. 'ಪೆರುವಿನ ಪವಿತ್ರ ಕಣಿವೆಯಲ್ಲಿ' ಎಂಬ ಕೃತಿಯೂ, ಕಾಮತರ 'ನಾನೂ ಅಮೆರಿಕೆಗೆ ಹೋಗಿದ್ದೆ'ಯಂಥ ಅಪೂರ್ವ ಪ್ರವಾಸ ಕಥನಗಳ ಸಾಲಿಗೆ ಸೇರುತ್ತದೆ. ಅಲ್ಲದೆ ದಕ್ಷಿಣ ಅಮೆರಿಕದ ಪೆರುವನ್ನು ಕುರಿತ ಪ್ರವಾಸ ಕಥನವೊಂದು ಕನ್ನಡದಲ್ಲಿ ಮೊದಲ ಬಾರಿ ಪ್ರಕಟವಾಗುತ್ತಿದೆ. ಒಂದು ವಿಶಿಷ್ಟವಾದ ಪ್ರವಾಸ ಕಥನವಾಗಿದ್ದು ಮನುಷ್ಯನ ನಾಗರಿಕತೆಯನ್ನು ಕುರಿತ ಅರಿವಿನ ಪರಿಧಿಯನ್ನು ವಿಸ್ತರಿಸುತ್ತದೆ.

ಸಾವಿರಾರು ವರ್ಷಗಳ ಭವ್ಯ ಸಾಂಸ್ಕೃತಿಕ ಪರಂಪರೆಯ ನಡುವೆ, ಕಿತ್ತು ತಿನ್ನುವ ಬಡತನವೆಂಬ ವಾಸ್ತವ ಸರ್ವಾಧಿಕಾರದ ಧೋರಣೆಯಿಂದ ಬೇಸತ್ತು ಪ್ರಜಾತಂತ್ರದ ಆಶಾವಾದಿ ನೆಲೆಯ ಕಡೆಗೆ ಬಿಟ್ಟ ಕಣ್ಣುಗಳಿಂದ ನಿರೀಕ್ಷಿಸುತ್ತಿರುವ ನಾಡು ಪೆರು.

ನೇಮಿಚಂದ್ರ ತಮ್ಮ ವಿಶಿಷ್ಟವಾದ ಶೈಲಿಯಲ್ಲಿ ಪ್ರವಾಸವನ್ನು ಕಥನದ ಮಾದರಿಯಲ್ಲೇ ವಿವರಿಸುತ್ತಾ ಹೋಗುತ್ತಾರೆ. ಎಲ್ಲೂ ಇತಿಹಾಸದ ದಾಖಲೆಯೆಂದಾಗಲೀ ಅಥವಾ ಪ್ರವಾಸ ಸ್ಥಳಗಳ ಉಲ್ಲೇಖ ಎನಿಸುವುದಿಲ್ಲ. ಕೃತಿಯೊಳಗೆ ಅಮೆರಿಕದ ಬಂಡವಾಳಶಾಹಿ ಹಾಗೂ ಎಲ್ಲರನ್ನೂ ತನ್ನ ಮುಷ್ಠಿಯೊಳಗೆ ಹಿಡಿದುಕೊಳ್ಳಬೇಕೆಂಬ ಹಪಹಪಿಸುವಿಕೆಯನ್ನು ತಣ್ಣನೆ ದನಿಯಲ್ಲಿ ಖಂಡಿಸುತ್ತಲೇ ಪೆರುವಿನ ಶ್ರೀಮಂತಿಕೆಯನ್ನು ಹೇಳುತ್ತಾರೆ.

ಆದರೆ ಅಲ್ಲಿನ ಸದ್ಯದ ವಾಸ್ತವವನ್ನೂ ಅಷ್ಟೇ ಸೂಕ್ಷ್ಮವಾಗಿ ಮನದಟ್ಟು ಮಾಡಿಕೊಡುತ್ತಾರೆ. ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ಮಧ್ಯೆ ಮಧ್ಯೆ ಉಲ್ಲೇಖಿಸಿದ್ದು ಪೆರುವಿನ ಕುರಿತು ಸಮಗ್ರವಾಗಿ ಅರ್ಥ ಮಾಡಿಕೊಳ್ಳಬೇಕೆಂಬುವವನಿಗೆ ಯಥೇಚ್ಛ ಮಾಹಿತಿ ಲಭ್ಯವಾಗಬಲ್ಲದು.

ಪೆರುವಿನ ಪವಿತ್ರ ಕಣಿವೆಯ ಬಗ್ಗೆ ಸಾಕಷ್ಟು ವಿವರಗಳನ್ನು ನೀಡಿರುವುದಲ್ಲದೇ ಅಲ್ಲಿನ ಸಂಸ್ಕೃತಿಯ ಹರಹುಗಳನ್ನು ಹೇಳುವ ಚಿತ್ರಗಳನ್ನೂ ಉದ್ದಕ್ಕೂ ನೀಡಲಾಗಿದೆ. ಪ್ರತಿ ಸಂದರ್ಭದಲ್ಲೂ ಭಾರತದ ನಿಜಸ್ಥಿತಿಯ ಜತೆಗೆ ಪೆರುವನ್ನು ಸಮೀಕರಿಸುತ್ತಲೇ ಹೊರಡುವುದು ಇಲ್ಲಿನ ವಿಶೇಷ.

ಇಪ್ಪತ್ತೊಂದು ಪುಟ್ಟ ಅಧ್ಯಾಯಗಳಲ್ಲಿ ಪೆರು, ಬ್ರೆಜಿಲ್, ಅಮೆಜಾನ್ ತಟದ ಬಗ್ಗೆ ವಿವರವಾಗಿ ಬರೆಯಲಾಗಿದೆ. ನೇಮಿಚಂದ್ರ ಅವರು ಹಿರಿದಾದ, ಜವಾಬ್ದಾರಿಯುತವಾದಂತಹ ವೃತ್ತಿಯಲ್ಲಿದ್ದರೂ, ಪ್ರವೃತ್ತಿಯಲ್ಲಿ ಹಿಂಜರಿದವರಲ್ಲ ಎಂಬುವುದಕ್ಕೆ ಇವರು ರಚಿಸಿರುವ ಕೃತಿಗಳೇ ಸಾಕ್ಷಿಯಾಗಿವೆ. ಕೇವಲ ಅನುಭವದ ಸಾಚಾತನವನ್ನೇ ನಂಬಿ ಕೃತಿ ರಚನೆಗೆ ಕೈಹಾಕಿರುವ ನೇಮಿಚಂದ್ರರ ಆಸಕ್ತಿಯನ್ನು ಎತ್ತಿತೋರಿಸುತ್ತದೆ. ಮಹಿಳೆ ಎಂಬ ವಿನಾಯಿತಿಯ ಅಗತ್ಯವಿಲ್ಲದಷ್ಟು ಗಟ್ಟಿಯಾಗಿ ಬೆಳೆದಿರುವ ಇವರು, ಕೃತಿರಚನೆಗೆ ಬೌದ್ಧಿಕತೆಯ ಭಿನ್ನ ಮಾದರಿಯ ಮಾಹಿತಿಗಳನ್ನು ನೀಡಿದ್ದಾರೆ. ಇವರು ತಮ್ಮ ಸಮಕಾಲೀನರಿಗಿಂತ ಭಿನ್ನವಾದ ಜೀವನದ ನಿರ್ಣಾಯಕ ತಿರುವಿನಲ್ಲಿದ್ದಾರೆಂದು ಕಾಣುತ್ತದೆ. ನೇಮಿಚಂದ್ರರ ಬಹುಮುಖ ಪ್ರತಿಭೆ ಬೆರಗುಗೊಳಿಸುವಂಥದ್ದು. ಕನ್ನಡದ ವಿಜ್ಞಾನ, ಸಾಹಿತ್ಯ, ಸಂಸ್ಕೃತಿ, ಲಲಿತಕಲೆ ಮತ್ತು ಮಹಿಳಾ ಅಧ್ಯಯನಗಳಿಗೆ ಸೇತುವೆಯಂತೆ ಇರುವವರು ನೇಮಿಚಂದ್ರ.

ನೇಮಿಚಂದ್ರ ಅವರು ತಮ್ಮ ಕಾಲದ ಕೆಲವು ಅರ್ಥಪೂರ್ಣ ಹುಡುಕಾಟಗಳಲ್ಲಿ ತೊಡಗಿಕೊಂಡಿರುವುದರ ಜೊತೆಗೆ, ಸ್ವತಃ ಕೆಲವು ಕ್ಷೇತ್ರಗಳಲ್ಲಿ ಹೊಸ ಬೆಳಕನ್ನು ಹಾಯಿಸಿದ್ದಾರೆ. ಬಹುಶಃ ಅವರ ಸೃಜನಶೀಲ ಹುಟುಕಾಟವೇ ಅವರ ಬರವಣಿಗೆಯನ್ನು ಪ್ರಭಾವಿಸಿದೆ ಎನಿಸುತ್ತದೆ. ಸಾಹಿತ್ಯ ಮತ್ತು ವಿಜ್ಞಾನ ಕ್ಷೇತ್ರದಲ್ಲಿ ಸಮಾನವಾಗಿ ದುಡಿಯುತ್ತಿರುವ ನೇಮಿಚಂದ್ರ ಅವರು ಹೊಸ ಸಾಮಾಜಿಕ ಸಂದರ್ಭದಲ್ಲಿ ನೈತಿಕತೆಯ ಪ್ರಜ್ಞೆಯನ್ನು ಮುಚ್ಚುಮರೆಯಿಲ್ಲದೆ ಹೇಳುವುದರ ಮೂಲಕ ತಮ್ಮ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಅಂತೆಯೇ ಇವರ ಬರವಣಿಗೆ ಹೆಣ್ಣಿನ ಮನಃಸ್ಥಿತಿ–ಆಶೋತ್ತರಗಳ ಧ್ಯಾನವಾಗಿದೆ ಮತ್ತು ಪ್ರಸ್ತುತವಾಗಿದೆ.

ನೇಮಿಚಂದ್ರ ಅವರಿಗೆ ಸಾವಿರ ಸಾವಿರ ವರ್ಷಗಳ ಸಂಸ್ಕೃತಿಯ ಹಿನ್ನೆಲೆಯ ಪೆರುವನ್ನು ನೋಡಬೇಕು. ಹೊರ ಆಕ್ರಮಣದಲ್ಲಿ ನೂರಾರು ವರ್ಷಗಳು ತುಳಿತಕ್ಕೆ ಸಿಕ್ಕಿ ಪುಟಿದೇಳುತ್ತಿರುವ ಪೆರು ಇವರಿಗೆ ಅಯಸ್ಕಾಂತೀಯ ಆಕರ್ಷಣೆಯಾಗಿ ಸೆಳೆಯಿತು. ಅಲ್ಲದೆ ಇವರಿಗೆ ತಮ್ಮಿಚ್ಛೆಯಂತೆ ಅಲೆದು ಬರಬೇಕು. ಕಾಲದ ನಿರ್ಬಂಧನವಿಲ್ಲದೆ ಓಡಾಡಬೇಕು. ಮನಸೋತಲ್ಲಿ ನಿಂತು ನಡೆದ ಸಮಯವಿರಬೇಕು. ಸ್ವಾತಂತ್ರ್ಯವಿರಬೇಕು. "ತಮ್ಮ ಕನಸುಗಳಿಗೆ ಎಂಥಾ ಅದ್ಭುತ ಶಕ್ತಿ ಇದೆ. ಕನಸು ಕಾಣಬೇಕಷ್ಟೇ, ಹಾರಲು ರೆಕ್ಕೆಗಳು ಮೊಳೆಯುತ್ತವೆ. ಆರಂಭವಷ್ಟೆ ಕಷ್ಟ. ಮೊದಲ ಹೆಜ್ಜೆ ಇಟ್ಟಂತೆ ಹಾದಿ ಸುಗಮವಾಗುತ್ತದೆ.

ದೂರದ ದೇಶಗಳು ದೂರದಲ್ಲಿ ಕುಳಿತಾಗ ಅಭೇದ್ಯವಾಗಿ ಕಾಣುತ್ತವೆ. ಗೊತ್ತಿಲ್ಲದ್ದು ದಿಗಿಲು ಹುಟ್ಟಿಸುತ್ತದೆ. ಆದರೆ ರೆಕ್ಕೆ ಬಿಚ್ಚಿ ಹೊರಟರೆ ಸಾಕು, ನಾವಲ್ಲಿರುತ್ತೇವೆ"[೨೧] ಎಂದು ನೇಮಿಚಂದ್ರ ಅವರು ಹೇಳುತ್ತಾರೆ. ಅಂತೆಯೇ ತಾವು ಕಟ್ಟಿಕೊಂಡಿದ್ದ ಕನಸುಗಳನ್ನು ನನಸಾಗಿಸಿಕೊಂಡರು. ಏನೆಲ್ಲ ಅನುಭವಗಳನ್ನು ದೋಚಿ ಬಂದರು. ಆ ಪಯಣದ ಅನುಭವಗಳೇ ಅವರಿಗೆ ಈ ಪಯಣಕ್ಕೆ ಆತ್ಮವಿಶ್ವಾಸವನ್ನು ನೀಡಿತ್ತು. 'ಹೊರಟಂತೆ ದಾರಿ ಕಾಣುತ್ತದೆ' ಎಂಬ ಭರವಸೆಯನ್ನು ಮೂಡಿಸಿತು.

ನೇಮಿಚಂದ್ರ ಅವರು ತಮ್ಮ ಪ್ರವಾಸ ಯೋಜನೆಯನ್ನು ಸಿದ್ಧಪಡಿಸಿಕೊಂಡಿದ್ದರು. ಆಂಡೀಸ್ ಪರ್ವತಗಳ ಮೂಲಕ ಅಲೆಯಬೇಕು. ಲೀಮಾದಿಂದ ದಕ್ಷಿಣಕ್ಕೆ 'ನಾಸ್ಕಾ'ಗೆ ಹೋಗಬೇಕು, ಅದ್ಭುತ ರಹಸ್ಯದ ನಾಸ್ಕಾ ಗೆರೆಗಳನ್ನು ನೋಡಬೇಕು. ಅವುಗಳನ್ನು ರಕ್ಷಿಸಲು ದುಡಿದ ಮಹಿಳಾ ವಿಜ್ಞಾನಿ ಮರಿಯಾ ರೇಕಿಯ ಬಗ್ಗೆ ಮಾಹಿತಿ ಸಂಗ್ರಹಿಸಬೇಕು. ಆಕೆ ನಾಸ್ಕಾದಲ್ಲಿಯೇ ಈಗಲೂ ಇದ್ದರೆ ಭೇಟಿಯಾಗಬೇಕು. ಅಲ್ಲಿಂದ ಜ್ವಾಲಾಮುಖಿಗಳ ನಡುವಿನ ನಗರಿ 'ಅರಿಕೀಪಾ'ಗೆ ಹೋಗುವುದು. ಇನ್ಕಾ ಸಾಮ್ರಾಜ್ಯದ ರಾಜಧಾನಿ ಕುಸ್ಕೋ ನೋಡುವುದು. ಕುಸ್ಕೋದಿಂದ ಪೆರುವಿನ ಪವಿತ್ರ ಕಣಿವೆಗಿಳಿದು ಅಲೆಯುವುದು. ಆಂಡೀಸ್ ಪರ್ವತ ಶಿಖರಗಳ ತುತ್ತ ತುದಿಯಲ್ಲಿಯ 'ಕಳೆದು' ಹೋದ ಇನ್ಕಾ ನಗರಿ 'ಮಾಚುಪಿಚು'ವನ್ನು ಕಾಣುವುದು. ಲೀಮಾಗೆ ಹಿಂತಿರುಗಿ, ಉತ್ತರಕ್ಕೆ ಸಾಗಿ 'ಅಮೆಜಾನ್ ಬೇಸ್' ತಲುಪುವುದು. ಅಲ್ಲಿಂದ ಅಮೆಜಾನ್ ನದಿಯ ಮೇಲೆ ಹಾಯ್ದು, ಪೆರುವಿನಿಂದ ಬ್ರೆಜಿಲ್ ದೇಶಕ್ಕೆ ಪಯಣ ಮಾಡುವುದು. ಅಂತೆಯೇ ಹಾಕಿಕೊಂಡ ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಅವರು ಯಶಸ್ವಿಯಾಗುತ್ತಾರೆ.

ಆಂಡೀಸ್ ಪರ್ವತದ ಅನುಭವ ಪಡೆಯಲು ಬಸ್ಸು ಪಯಣವನ್ನು ಆರಿಸಿಕೊಳ್ಳುತ್ತಾರೆ. ವಿಮಾನದರ ದುಬಾರಿ ಇಲ್ಲದಿದ್ದರೂ ಮೋಡಗಳ ಮೇಲೆ ಹಾರುವುದು ಇಷ್ಟವಿರಲಿಲ್ಲ. ಅದಕ್ಕಿಂತ ಮುಖ್ಯವಾಗಿ ಈ ನೆಲದ ಅನುಭವ ಬೇಕಿತ್ತು. ಈ ನೆಲದ ನೋವು ನಲಿವು, ಜನಮನ, ಪ್ರಕೃತಿ ಎಲ್ಲವನ್ನೂ ಹತ್ತಿರದಿಂದ ಕಾಣಬೇಕಿತ್ತು. ಹೀಗೆ ಅನುಭವವನ್ನು ತಮ್ಮದಾಗಿಸಿಕೊಳ್ಳಲು ಭಗೀರಥ ಪ್ರಯತ್ನ ಮಾಡಿದರು.

"ಪೆರುವಿನ ಉದ್ದಕ್ಕೂ ಉತ್ತರದಿಂದ ದಕ್ಷಿಣಕ್ಕೆ ಆಂಡೀಸ್ ಪರ್ವತ ಶ್ರೇಣಿ ಹರಡಿಕೊಂಡಿದೆ. ಪಶ್ಚಿಮದಿಂದ ಪೂರ್ವಕ್ಕೆ ಹಾಯುತ್ತಿದ್ದಂತೆ ಹಿಮ ತುಂಬಿದ ಪರ್ವತ ಶಿಖರಗಳು. ಅವುಗಳಲ್ಲಿ ಅವೆಷ್ಟೋ ಜ್ವಾಲಾಮುಖಿಗಳು. ಕಠಿಣವಾದ ಭೂಭಾಗ, ಮರಳುಗಾಡು, ನಂತರ ಪೂರ್ವಕ್ಕೆ ಟ್ರಾಪಿಕಲ್ ಮಳೆ ಕಾಡು. ಆಂಡೀಸ್ ಪರ್ವತಗಳನ್ನು, ಕಣಿವೆಗಳನ್ನು, ಮರುಭೂಮಿಯನ್ನು, ಉಷ್ಣವಲಯದ ಮಳೆಕಾಡು"[೨೨] ಎಲ್ಲವನ್ನೂ ನೋಡುವ ಹಂಬಲದಿಂದ ನೇಮಿಚಂದ್ರ ಅವರು ಪ್ರವಾಸವನ್ನು ಕೈಗೊಳ್ಳುತ್ತಾರೆ.

ಪೆರುವಿನಲ್ಲಿ ಮುಖ್ಯವಾಗಿ ಕಂಡುಬರುವ ಭಾಷೆ 'ಸ್ಪ್ಯಾನಿಷ್' ಮತ್ತು 'ಕೆಚುವಾ' ಭಾಷೆ. ಇವರಿಗೆ ಭಾಷೆ ಬರದಿದ್ದರೂ, ಜಾಗ ತಿಳಿಯದ ಅಪರಿಚಿತ ಖಂಡವಾಗಿದ್ದರೂ ಸರ್ವಸ್ವತಂತ್ರ್ಯರಾಗಿದ್ದರು. ಯಾವ ಸಮಯದಲ್ಲಿ ಬೇಕಾದರೂ ಓಡಾಡಬಹುದಾದ, ಯಾರನ್ನು ಬೇಕಾದರೂ ನಿಲ್ಲಿಸಿ ಮಾತನಾಡಿಸಬಹುದಾದ ಇವರಿಗೆ ತೆರದ ಹೃದಯದ ಸ್ವಾಗತವನ್ನು ಪೆರು ದೇಶ ನೀಡಿತ್ತು. ಲೆಕ್ಕಾಚಾರಕ್ಕಿಂತ ಹೃದಯವೇ ಹೆಚ್ಚು ಕೆಲಸ ಮಾಡುತ್ತಿರುವ ಈ ತಾಣದಲ್ಲಿ ನೇಮಿಚಂದ್ರ ಅವರಿಗೆ ಬದುಕಿನ್ನೂ ಸರಳವಾಗಿದೆ ಎಂಬಂತೆ ಕಂಡಿತು. ಆಂಡಿಯನ್ ಜನರು ಈ ಖಂಡದಲ್ಲಿ ಮೊಟ್ಟ ಮೊದಲ ಪಿರಮಿಡ್ಡುಗಳನ್ನು ಕಟ್ಟಿದವರು. ಇದರಲ್ಲಿ ಈಜಿಪ್ಟಿನ ಪಿರಮಿಡ್‌ಗಳಂತೆ 'ಮಮ್ಮಿಗಳಿಲ್ಲ, ಇದು 'ಲೀಮಾ ಸಂಸ್ಕೃತಿ' ಸೇರಿತ್ತು. ಲೀಮಾ ಸಂಸ್ಕೃತಿ ದ್ವಿರೂಪತೆಯನ್ನು, ದ್ವೈತವನ್ನು ಸದಾ ಸಂಕೇತಿಸುತ್ತದೆ. ಇದು ಭೂಕಂಪಗಳ ನೆಲ. ಇಲ್ಲಿಯ ಕಟ್ಟಡಗಳನ್ನು, ಪಿರಮಿಡ್‌ಗಳನ್ನು ಭೂಕಂಪ ತಡೆದುಕೊಳ್ಳುವಂತೆ ವಿನ್ಯಾಸ ಮಾಡಿದ್ದಾರೆ. ಈ ನೆಲ ಬಹಳಷ್ಟು ಭೂಕಂಪಗಳನ್ನು ಕಂಡಿದೆ. ನೇಮಿಚಂದ್ರ ಅವರು ಹಿಂತಿರುಗಿ ಬಂದ ಮೂರುವಾರಕ್ಕೆ ಇವರು ಕಂಡುಬಂದ ನಗರದಲ್ಲಿ ಭೂಕಂಪ, ೮.೧. ರಿಕ್ಟರ್ ಸ್ಕೇಲಿನಷ್ಟು ಆಗಿತ್ತು.

ಈ ನೆಲದ ತುಂಬಾ ರಕ್ತದಲ್ಲಿ ಬರೆದ ಇತಿಹಾಸವಿದೆ. ಸರ್ವಾಧಿಕಾರದಿಂದ ಬಿಡುಗಡೆ ಪಡೆಯಲು ಪೆರುವಿನ ಜನ ಬಹಳಷ್ಟು ಹೋರಾಡಿದ್ದಾರೆ. ಪೆರುವಿಗರು ದಿಟವಾದ ಪ್ರಜಾತಂತ್ರವನ್ನು ಪಡೆಯಲು ಇಂದಿಗೂ ಹೋರಾಡುತ್ತಿದ್ದಾರೆ. ಇಲ್ಲಿ ರಾಜಕೀಯ ಅಸ್ಥಿರತೆ ಇರುವುದು ಕಂಡುಬರುತ್ತದೆ. ಹಾಗೆಯೇ ಅಮೆರಿಕಾವು ಬಡದೇಶಗಳ ರಾಜಕೀಯದಲ್ಲಿ ತಲೆ ಹಾಕಿ ತನ್ನ ಲಾಭಕೋರತನವನ್ನು ಮೆರೆದಿರುವುದನ್ನು ಈ ನೆಲದಲ್ಲಿ ಕಾಣಬಹುದು. ಫ್ಯುಜಿಮೊರಿಯ ಸರ್ವಾಧಿಕಾರಕ್ಕೆ ಅಮೆರಿಕಾ ಬೆಂಬಲ ನೀಡಿತ್ತು. ಈತನ ಆಡಳಿತ ಕಾಲದಲ್ಲಿ ಪೆರುವಿನ ರಕ್ತಸಿಕ್ತ ರಾಜಕೀಯ ಅಧ್ಯಾಯ ಬರೆಯಲ್ಪಟ್ಟಿತು. ಮಿಲಿಟರಿ ಸರ್ವಾಧಿಕಾರ, ಸಮೂಹ ಬಂಧನ, ಹಿಂಸೆ, ಕೊಲೆ ಸಾಮಾನ್ಯವಾಗಿದ್ದವು.

ಭಾರತದಲ್ಲಿ ನಕ್ಸಲರ ದಾಳಿಇದ್ದಂತೆ ಪೆರುವಿನಲ್ಲಿ 'ಶೈನಿಂಗ್ ಪಾತ್' ಕ್ರಾಂತಿಕಾರಿ ಹಿಂಸಾತ್ಮಕ ಹೋರಾಟ ಕಂಡುಬರುತ್ತದೆ. ಆ ಸಂಘಟನೆಯ ಹೆಸರು "ಮಾವೊಯಿಸ್ಟ್ ಕಮ್ಯುನಿಷ್ಟ್ ಪಾರ್ಟಿ ಆಫ್ ಪೆರು"[೨೪] ಎಂದು. ಇದು ಪೆರುವಿನ ಪೂರ್ವ ಅರಣ್ಯ ಪ್ರದೇಶದಲ್ಲಿ ಕ್ರಾಂತಿಕಾರಿ ಬುನಾದಿಯನ್ನು ಹಾಕಿ ಸರ್ಕಾರ ನಡೆಯದಂತೆ ಚುನಾಯಿತ ಮುಖಂಡರನ್ನು ನಿರ್ಮೂಲನ ಮಾಡುತ್ತಾ ಪೆರುವಿನ ಶೇ. ೪೦ರಷ್ಟು ಭಾಗವನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿತ್ತು. ಪೆರುವಿನ ಸಮಾಜದ ಎಲ್ಲ ಸ್ಥರಗಳಲ್ಲೂ ಹರಡಿ ಹೋಗಿ, ಪೆರುವಿನ ಸಾಮಾನ್ಯ ಜನರ ದುಸ್ವಪ್ನವಾಗಿದ್ದರು. ಜನರ ದಾರಿದ್ರ್ಯ, ಆರ್ಥಿಕ ಕುಸಿತ, ಸರಕಾರದ ಅನುಪಸ್ಥಿತಿ ಎಲ್ಲವೂ ಇವರಿಗೆ ಅನುಕೂಲವಾಗಿತ್ತು. ಹೀಗೆ ಪೆರು ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಸಾಕಷ್ಟು ಗೊಂದಲಗಳಿಂದ ಕೂಡಿರುವುದನ್ನು,

ಅಮೆರಿಕದ ಶ್ರೀಮಂತ ರಾಷ್ಟ್ರದ ಜೀವನ, ಜಗತ್ತಿನೆಲ್ಲ ಬಡ ರಾಷ್ಟ್ರಗಳ ನೈಸರ್ಗಿಕ ಸಂಪನ್ಮೂಲಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ಶೋಷಿಸುವುದನ್ನು ಕಾಣಬಹುದು. ಈ ವಿಚಾರಗಳನ್ನು ನೇಮಿಚಂದ್ರ ಅವರು ರಾಜಕೀಯ ವಿಶ್ಲೇಷಣೆಗಳನ್ನು ವಿವರಣೆಗಳನ್ನು ನೋಡಬಹುದು.

ಪೆರುವಿನ ರಾಜಕೀಯ ಅಸ್ಥಿರತೆಯ ಪರಿಸ್ಥಿತಿಯಲ್ಲಿಯೂ ರಾಜಕೀಯದಲ್ಲಿ ಮಹಿಳೆಯರು ವಹಿಸಿದ ಪಾತ್ರವನ್ನು ಕಾಣಬಹುದು. ಫ್ಯುಜಿಮೊರಿಯ ಹೆಂಡತಿ ಸೂಸಾನ್ ಹಿಗುಚಿ ಗಂಡನ ಹೃದಯವಿಲ್ಲದ ಕ್ರೂರ ಭ್ರಷ್ಟ ಸರ್ವಾಧಿಕಾರವನ್ನು ಪ್ರತಿಭಟಿಸಿ, ಅಧ್ಯಕ್ಷರ ಅರಮನೆಯನ್ನು ತೊರೆದು ಹೊರಬಂದಳು. ತಾನು ಚುನಾವಣೆಯಲ್ಲಿ ಸ್ಪರ್ಧಿಸಿದಳು. ಮತ್ತೊಬ್ಬ ಮಹಿಳೆ ಲೋರ್ಡೆಫ್ಲಾರೆಸ್. ಈಕೆ ನ್ಯಾಯವಾದಿ ನುರಿತ ಕಾಂಗ್ರೆಸ್ ಮಹಿಳೆ. ಆದರೆ ಪೆರುವಿನ್ನೂ ಮಹಿಳಾ ಅಧ್ಯಕ್ಷಳನ್ನು ಇಲ್ಲಿಯವರೆಗೂ ಕಂಡಿಲ್ಲ. ಇವೆಲ್ಲವನ್ನು ನೋಡಿದಾಗ ರಾಜಕೀಯದಲ್ಲಿ ಮಹಿಳೆಯರ ಸ್ಥಾನಮಾನ ಪೆರುವಿನಂತಹ ಬಡದೇಶದಲ್ಲೂ ಕಲ್ಪಿಸಿಲ್ಲ ಎಂಬುದನ್ನು ಕಾಣಬಹುದು. ಅನುಭವ, ಪ್ರಾಮಾಣಿಕತೆ, ನ್ಯಾಯನಿಷ್ಠತೆಯಿಂದ ಮಹಿಳೆಯರು ಶಕ್ತಿಯುತರಾಗಿ ಹೋರಾಟದ ಅವಶ್ಯಕತೆಯನ್ನು ಎತ್ತಿಹಿಡಿಯುತ್ತದೆ.

ಪೆರುವಿನ ಮಹಿಳೆಯರು, ಜಗತ್ತಿನೆಲ್ಲ ಮಹಿಳೆಯರಂತೆ ತಮ್ಮ ಹಕ್ಕುಗಳಿಗಾಗಿ ಚರಿತ್ರೆಯುದ್ದಕ್ಕೂ ಹೋರಾಡಿದ್ದಾರೆ. ಜಗತ್ತಿನ ಯಾವುದೇ ಮೂಲೆಗೆ ಹೋದರೂ ಯಾವುದೇ ಖಂಡಕ್ಕೆ ಸಾಗಿದರೂ, ಮಹಿಳೆಯರ ಸಂಕಷ್ಟಗಳು ಸಮಾನವಾಗಿ ಕಂಡುಬರುತ್ತದೆ. ಮಹಿಳೆಯ ಮೂಲಕ ಲೋಕನೋಡುವ ಕ್ರಮದಲ್ಲಿ ಕೆಲವು ನೋಟಗಳು ಇಲ್ಲಿ ಸಿಗುತ್ತವೆ. ಮಹಿಳೆಯನ್ನು ಕುರಿತ ಸಾಮಾಜಿಕ ನಿಲುವುಗಳೇನು ಎಂಬುದು ಈ ಕೃತಿಯಲ್ಲಿ ವ್ಯಕ್ತವಾಗುತ್ತದೆ.

ನೇಮಿಚಂದ್ರ ಅವರು ಲೀಮಾ ನಗರದಿಂದ ನಾಸ್ಕಾಗೆ ಹೊರಟ ಬಸ್ಸು ನಿಧಾನವಾಗಿ ಅವರ ಪಯಣದ ಈ ಹಾದಿಯಲ್ಲಿತ್ತು 'ಚಿಂಚಾ' ನಗರ. ಕಂದುಬೆಟ್ಟದ ಮೇಲೆ ಆಕಾಶಕ್ಕೆ ಕೈಚಾಚಿ ನಿಂತ ತ್ರಿಶೂಲದಾಕಾರದ ಬೃಹತ್ ಚಿತ್ರವಿದೆ. ಇದನ್ನು 'ಮೂರು ಶಿಲುಬೆಗಳು' ಎಂದು ಕರೆಯುತ್ತಾರೆ. "ನಾಸ್ಕಾಗೆ ಹೊರಟ ಈ ಹಾದಿಯಲ್ಲಿ ಗುಡ್ಡದ ಮೇಲೆ ಕಂಡ ಆ ತ್ರಿಶೂಲದಾಕಾರದ ಚಿತ್ರ"[೨೨]ವನ್ನು ನೋಡಿ ತಾನು ಕಂಡದ್ದು ದಿಟವೆ, ನಿದ್ರೆಯ ಕನವರಿಕೆಯಾಗಿತ್ತೆ ಎಂಬುದಾಗಿ ಆಶ್ಚರ್ಯ ವ್ಯಕ್ತಪಡಿಸುತ್ತಾರೆ.

ನೇಮಿಚಂದ್ರ ಅವರು 'ಚೌಚೀಲಾ'ದಲ್ಲಿಯ ಸಮಾಧಿ ಸ್ಥಳಕ್ಕೆ ಭೇಟಿ ನೀಡುತ್ತಾರೆ. "ಆಂಡೀಸ್ ಬೆಟ್ಟಗಳ ನಡುವಿನ ನಾಸ್ಕಾ ನೆಲವಿದು. ಕ್ರಿಸ್ತಪೂರ್ವದಿಂದ ಕ್ರಿಸ್ತಶಕ ೮೦೦ರವರೆಗೆ ನಾಸ್ಕಾ ಸಂಸ್ಕೃತಿಯಲ್ಲಿ ಸತ್ತವರನ್ನು ಮಮ್ಮಿಗಳಾಗಿ ಹೂಳುವ ಸಂಪ್ರದಾಯವಿತ್ತು. ಮರುಜನ್ಮಕ್ಕೆ ಅವರ ದೇಹವನ್ನು ಕಾದಿರಿಸುವ ಪ್ರಕ್ರಿಯೆ ಇದಾಗಿತ್ತು. ಮರಳು ನೆಲದಲ್ಲಿ ತೆರೆದಿಟ್ಟ

ಸಮಾಧಿಗಳು, ಈ ಸಮಾಧಿಗಳಲ್ಲಿ ಕೊಳೆಯದೆ, ಕೆಡದೆ, ಮಮ್ಮಿಗಳು ಸುರಕ್ಷಿತವಾಗುಳಿದಿವೆ."[೨೬] ಪುರಾತನ ಕಾಲದ ಸಮಾಧಿಗಳ ಬಗ್ಗೆ ಮಾಹಿತಿಯು ಪೂರ್ವಿಕರ ನಂಬಿಕೆಯನ್ನು ವ್ಯಕ್ತಪಡಿಸುತ್ತದೆ. ದೇಶವಿದೇಶಗಳಲ್ಲಿ ಶವಸಂಸ್ಕಾರ, ಸಮಾಧಿಗಳ ಕಲ್ಪನೆಯನ್ನು ಬಿಚ್ಚಿಡುತ್ತದೆ.

ನಾಸ್ಕಾದ ದೈತ್ಯಚಿತ್ರಗಳು ಭವಿಷ್ಯಕ್ಕೆ ತಮ್ಮ ಸಂದೇಶವನ್ನು ತಲುಪಿಸಲೆಂದು ಸೃಷ್ಟಿಸಿದಂತಿವೆ. ಈ ಚಿತ್ರಗಳು ಆಂಡೀಸ್ ಪರ್ವತಗಳ ಇಳಿಜಾರು ಕಣಿವೆಯಲ್ಲಿ, ಸಮುದ್ರ ತೀರಕ್ಕೆ ಹತ್ತಿರವಾಗಿ, ಸುಮಾರು ಮೂವತ್ತು ಮೈಲಿ ಪಟ್ಟಿಯಲ್ಲಿ ಹರಡಿಕೊಂಡಿವೆ. ಈ ಗೆರೆಗಳ ಬಳಿಯಲ್ಲಿ ಅನೇಕ ಚಿಕ್ಕ ಚಿಕ್ಕ ಗಾತ್ರದ ಜ್ಯಾಮಿತಿ ವಿನ್ಯಾಸಗಳು ಕಂಡುಬರುತ್ತವೆ. ಜೊತೆಗೆ ಪ್ರಾಣಿ, ಪಕ್ಷಿಗಳ ಚಿತ್ರಗಳೂ ಇಲ್ಲಿವೆ. ಉದ್ದುದ್ದನೆಯ ಅಂಕುಡೊಂಕಿನ ಕುತ್ತಿಗೆಯ ಪಕ್ಷಿಗಳು. ಬೆಟ್ಟದ ಮಗ್ಗಲಲ್ಲಿ ಚಿತ್ರಿಸಿದ ಚಿತ್ರಗಳಲ್ಲಿ ಮಾನವ ಆಕೃತಿಗಳಿವೆ. ಇವೆಲ್ಲವೂ ಮಾನವ ನಿರ್ಮಿತ ಅದ್ಭುತಗಳು ಪುರಾತನ ಪೆರುವಿಗರ ಅದ್ಭುತ ಕೃತಿಗಳಾಗಿವೆ. ಇದನ್ನು "ಜಗತ್ತಿನ ಅತ್ಯಂತ ದೊಡ್ಡ ಖಗೋಳ ಶಾಸ್ತ್ರದ ಗ್ರಂಥ"[೨೭] ಎಂಬುದಾಗಿ ಕರೆಯುತ್ತಾರೆ.

ಇಲ್ಲಿಯ ಅಗಣಿತ ರಹಸ್ಯಮಯ ರೇಖಾಚಿತ್ರಗಳನ್ನು ದಾಖಲು ಮಾಡಲು, ಈ ನೆಲದಲ್ಲಿ ನಲವತ್ತಕ್ಕೂ ಹೆಚ್ಚು ವರ್ಷಗಳನ್ನು ಕಳೆದು, ನಾಸ್ಕಾ ಗೆರೆಗಳ ಉಳಿವಿಗೆ ಕಾರಣವಾದ ವಿಜ್ಞಾನಿ ಡಾ. ಮರಿಯಾ ರೇಕಿಯ ನಾಸ್ಕಾ ಜನರ ಅತ್ಯಂತ ಅದ್ಭುತ ಕೃತಿ. ರಹಸ್ಯಮಯ ದೈತ್ಯ ಚಿತ್ರಗಳು ಇಂದಿಗೂ ಮರುಭೂಮಿಯಲ್ಲಿ ಹರಡಿನಿಂತಿವೆ. "ನಾಸ್ಕಾ ಗೆರೆಗಳು ಖಗೋಳ ವೀಕ್ಷಣೆಗೆ, ಗ್ರಹ ನಕ್ಷತ್ರಗಳ ಅಧ್ಯಯನಕ್ಕೆ ಬಳಸಿದ ಸಲಕರಣೆಗಳು"[೨೮] ಎಂಬ ಸಿದ್ಧಾಂತವನ್ನು ಮರಿಯಾ ಮಂಡಿಸಿದಳು. ಈಕೆ ವಿನಾಶದ ಅಂಚಿನಲ್ಲಿದ್ದ ನಾಸ್ಕಾ ಗೆರೆಗಳನ್ನು ಉಳಿಸಿದ್ದು, ರಕ್ಷಿಸಿದ್ದು, ಜಗತ್ತಿನ ಗಮನವನ್ನು ಇತ್ತ ಸೆಳೆದದ್ದು ಇತಿಹಾಸ. ಈಕೆಯ ಹೆಸರಿನಲ್ಲಿ 'ಪ್ಲಾನಿಟೋರಿಯಂ' ಇದೆ. ಇಂದು ಇಡೀ ನಾಸ್ಕಾನಗರ ಈಕೆಗೆ ಋಣಿಯಾಗಿದೆ. ಮರಿಯಾ ಎಂಬ ವಿಜ್ಞಾನಿಯೂ ಪೆರುವಿನ ನೆಲದಲ್ಲಿ ಅಡಿಗಡಿಗೆ ಪೆರುವಿನ ಪೂರ್ವಿಕರ ಶ್ರಮ, ಶಕ್ತಿ, ಜ್ಞಾನ, ತಂತ್ರಜ್ಞಾನದ ಬಗ್ಗೆ ಜಗತ್ತಿಗೆ ಸಾರಿದಳು. ಒಂದೊಂದು ಚಿತ್ರದ ಉದ್ದ, ಅಗಲ, ಕೋನಗಳನ್ನು ಅಳೆದು ಅಧ್ಯಯನ ಮಾಡಿದಳು. ಆಂಡಿಯನ್ ಜನರ ಜ್ಯಾಮಿತಿ ಜ್ಞಾನಕ್ಕೆ ತಲೆದೂಗಿದಳು. ಇವೆಲ್ಲವೂ ಪೂರ್ವಿಕರಲ್ಲಿದ ವಿಜ್ಞಾನದ ಜ್ಞಾನದ ಬಗ್ಗೆ ಅಚ್ಚರಿಯುಂಟಾಗುತ್ತದೆ. ಸ್ವತಃ ನೇಮಿಚಂದ್ರ ಅವರು ವಿಜ್ಞಾನಿಯಾಗಿದ್ದು ಈ ಅಪೂರ್ವ ಮಾಹಿತಿಗಳನ್ನು ತಿಳಿಸುವುದರ ಮೂಲಕ ವಿದೇಶಿ ಜನರ ತಿಳುವಳಿಕೆ ನಮ್ಮ ಅರಿವಿನ ಪಯಣವಾಗಿದೆ ಎನ್ನಬಹುದು.

ಮರಿಯಾಳನ್ನು ಜಗತ್ತು "ದಿ ಲೇಡಿ ಆಫ್ ದಿ ಲೈನ್"[೨೯] ಎಂದೇ ಗುರುತಿಸಿತು. ಆಕೆಯ ಜ್ಞಾನ, ಸಂಶೋಧನೆ, ನಾಸ್ಕಾ ಗೆರೆಗಳನ್ನು ಕುರಿತು ಮಾತ್ರವಲ್ಲ, ಖಗೋಳಶಾಸ್ತ್ರ ಜ್ಯಾಮಿತಿ, ಪುರಾತತ್ವಶಾಸ್ತ್ರ, ಪ್ರತಿಮಾಶಿಲ್ಪ, ಮಾನವಕುಲಶಾಸ್ತ್ರ ರಾಗಗಳಲ್ಲಿ ಸಂಶೋಧನೆಯ

ಅನಂತ ಸಾಧ್ಯತೆಗಳನ್ನು ತೆರೆದಿದೆ. ೧೯೯೪ರಲ್ಲಿ ಯುನೆಸ್ಕೊ ನಾಸ್ಕಾ ಚಿತ್ರಗಳನ್ನು 'ವರ್ಲ್ಡ್ ಕಲ್ಚರ್ ಹೆರಿಟೇಜ್' ಎಂದು ಘೋಷಿಸಿತು.

೧೫೪೦ರಲ್ಲಿ ಅರಿಕೀಪಾ ಸ್ಥಾಪಿತವಾಯಿತು. 'ಅರಿ, ಕೀಪಾ' ಎಂದರೆ ಕೆಚುವಾ ಭಾಷೆಯಲ್ಲಿ 'ಬನ್ನಿ, ಇರಿ' ಎಂದು ಅರ್ಥ. ಇನ್ಕಾ ದೊರೆ ಮಯ್ತಾ ಕ್ಯಾಪಕ್ ತನ್ನ ಯೋಧರಿಗೆ ಈ ಸುಂದರ ನೆಲದಲ್ಲಿ ತಂಗಲು ಕರೆದು ಸ್ವಾಗತಿಸಿದ ರೀತಿಯದು. ಅರಿಕೀಪಾ ಆಂಡೀಸ್ ಪರ್ವತ ಶಿಖರಗಳ ಬುಡದಲ್ಲಿಯ ಸುಂದರ ಕಣಿವೆಯಲ್ಲಿ ಸುಮಾರು ೭೬೦೦ ಅಡಿ ಎತ್ತರದಲ್ಲಿರುವ ನಗರ. ನಾಸ್ಕಾ ಮತ್ತು ಕುಸ್ಕೋ ನಡುವೆ ಬರುವ ಪೆರುವಿನ ಒಂದು ದೊಡ್ಡ ನಗರವಾಗಿದೆ. 'ಮಿಸ್ಟಿ', 'ಚಚಾನಿ' ಮತ್ತು 'ಪಿಚು–ಪಿಚು' ಎಂಬ ಮೂರು ಜ್ವಾಲಾಮುಖಿಗಳಿವೆ. ಅದರಲ್ಲಿ 'ಎಲ್‌ಮಿಸ್ಟಿ' ಜ್ವಾಲಾಮುಖಿ ಇಂದಿಗೂ ಜೀವಂತವಾಗಿದೆ. ಇದು ಈ ಬೃಹತ್ ಜ್ವಾಲಾಮುಖಿ ಅಡಿಯಲ್ಲೇ ಇರುವ ನಗರವಾಗಿದೆ. ಈ ನಗರಕ್ಕೆ ಭೂಕಂಪಗಳ ಕಾಟವೂ ಇದೆ. ನೇಮಿಚಂದ್ರ ಅವರು ಇಲ್ಲಿಂದ ಭಾರತಕ್ಕೆ ಹಿಂತಿರುಗಿದ ಕೆಲವೇ ದಿನಗಳಲ್ಲಿ ೮.೧ ರಿಕ್ಟರ್ ಪ್ರಮಾಣದಲ್ಲಿ ಭೂಕಂಪ ಸಂಭವಿಸಿತು. ಇದು ಕೂಡಾ ಭಾರತದಂತೆ 'ಕರ್ಮಭೂಮಿ' 'ಎಲ್ಲ ಹಣೆಬರಹ' ಎಂದು "ಆದಾಗ ಬಂದಾಗ ನೋಡಿಕೊಳ್ಳೋಣವೆಂದು" ಜನ ಮಾತಾಡುತ್ತಾರೆ. ಬುಸುಗುಟ್ಟುವ ಜ್ವಾಲಾಮುಖಿಯ ನೆರಳಲ್ಲಿ ತಣ್ಣಗೆ ಮಲಗಿರುವ ಈ ನಗರದ ಬಗ್ಗೆ, ಜನರ ಬಗ್ಗೆ ಹೇಳುತ್ತಾರೆ. "ಪ್ರಾಕೃತಿಕ ವಿಕೋಪದಲ್ಲಿಯೂ ಜನರು ಬವಣೆಗಳನ್ನು ಸರಿದೂಗಿಸಿಕೊಂಡು ಬದುಕುತ್ತಿರುವ ಪರಿ ಕಂಡು ಅವರಲ್ಲಿ ಬುದ್ಧಿವಂತಿಕೆ, ಜ್ಞಾನ ಇವರನ್ನು ಉಳಿಸಿದೆ" ಎಂಬುದಾಗಿ ನೇಮಿಚಂದ್ರ ಅವರು ಹೇಳುತ್ತಾರೆ.

ಕುಸ್ಕೋ ಪೆರುವಿನ ಬಹಳ ಪ್ರಮುಖವಾದ ಐತಿಹಾಸಿಕ ತಾಣ. ಪುರಾತನ ಇನ್ಕಾ ಸಾಮ್ರಾಜ್ಯದ ರಾಜಕೀಯ ಮತ್ತು ಧಾರ್ಮಿಕ ರಾಜಧಾನಿಯಾಗಿತ್ತು. ಆಂಡೀಸ್ ಪರ್ವತಗಳ ಮಡಿಲಿನಲ್ಲಿರುವ ಕುಸ್ಕೋ ೧೧,೬೦೦ ಅಡಿಗಳಷ್ಟು ಎತ್ತರದಲ್ಲಿದೆ. ಇನ್ಕಾಗಳ "ಕೆಚುವಾ" ಭಾಷೆಯಲ್ಲಿ "ಕುಸ್ಕೋ" ಎಂದರೆ "ನಾಭಿ" ಎಂದರ್ಥ. ಇದು ಭೂಮಿಯ ನಡುಮಧ್ಯೆಯಲ್ಲಿ ನಾಭಿಯಲ್ಲಿದೆ ಎಂದು ನಂಬಿದ್ದರು. ಇವರು ಸೂರ್ಯದೇವರ ಆರಾಧಕರು. ಬೃಹತ್ ದೇವಾಲಯಗಳು, ಭವ್ಯ ಅರಮನೆಗಳು ಚಿನ್ನ ಬೆಳ್ಳಿಯ ತಗಡುಗಳನ್ನು ಹೊದಿಸಿದ ಒಳಭಾಗ ಇನ್ಕಾ ಸಾಮ್ರಾಜ್ಯ ವೈಭವದಿಂದ ಮೆರೆದಿತ್ತು.

ಕುಸ್ಕೋ ದಾಟಿ ಪೆರುವಿನ ಪವಿತ್ರ ಕಣಿವೆಗೆ ಇಳಿದಂತೆ ಸುತ್ತಲ ಪರ್ವತಗಳ ಸೌಂದರ್ಯ, ನಡುವಿನ ಕಣಿವೆಗಳು, ತೆರೆದ ಪ್ರಕೃತಿಯ ಶಾಂತ ದೃಶ್ಯ ತನ್ಮಯಗೊಳಿಸುತ್ತದೆ. ನೇಮಿಚಂದ್ರ ಅವರಿಗೆ ಅರೆಕ್ಷಣ ಈ ಕಣಿವೆಗಳಲ್ಲಿ ಕಳೆದುಹೋಗುವ ಬಯಕೆ ಉಂಟಾಗುತ್ತದೆ. ನಡುವಿನ ಪುಟ್ಟಹಳ್ಳಿಗಳು ನಮ್ಮ ಭಾರತದ ಹಳ್ಳಿಗಳಿಗಿಂತ ಭಿನ್ನವಲ್ಲ. ಸಾಮ್ಯತೆಯನ್ನು

ಕಾಣುತ್ತಾರೆ. ಸುತ್ತುವರಿದ ಪರ್ವತಗಳ ನಡುವಿನ ಕಣಿವೆಯ ವಿಹಂಗಮ ನೋಟಕ್ಕೆ ಮನಸೋಲುತ್ತಾರೆ. ಉರುಬಂಬಾನದಿ ಪೆರುಕಣಿವೆಯಲ್ಲಿ ಹರಿಯುವ ಪವಿತ್ರ ನದಿಯಾಗಿದೆ. ಇನ್ಕಾಗಳ ಈ ಪವಿತ್ರ ಕಣಿವೆ ಪೂರ್ವದಲ್ಲಿ ಪಿಸಾಕ್‌ನಿಂದ ಆರಂಭವಾಗಿ ಪಶ್ಚಿಮದಲ್ಲಿ ಓಲಂತಾಯ್‌ತೊಂಬಾದಲ್ಲಿ ಕೊನೆಗೊಳ್ಳುತ್ತದೆ.

"ಸೋರೆ ಬುರುಡೆಗಳ ಮೇಲೆ ಕೆತ್ತುವ ಕಲೆ ಇಲ್ಲಿ ಪುರಾತನವಾದುದು. ಪೆರುವಿನ ಒಂದು ಕಣಿವೆಯಲ್ಲಿ ಅತಿ ಪುರಾತನ ದೇವರ ಚಿತ್ರವಿರುವ ಸೋರೆ ಬುರುಡೆಯ ಬಟ್ಟಲು ಸಿಕ್ಕಿದೆ. ಈ ಬಟ್ಟಲು ಕ್ರಿ.ಪೂ. ೨೨೫೦ರಷ್ಟು ಹಳೆಯದು. ಪೆರುವಿನಲ್ಲಿರುವ ಮೆಕ್ಕೆ ಜೋಳಕ್ಕೆ ಬಲುಪುರಾತನ ಇತಿಹಾಸವಿದೆ. ಬದುಕಿನಲ್ಲಿ ಮೆಕ್ಕೆಜೋಳ ಬಲು ದೊಡ್ಡ ಪಾತ್ರವಹಿಸಿದೆ. ಕೆಚುವಾ ಆಂಡಿಯನ್ ನೆಲದ ಭಾಷೆ. ಇನ್ಕಾಗಳ ಅಧಿಕೃತಭಾಷೆಯಾಗಿ ಮೆರೆದ ಕೆಚುವಾಗೆ ಶ್ರೀಮಂತ ಇತಿಹಾಸವಿದೆ."[೩೦]

ಒಂದು ಕಣಿವೆಯ ಭವ್ಯ ಇತಿಹಾಸವು ಅವರ ಚರಿತ್ರೆ, ಸಂಸ್ಕೃತಿ, ಧರ್ಮ, ಜೀವನಕ್ರಮ, ರೂಢಿ–ಸಂಪ್ರದಾಯ, ಭಾಷೆ, ವಾಣಿಜ್ಯ ಬೆಳೆಗಳು ಇವೆಲ್ಲವೂ ಕಳೆದು ಹೋದ ನಾಗರಿಕತೆಯನ್ನು ನೇಮಿಚಂದ್ರ ಅವರು ಮತ್ತೆ ಪುನಃ ನಮ್ಮ ಕಣ್ಣು ಮುಂದೆ ತಂದಿದ್ದಾರೆ.

"ಓಲಂತಾಯ್ ತೊಂಬೋ" ಎಂಬ ಸ್ಥಳದಲ್ಲಿ ಬೆಟ್ಟ ಕಡಿದು ನಿಂತ ವಿಶಾಲವಾದ ಇನ್ಕಾ ಟೆರೇಸಸ್, ಮೆಟ್ಟಿಲು ಮೆಟ್ಟಿಲಿನಂತೆ ಏರಿನಿಂತ ಪರ್ವತ ಶಿಖರ, ಎತ್ತರದೆತ್ತರದ ಮೆಟ್ಟಿಲುಗಳು ಮುಗಿಲು ಮುಟ್ಟಿದ್ದವು. ಇಲ್ಲಿಯ ಟೆರೇಸಸ್ ಲಾಮಾ ಪ್ರಾಣಿಯ ಆಕಾರದಲ್ಲಿತ್ತು. ಇದರ ತುತ್ತ ತುದಿಯಲ್ಲಿ ಸೂರ್ಯನ ದೇವಾಲಯವನ್ನು ಕಟ್ಟಿದ ಇನ್ಕಾಗಳ ಪಳುವಳಿಕೆಗಳ ಬರವಣಿಗೆ ಇಲ್ಲದ, ಒಂದು ಲಿಖಿತ ಭಾಷೆ ಇಲ್ಲದ, ಚಕ್ರವೆಂದರೇನು ಎಂದು ಗೊತ್ತಿಲ್ಲದ, ಕಬ್ಬಿಣದ ಸಲಕರಣೆಗಳಿಲ್ಲದ ಇನ್ಕಾಗಳ ಈ ಬೃಹತ್ ಸೂರ್ಯ ದೇವಾಲಯದ ನಿರ್ಮಾಣವನ್ನು ಪರ್ವತದ ತುದಿಯಲ್ಲಿ ನಿಲ್ಲಿಸಿದ್ದು ಹೇಗೆ ಎಂಬುದಾಗಿ ನೇಮಿಚಂದ್ರ ಅವರು ಇನ್ಕಾಗಳ ಪೂರ್ವಜರ ಬುದ್ಧಿವಂತಿಕೆಗೆ ಬೆರಗಾದರು.

"ಇಂದು ಆರ್ಥಿಕ ಉದಾರೀಕರಣದ ನೀತಿಗಳು, ಇಲ್ಲಿ ಬಂದು ನೆಲೆಯೂರಿದ ಬಹುರಾಷ್ಟ್ರೀಯ ಕಂಪನಿಗಳು ಪೆರುವಿನ ಚಿನ್ನವನ್ನು ತಮ್ಮ ದೇಶಗಳಿಗೆ ಹರಿಸುತ್ತಿವೆ. ಪೆರುವಿನ ಸಾಮಾನ್ಯ ಜನರು ಬಡತನದ ಆಳಕ್ಕಿಳಿದಿದ್ದಾರೆ. ಇನ್ಕಾಗಳ ಸಮೃದ್ಧಿಯ ಶ್ರೀಮಂತ ನೆಲ ವಿಷಮಯವಾಗುತ್ತಿದೆ. ಅತಿ ಕಡಿಮೆ ಬಂಡವಾಳ, ಅತಿ ಹೆಚ್ಚು ಲಾಭದ ಮಂತ್ರ ಜಪಿಸಿದ ಅಮೆರಿಕಾದ ಕಂಪನಿಗಳಿಗೆ ಬಡದೇಶಗಳ ಜೀವಗಳು ತೀರಾ ಅಗ್ಗವಾಗಿದೆ. ಬಡದೇಶಗಳ ನೆಲಜಲ ಪರಿಸರದೊಡನೆ ಚೆಲ್ಲಾಟ ಮಾಡುತ್ತದೆ ಎಂಬುವುದಕ್ಕೆ ಈ ಮೇಲಿನ ದೇಶವೇ ಸಾಕ್ಷಿಯನ್ನು ನುಡಿಯುತ್ತದೆ. ಚರಿತ್ರೆಯ ಮಡಿಲಲ್ಲಿ ದುಃಸ್ವಪ್ನಗಳ ಇಂದಿನ

ಬಹುರಾಷ್ಟ್ರೀಯ ಕಂಪನಿಗಳ ಒಡಲಿನಿಂದ ಪೆರು ತನ್ನ ಪುರಾತನ ಸಂಸ್ಕೃತಿಯ ನಾಗರಿಕತೆಯನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ." [೩೧]

ಪುರಾತನ ಪೆರುವಿಗರು ಏರು ಎತ್ತರದಲ್ಲಿ ಸುತ್ತಲಿನ ಪ್ರಕೃತಿಯೊಡನೆ ಲೀನವಾಗುವಂತೆ ಕಟ್ಟಿದ ಅಧ್ಯಾತ್ಮನಗರಿ – ಮಾಚುಪಿಚು. ಇದನ್ನು ೧೪ನೇ ಶತಮಾನದಲ್ಲಿ ಇನ್ಕಾಗಳು ಕಟ್ಟಿದರು. ೧೬ನೇ ಶತಮಾನದ ಮಧ್ಯಭಾಗದಲ್ಲಿ ಜೀವಂತವಿದ್ದ ನಗರವಿದು. ಇವೆಲ್ಲವನ್ನು ನೋಡಿದಾಗ ನೇಮಿಚಂದ್ರರವರಿಗೆ ಆಂಡೀಸ್ ನಾಗರಿಕತೆ ಮತ್ತು ಇನ್ಕಾ ಸಾಮ್ರಾಜ್ಯದ ಯಶಸ್ಸಿಗೆ ಕಾರಣವಾದುದು, ಇವರು ಪ್ರಕೃತಿ ಸಂಪತ್ತನ್ನು ಅತ್ಯಂತ ಸೂಕ್ಷ್ಮವಾಗಿ ಬುದ್ಧಿವಂತಿಕೆಯಿಂದ ಬಳಸಿಕೊಂಡದ್ದು. ಇದು ಅವರ ಎದುರಿಗೆ ವಾಸ್ತವವಾಗಿತ್ತು.

"ಮಾಚುಪಿಚು ನಗರದ ಒಳಹೊಕ್ಕಾಗ ಭಾರೀ ಕಲ್ಲುಗಳಲ್ಲಿ ಕಟ್ಟಿದ ನಗರ ಕಂಡುಬರುತ್ತದೆ. ಮೊದಲು ಇವರು ಕಂಡದ್ದು ಕಾಂಡಾರ್ ದೇವಾಲಯ. ಅರ್ಧ ಚಂದ್ರಾಕಾರದ ಸೂರ್ಯನ ದೇವಾಲಯ, ಖಗೋಳ ವೀಕ್ಷಣಾಲಯ 'ಇಂತಿಹು ತಾನಾ' ತುತ್ತ ತುದಿಯ ಎತ್ತರದ ಭಾಗದಲ್ಲಿ ಕಂಡುಬರುತ್ತದೆ." [೩೨]

ಮಾಚುಪಿಚು ನಗರದಲ್ಲಿ ಎದ್ದುಕಾಣುವುದು ಎರಡು ಸ್ಪಷ್ಟ ವಿಭಾಗಗಳು. 'ವ್ಯವಸಾಯದ ವಿಭಾಗ' ಇದರಲ್ಲಿ ಕೊನೆಯಿಲ್ಲವೆಂಬಂತೆ ಕಡಿದು ಮಾಡಿದ ಮೆಟ್ಟಿಲು ಮೆಟ್ಟಿಲು ಟೆರೇಸ್‌ಗಳು ಮುಗಿಲುಮುಟ್ಟಿ ನಿಂತಿವೆ. ಇನ್ನೊಂದು 'ಅರ್ಬನ್ ವಿಭಾಗ' ಬೃಹತ್ ಕಲ್ಲುಗೋಡೆ ಇದನ್ನು ಸುತ್ತುವರಿದಿದೆ.

ಕೆಲವೊಂದು ವಿಚಾರಗಳು ಇಲ್ಲಿಯ ಜನರ ನಾಗರಿಕತೆ ಮತ್ತು ಸಂಸ್ಕೃತಿಯನ್ನು ಹೊರ ಜಗತ್ತಿಗೆ ಪರಿಚಯಿಸುತ್ತವೆ. ಎತ್ತರೆತ್ತರಕ್ಕೆ ನೀರು ಹಾಯಿಸುವ ವಿಧಾನವನ್ನು ಅಳವಡಿಸಿದ್ದರು. ಭೂಕಂಪ ತಡೆಯುವಂತಹ ವಾಸ್ತುಶಿಲ್ಪವನ್ನು ಬಳಸುತ್ತಿದ್ದರು. ಶತಶತಮಾನಗಳ ಆಚೆಗೂ ಅಡಿಯಲ್ಲಿ ತುಡಿದ ಭೂಮಿಯ ಮೇಲೆ ಕುಸಿಯದೆ ನಿಂತ ನಗರಗಳನ್ನು ಕಟ್ಟಿದರು. ಇನ್ಕಾಗಳಿಗೆ ಹಣ ಎಂದರೇನು ತಿಳಿದಿರಲಿಲ್ಲ.

ಸಂಬಳಕ್ಕೆ ದುಡಿದವರಲ್ಲ, ಕಟ್ಟಿದವರಲ್ಲ. ಪ್ರಜೆಗಳ ಊಟ, ವಸತಿ, ಬಟ್ಟೆ ಎಲ್ಲವನ್ನೂ ಸರಕಾರ ನೋಡಿಕೊಳ್ಳುತ್ತಿತ್ತು. ಇವೆಲ್ಲಾವನ್ನು ನೋಡಿದಾಗ ಇನ್ಕಾಗಳ ಜನರ ಬುದ್ಧಿವಂತಿಕೆ ಮತ್ತು ಶ್ರಮದಾಯಕ ಜೀವನವನ್ನು ಮತ್ತೆ ಕಟ್ಟಿಕೊಡುತ್ತದೆ. ನೇಮಿಚಂದ್ರ ಅವರು ಕಣ್ಣುಮುಂದೆ ಕಂಡಂತಹ ವಿಸ್ಮಯಗಳನ್ನು ನೋಡುತ್ತಾ ಅಲೆದಾಡುವ ಪುರಾತನ ಆತ್ಮಗಳೊಡನೆ ಸಂಭಾಷಿಸಬೇಕು ಎಂದೇನಿಸುತ್ತದೆ.

"ಅಮೆಜಾನ್ ಮಹಾನದಿ, ಅಮೆಜಾನಿನ ಹರವನ್ನು, ಅದು ಹಾವಿನಂತೆ ಬಾಗಿ ಹರಡಿ ತಿರುಗುವ ಪರಿಯನ್ನು ಕಂಡು ಇನ್ಕಾಗಳು ಈ ನದಿಗೆ 'ಆಮರು ಮಾಯು' ಅಂದರೆ, 'ಮಹಾಸರ್ಪಮಾತೆ' ಎಂದು ಕರೆದಿದ್ದರು." [೩೩] ಪೆರುವಿನ ಅಮೆಜಾನ್ ಜಂಗಲ್

ಬೇಸ್‌ನಲ್ಲಿಯೇ ಅತ್ಯಂತ ಪ್ರಮುಖ ವಾಣಿಜ್ಯ ನಗರವಿದು, ಸುತ್ತುವರೆದ ಅರಣ್ಯದ ನಡುವೆ ಸಿಕ್ಕಿಬಿದ್ದರೂ, ಆಧುನಿಕಗೊಂಡ ನಗರ ಇಕಿಟಸ್. ಅಮೆಜಾನಿನ ಅದ್ಭುತಗಳನ್ನು ಇಕಿಟಸ್‌ನಲ್ಲಿಯೇ ಕಾಣಬೇಕು. ಈ ಸಣ್ಣ ಊರುಗಳ ಮನುಷ್ಯ ಸಂಬಂಧಗಳು ನನಗೆ ಆಪ್ಯಾಯಮಾನವಾಗಿ ಕಾಣುತ್ತವೆ. ನಮ್ಮ ಅವರ ನಡುವಿನದು ಕೇವಲ ಕೊಡುಕೊಳ್ಳುವ ವ್ಯಾಪಾರ ಮತ್ತು ವ್ಯವಹಾರದ ಸಂಬಂಧ ಮಾತ್ರ ಅನಿಸುವುದಿಲ್ಲ. ಅದರಾಚೆಗೂ ಮಾನವ ಸಂಬಂಧವೊಂದು ಉಸಿರಾಡುತ್ತಿತ್ತು ಎಂಬುದಾಗಿ ಪ್ರವಾಸದಲ್ಲಿ ಉಂಟಾದಂತಹ ಜನರ ಭಾವನೆಯ ಸ್ಪಂದನೆಗೆ ಮೂಕವಿಸ್ಮಿತರಾಗುತ್ತಾರೆ. ಅಲ್ಲಿನ ಸ್ಥಳೀಯ ಜನರ ಮೌನ, ನಿಶಬ್ಧ ನಿರುದ್ವೇಗ, ನಿರಾತುರ, ಸಾವಧಾನವಾಗಿ ಕಾದ ಜನ ಎಲ್ಲವೂ ಮನಸ್ಸನ್ನು ಶಾಂತಗೊಳಿಸುವಂತಿತ್ತು ಎಂಬುದಾಗಿ ಜನರ ನಡವಳಿಕೆಯ ಬಗ್ಗೆ ತಿಳಿಸುತ್ತಾರೆ.

"ಪೆರುವಿನಲ್ಲಿ ಹುಟ್ಟಿ ೬೨೮೦ ಕಿ.ಮೀ.ನ ಅತಿ ದೀರ್ಘ ಹಾದಿಯನ್ನು ಭೋರ್ಗರೆದು ಸವೆಸಿ ಬ್ರೆಜಿಲ್‌ನಲ್ಲಿ ಹೋಗಿ ಸಮುದ್ರ ಸೇರುತ್ತದೆ. ಆಫ್ರಿಕಾದ ಜೀವನದಿ ನೈಲ್ ಬಿಟ್ಟರೆ, ಜಗತ್ತಿನ ಅತಿ ಉದ್ದನೆಯ ನದಿ ಅಮೆಜಾನ್. ಆದರೆ ಅಮೆಜಾನ್‌ನಲ್ಲಿ ಹರಿಯುವಷ್ಟು ನೀರಿನ ಪ್ರಮಾಣ ನೈಲ್‌ನಲ್ಲಿಲ್ಲ. ಅಮೆಜಾನ್ ಭೂಮಧ್ಯ ರೇಖೆಯ ಬಳಿ ಇದೆ. ಈ ಭೂಮಿಯ ನಡುಪಟ್ಟಿಯ ಬಳಿ ಉಷ್ಣವಲಯದ ಬಿರುಸಾದ ತಾಣದಲ್ಲಿ ಪ್ರತಿ ವರ್ಷ ೪೦೦ ಅಂಗುಲ ಮಳೆಯಾಗುತ್ತದೆ."[೩೪]

ಇಂತಹ ಅಮೆಜಾನ್ ನದಿಯ ಹರವನ್ನು ಅದರೆಲ್ಲ ಬಿರುಸಿನೊಡನೆ, ನಿಧಾನವಾಗಿ ಅನುಭವಿಸಬೇಕೆಂಬ ಆಸೆ ಕೈಗೊಂಡಿಕೊಂಡ ಪುರುಸೊತ್ತಿನ ಈ ಪಯಣ ನೇಮಿಚಂದ್ರ ಅವರಿಗೆ ಆಪ್ಯಾಯಮಾನವಾಗಿತ್ತು. ಕಾಣದ ನೆಲದಲ್ಲಿ ಆತುರದಿಂದ ಓಡಿಹೋಗುವುದರಲ್ಲಿ ಅರ್ಥವಿಲ್ಲ. ಅಮೆಜಾನ್ ಮೇಲೆ ಅನಾತುರದ ಪಯಣ. ತಾವು ಹೊರಟ ತಾಣವೂ ಮುಖ್ಯವಾಗಿರುವುದಿಲ್ಲ. ತಲುಪುವ ಬ್ರೆಜಿಲ್ ಕೂಡ ಗುರಿಯಾಗಿರುವುದಿಲ್ಲ, ನೇಮಿಚಂದ್ರ ಅವರಿಗೆ ಈ ಪಯಣವಷ್ಟೇ ಮುಖ್ಯವಿತ್ತು. ಈ ಪಯಣವೇ ಅವರ ಹಾದಿಯಾಗಿತ್ತು, ಗುರಿಯಾಗಿತ್ತು.

ಬ್ರೆಜಿಲ್ ನೆಲದಲ್ಲಿ ಇಲ್ಲಿಯ ಜನಜೀವನದ ನಿರಾತುರ ಪರಿಸರವನ್ನು ಹೀರಿಕೊಳ್ಳುತ್ತಾ ಬೆಂಗಳೂರಿನ ಕಾರ್ಖಾನೆಯಲ್ಲಿ ಅವರು ದುಡಿಯುವುದು, ಉಸಿರುಕಟ್ಟಿದ ವೇಗ ಎಲ್ಲವೂ ಬಲುದೂರದ ನೆನಪಾಗಿ ನೇಮಿಚಂದ್ರ ಅವರಿಂದ ಹಿಂದೆಯೇ ಸರಿದಿತ್ತು. ತಲುಪಿದ ಬ್ರೆಜಿಲ್‌ನಲ್ಲಿ ಒಂದು ದಿನವೆಲ್ಲಾ ಅಲೆದಾಡಿ, ಮರುದಿನ ಬೆಳಗ್ಗೆ ಮತ್ತು ಬೋಟು ಹಿಡಿದು ಅಮೆಜಾನ್ ನದಿಯ ಮೇಲೆ ಹಾದು ಇಕಿಟಸ್ ತಲುಪಬೇಕಿತ್ತು. ವಿಶಾಲವಾದ ಈ ಬ್ರೆಜಿಲ್ ದೇಶದಲ್ಲಿ ಅಲೆದಾಡುತ್ತ ಅನುಭವಗಳನ್ನು ದೋಚಿಕೊಂಡು ಈ ಊರು ಅಲೆಯುವ ಉತ್ಸಾಹದಲ್ಲಿ ತಿರುಗುವಾಗ ಒಂದೆಡೆ ಒಂದು ಉದ್ದನೆಯ ಕಲ್ಲು ಸ್ಮಾರಕ ಕಂಡಿತು. ಅದರ

ಮೇಲೆ ಇತ್ತ ಕಡೆಗೆ ಬ್ರೆಜಿಲ್ ಎಂದು ಅತ್ತ ಕಡೆಗೆ ಕೊಲಂಬಿಯಾ ಎಂದೂ ಬರಹವನ್ನು ನೋಡಿ ನೇಮಿಚಂದ್ರ ಮತ್ತು ಅವರ ಗೆಳತಿಗೆ ಆಶ್ಚರ್ಯವುಂಟಾಗಿ ವೀಸಾ ಇಲ್ಲದೆ ದಕ್ಷಿಣ ಅಮೆರಿಕಾದ ಮತ್ತೊಂದು ದೇಶವನ್ನು ಕಾಣುವ ಅವಕಾಶವನ್ನು ನಿರಾಯಾಸವಾಗಿ ಪಡೆದುಕೊಂಡಿದ್ದರು. ಆದರೆ ಪೆರು ಮತ್ತು ಈಕ್ವೆಡರ್ ನಡುವೆ ೧೯೯೫ರಲ್ಲಿ ಗಡಿವಿವಾದ ಭುಗಿಲೆದ್ದು ಯುದ್ಧಕ್ಕೆ ಹಾದಿಯಾಗಿತ್ತು. ನೇಮಿಚಂದ್ರ ಅವರಿಗೆ ಮುಖ್ಯ ಬೀದಿಯಲ್ಲೆಲ್ಲ ಈ ಬದುಕಿಗೆ ವೇಗವಿರಲಿಲ್ಲ. ಭೋಗವೂ ಕಾಣಲಿಲ್ಲ. ಒಂದು ರೀತಿಯ ಇದ್ದುದ್ದರಲ್ಲಿಯೇ ತೃಪ್ತ ಬದುಕನ್ನು ಕಂಡು ಭಾರತದ ನಮ್ಮ ಹಳ್ಳಿಗರ ಮುಖದಲ್ಲಿ ಕಾಣುವ ಮುಗ್ಧ ಸಂತೃಪ್ತಿಯನ್ನು ಕಾಣುತ್ತಾರೆ.

ನೇಮಿಚಂದ್ರ ಅವರು ಅಮೆಜಾನ್ ಕಾಡಿನಲ್ಲಿ ಕಾಲಿಡುತ್ತಿದ್ದಂತೆ ಅವರನ್ನು ಸ್ವಾಗತಿಸಿದ್ದು ಆ ಕಾಡಿನ ವಿಶೇಷವಾದ 'ವೂಲಿಮಂಕಿ'. 'ಮರೂಹ', 'ಮಾರುಕೀಟ' ಅವುಗಳ ಹೆಸರು. ಈ ಕೋತಿಗಳಿಗೆ ಮೈಯೆಲ್ಲ ಕುರಿಯ ತುಪ್ಪಟದಂತೆ ನುಣಪಾಗಿರುತ್ತದೆ. ಇವುಗಳ ಹೆಸರು ನಮ್ಮ 'ಮಾರುತಿ' ಹೆಸರಿಗೆ ಎಷ್ಟು ಹತ್ತಿರ ಇದೆಯಲ್ಲ ಎಂದು ನೇಮಿಚಂದ್ರ ಅವರು ಅಚ್ಚರಿಪಡುತ್ತಾರೆ. ಅಲ್ಲದೆ ಪ್ರತಿಯೊಂದು ವಸ್ತು, ಸ್ಥಳ ಮತ್ತು ಜನರ ನಡಾವಳಿಗಳನ್ನು ಭಾರತದೊಂದಿಗೆ ಹೋಲಿಕೆ ಮಾಡಿಕೊಂಡು ಸಾವಿರಾರು ಮೈಲಿ ಆಚೆಗೂ 'ನಾವು ಬೇರೆಯಲ್ಲ, ಎಲ್ಲರೂ ಒಂದೇ' ಭಾವನೆ ಅವರಿಗೆ ಅನಿಸುವುದು ಪ್ರವಾಸ ಹಿನ್ನೆಲೆಯಲ್ಲಿ ಅವರಿಗೆ ಇರುವ ಮಾನವೀಯ ಕಳಕಳಿ ಎದ್ದು ಕಾಣುತ್ತದೆ.

"ಅಮೆಜಾನ್ ಮಳೆಕಾಡುಗಳಲ್ಲಿ ೩೦೦ ಬಗೆಯ ಸಸ್ತನಿಗಳಿಗೆ, ಸಾವಿರಾರು ಬಗೆಯ ಮೀನುಗಳಿಗೆ, ಲಕ್ಷಾಂತರ ಬಗೆಯ ಗಿಡಮರಗಳಿಗೆ ಅಮೆಜಾನ್ ನೆಲೆಯಾಗಿದೆ. ಇಲ್ಲಿ ಅದೆಷ್ಟು ಬಗೆಯ ಕ್ರಿಮಿಕೀಟಗಳಿವೆ ಎಂದರೆ ಅವನ್ನೆಲ್ಲವನ್ನೂ ಯಾವ ಕಾಲಕ್ಕೂ ಸಂಪೂರ್ಣವಾಗಿ ದಾಖಲು ಮಾಡಲು ಸಾಧ್ಯವಾಗದೆ ಹೋಗಬಹುದು. ಈ ಕಾಡಿನಲ್ಲಿ 'ಮಕವಾಸ್' ಎಂಬ ವರ್ಣರಂಜಿತ ಬೃಹತ್‌ಗಾತ್ರದ ಗಿಳಿಗಳಿವೆ."[೩೫]

ಅಮೆಜಾನ್ ಕಾಡುಗಳ ಸಂಪನ್ಮೂಲಗಳ ಲೂಟಿಯಷ್ಟೇ ಅಲ್ಲ, ಈ ಜನರ ಸಾವಿರ ಸಾವಿರ ವರ್ಷಗಳ ಜ್ಞಾನವನ್ನೂ ತಮ್ಮದೆಂದು ಪೇಟೆಂಟ್ ಮಾಡಿ ಕುಳಿತ ಶ್ರೀಮಂತ ದೇಶಗಳಿವೆ. ಸ್ಪಾನಿಷರು ಈ ನೆಲದ ಚಿನ್ನವನ್ನು ಕೊಳ್ಳೆ ಹೊಡೆದರೆ, ಅಮೆರಿಕ ಈ ನೆಲದ ಚಿನ್ನವಷ್ಟೆ ಅಲ್ಲ, ಈ ನೆಲದ ಜನರ ಶತಶತಮಾನದ ಜ್ಞಾನವನ್ನೂ ತನ್ನ ಲಾಭಕ್ಕೆ ಕೊಳ್ಳೆ ಹೊಡೆದಿದೆ ಎಂಬುದಾಗಿ ಅಲ್ಲಿ ನಡೆಯುತ್ತಿರುವ ದೌರ್ಜನ್ಯ ಬಗ್ಗೆ ಬೆಳಕನ್ನು ಚೆಲ್ಲುತ್ತಾರೆ.

ನೇಮಿಚಂದ್ರ ಅವರಿಗೆ ಪ್ರಥಮ ಸ್ತ್ರೀವಾದಿ ಬರಹಗಾರ್ತಿ ಆಫ್ರಾಬೆನ್ ನೆನಪಾಗುತ್ತಾಳೆ. "ಶತಶತಮಾನಗಳ ಹಿಂದೆಯೇ ದಕ್ಷಿಣ ಅಮೆರಿಕೆಗೆ, ಅಮೆಜಾನ್ ಬೇಸ್‌ಗೆ ೧೬೬೩ರಲ್ಲಿ ಇಂಗ್ಲೆಂಡಿನಿಂದ ಹೊರಟು ದೀರ್ಘಪ್ರಮಾಣ ಮಾಡಿ ಬಂದಿಳಿದ್ದಳು. ಆಫ್ರಾ ಇಲ್ಲಿಯ

ಗುಲಾಮರ ಬಂಡಾಯದಲ್ಲಿ ಭಾಗಿಯಾದಳು. ಇಲ್ಲಿಯ ಅನುಭವಗಳು ಆಕೆಯ ಪ್ರಸಿದ್ಧ ಕೃತಿ 'ಒರೊಂಕೋ'ನಲ್ಲಿ ಮೂಡಿ ಬಂದಿವೆ. ಈ ಕೃತಿಯಲ್ಲಿ ಜೀತಪದ್ಧತಿಯ ಭಯಂಕರ ಚಿತ್ರಣವನ್ನು ಮೊತ್ತಮೊದಲ ಬಾರಿಗೆ ಜನಸಾಮಾನ್ಯರಿಗೆ ತಲುಪಿಸಿತ್ತು. ೩೫೦ ವರ್ಷಗಳ ಹಿಂದೆಯೇ ಗುಲಾಮ ಪದ್ಧತಿಯ ವಿರುದ್ಧ ದನಿಯೆತ್ತಿದ ಮಹಿಳೆ ಆಫ್ರಾಬೆನ್"[೩೬] ಎಂಬುದಾಗಿ, ಇಲ್ಲಿರುವ ಇತಿಹಾಸವನ್ನು ಪರಿಚಯಿಸಿಕೊಂಡು ವರ್ತಮಾನದಿಂದ ವಿವರಿಸುತ್ತಾ, ಭವಿಷ್ಯಕ್ಕೆ ಭದ್ರಬುನಾದಿಯನ್ನು ಹಾಕುತ್ತಾರೆ.

ಇಲ್ಲಿನ "ಅನಕೊಂಡಾಗಳು ಬೋವಾ ಕನಸ್ಟ್ರಿಕ್ಟರ್ ಕುಟುಂಬಕ್ಕೆ ಸೇರಿದ ಹಾವುಗಳು. ಇವು ತಮ್ಮ ಬೇಟೆಯನ್ನು ಕಜ್ಜಿ ಕೊಲ್ಲುವುದಿಲ್ಲ, ಅವುಗಳ ಸುತ್ತ ಸುತ್ತಿಕೊಂಡು ಗಟ್ಟಿಯಾಗಿ ಬಿಗಿದುಕೊಂಡು ಉಸಿರುಕಟ್ಟಿಸಿ ಸಾಯಿಸುತ್ತವೆ. ಅನಕೊಂಡಾಗಳು ಒಮ್ಮೆಗೆ ೬೦-೭೦ ಮರಿಗಳನ್ನು ಹಾಕುತ್ತವೆ. ಅನಕೊಂಡಾಗಳು ವಿಪರೀತ ಗಾತ್ರದಲ್ಲಿ ಬೆಳೆಯಬಲ್ಲವು. ಇಡೀ ಮನುಷ್ಯನನ್ನೇ ನುಂಗಬಲ್ಲವು. ನೂರು ಅಡಿಯಷ್ಟು ಉದ್ದದ ಅನಕೊಂಡಾ ಕಂಡ ಸ್ಥಳೀಯರಿದ್ದಾರೆ. ಆದರೆ ಇವರು ಕಂಡಂತಹ ಅನಕೊಂಡಾ ಹದಿನೈದು ಅಡಿಯಾದರೂ ಉದ್ದವಿತ್ತು."[೩೭] ಪಿರಾನಗಳ ಬಗ್ಗೆ, ಅನಕೊಂಡಾಗಳ ಬಗ್ಗೆ ಇಷ್ಟೆಲ್ಲ ಮೊದಲು ತಿಳಿದಿರಲಿಲ್ಲ. ಹಾಗಾಗಿ ಅಮೆಜಾನ್ ಕಾಡು ನದಿ ಇವರುಗಳಲ್ಲಿ ಭಯವನ್ನು ಉಂಟು ಮಾಡಲಿಲ್ಲ.

ಅಮೆಜಾನ್ ಕಾಡಿನ ಒಳಭಾಗಕ್ಕೆ ಕರೆತಂದು ದೋಣಿ ನಿಲ್ಲಿಸಿದಾಗ ಅಲ್ಲಿ ನೇಮಿಚಂದ್ರ ಅವರು ಅಮೆಜಾನಿನ 'ನೇಟಿವ್' ಜನರನ್ನು ಕಾಣುತ್ತಾರೆ. ಸ್ತ್ರೀಯರೆಲ್ಲ ಸೊಂಟದ ಮೇಲೆ ನಗ್ನ. ಅದರ ಕೆಳಗೆ ಒಂದು ಕೆಂಪು ವಸ್ತ್ರ ಸುತ್ತಿಕೊಂಡಿದ್ದರು. ಗಂಡಸರು, ಸೊಂಟದ ಕೆಳಗೆ ಹುಲ್ಲಿನ ಲಂಗ ತೊಟ್ಟಿದ್ದರು. ಅಲ್ಲಿ ಅವರ ವಾಸದ ಮನೆಯೂ ಪುಟ್ಟ ಹುಲ್ಲಿನ ಗುಡಿಸಲು, ಅದರ ಬಗಲಿನಲ್ಲಿ ಸಾಲಾಗಿ ಒಂದಿಷ್ಟು ಈಚಲ ಛಾವಣಿಯನ್ನು ಕಾಣುತ್ತಾರೆ. ಈ ಛಾವಣಿಯ ಅಡಿಯಲ್ಲಿ ಗಳುಗಳ ಮೇಲೆ ಅದ್ಭುತ ಕರಕುಶಲ ವಸ್ತುಗಳನ್ನು ನೇತುಹಾಕಿದ್ದರು. ಕೊರಳಿಗೆ ಹಾರ, ಬಳೆಯಂಥದ್ದು, ಕಿವಿಗೆ ನೇತು ಹಾಕಿಕೊಳ್ಳುವ ವಸ್ತುಗಳಿದ್ದವು. ಕೆಲವನ್ನು ಪುಟ್ಟ ಆಮೆಯ ಕವಚದಿಂದ, ಪುಟ್ಟ ಪ್ರಾಣಿಗಳ ಮೂಳೆಗಳಿಂದ ತಯಾರಿಸಿದ್ದರು.

ಇವೆಲ್ಲವನ್ನು ನೋಡಿದಂತಹ ನೇಮಿಚಂದ್ರ ಅವರಿಗೆ ನಮ್ಮ ನಡುವೆ ಎಷ್ಟು ಸಾಮ್ಯತೆಗಳಿವೆ ಎಂದು ಗುರುತಿಸುತ್ತಾರೆ. ಅದೇ ರೀತಿ ಕೆಲವು ಅಗಾಧವಾದ ಕಂದರವಿತ್ತು ಎಂಬುದಾಗಿ ಅಲ್ಲಿಯ ಸನ್ನಿವೇಶವನ್ನು ವಿವರಿಸುತ್ತಾ ಹೋಗುತ್ತಾರೆ. ಅಮೆಜಾನ್ ಕಾಡಿನ ಜನರು ತಮ್ಮ ಅವಲೋಕನ ಮತ್ತು ಅನುಭವಗಳಿಂದ ಜ್ಞಾನವನ್ನು ಸಂಪಾದಿಸಿಕೊಂಡು ಮುಂದಿನ ಪೀಳಿಗೆಗೆ ರವಾನಿಸುವುದನ್ನು ಕಾಣುತ್ತಾರೆ.

ಹೀಗೆ ನೇಮಿಚಂದ್ರ ಅವರು ತನ್ನ ಪೆರು ಪ್ರವಾಸದಲ್ಲಿ ಅಂತ್ಯದಲ್ಲಿ ಈ ರೀತಿ ಅರ್ಥೈಸಿಕೊಳ್ಳುತ್ತಾರೆ. "ಈ ಪುರಾತನ ಸಂಸ್ಕೃತಿಯ ತೊಟ್ಟಿಲಲ್ಲಿ ಅಷ್ಟೆಲ್ಲ ಅದ್ಭುತಗಳು ಇನ್ನೂ

ಶೋಧಿಸದೆ ಉಳಿದಿವೆ. ಇಲ್ಲಿ ಹೆಜ್ಜೆ ಹೆಜ್ಜೆಗೆ ಇತಿಹಾಸ ಬಿಚ್ಚಿಕೊಳ್ಳುತ್ತದೆ. ಕಾಣೆಯಾದ ಚರಿತ್ರೆ ಹೊರಬೀಳುತ್ತದೆ. ಭಾರತದಂತೆ ಅತ್ಯಂತ ಪುರಾತನ ಸಂಸ್ಕೃತಿಯ ಅದ್ಭುತ ನೆಲ. ಇಲ್ಲಿ ಅಲೆದಷ್ಟೂ ಹೊಸದಿತ್ತು. ಈ ಆಂಡೀಸ್ ಪರ್ವತಗಳು, ಬೆಟ್ಟ ಕಣಿವೆಗಳು, ಮರಳುಗಾಡು, ಅಮೆಜಾನ್ ಮಳೆಕಾಡು – ನಾವು ಕಂಡದ್ದು ಒಂದು ಗುಟುಕು ಮಾತ್ರ ಮತ್ತೆ ಬರುವೆ, ಪುರುಸತ್ತಾಗಿ"[೩೮] ಇನ್ನೂ ಪೆರುವಿನ ಮೂಲೆ ಮೂಲೆಗಳಲ್ಲಿ ಅಲೆಯಲು ಆಸೆ ತುಂಬಿಕೊಂಡು 'ಹೋಗಿ ಬರುವೆ' ಎನ್ನುತ್ತಾ ಪೆರುವಿಗೆ ಹೃದಯ ತುಂಬಿ ವಿದಾಯವನ್ನು ಸಲ್ಲಿಸುತ್ತಾರೆ.

ನೇಮಿಚಂದ್ರ ಅವರ 'ಪೆರುವಿನ ಪವಿತ್ರ ಕಣಿವೆ'ಯಲ್ಲಿ ಎಂಬ ಪ್ರವಾಸ ಕಥನದಲ್ಲಿ ಮುಖ್ಯವಾಗಿ ರಾಜಕೀಯ ಮತ್ತು ಸಾಂಸ್ಕೃತಿಕ ವಿಶ್ಲೇಷಣೆಗಳನ್ನು ಪ್ರಧಾನವಾಗಿ ಕಂಡುಬರುತ್ತದೆ. ಇವರ ಸಾಂಸ್ಕೃತಿಕ ವಿಶ್ಲೇಷಣೆ ನಮ್ಮನ್ನು ಶತಶತಮಾನ ಕಾಲದ ಹಿಂದಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ನಾಸ್ಕಾಗೆರೆಗಳು ಅತ್ಯುನ್ನತಿಗೇರಿದ ಪುರಾತನ ನಾಗರಿಕತೆಯ ಸಾಂಸ್ಕೃತಿಕ ದಾಖಲೆಯಾಗಿದೆ. ನಾಸ್ಕಾ ಮರುಭೂಮಿ ಇಲ್ಲಿಯ ಜನರ ಅದ್ಭುತ ನಾಗರಿಕತೆ, ಧರ್ಮ ಮತ್ತು ಸಂಸ್ಕೃತಿಯ ಕುರುಹುಗಳಾಗಿವೆ. ನಾಸ್ಕಾ ಜನರ ಅತ್ಯಂತ ಅದ್ಭುತ ಕೃತಿ ರಹಸ್ಯಮಯ ದೈತ್ಯ ಚಿತ್ರಗಳು ಇಂದಿಗೂ ಮರುಭೂಮಿಯಲ್ಲಿ ಹರಡಿನಿಂತಿವೆ. ಆಂಡಿಯನ್ ಜನರ ಜ್ಯಾಮಿತಿ ಜ್ಞಾನವು ತಲೆದೂಗುವಂತಹದ್ದು.

ರಾಜಕೀಯ ವಿಶ್ಲೇಷಣೆಯಿಂದ ದೃಷ್ಟಿಯಿಂದ ನೋಡಿದಾಗ ಪೆರು ಯುರೋಪಿನ ಒಡೆತನದ ಅಡಿಯಾಳಾಯಿತು. ಸ್ಪೇನ್ ದೇಶದವರ ದಾಳಿ ನೂರಾರು ವರ್ಷಗಳ ಪುರಾತನ ನಾಗರಿಕತೆ, ಧರ್ಮ, ಸಂಸ್ಕೃತಿ ಎಲ್ಲವನ್ನೂ ಕೇವಲ ಕೆಲವೇ ವರ್ಷಗಳಲ್ಲಿ ಸರ್ವನಾಶ ಮಾಡಿದರು. ಪೆರುವಿನಲ್ಲಿ ರಕ್ತದ ನದಿ ಹರಿಸಿ, ಸ್ಪೇನ್ ದೇಶಕ್ಕೆ ಹೊನ್ನಿನ ಹೊಳೆಯೇ ಹರಿದುಹೋಯಿತು. ಆದರೆ ಇಂದು ಬಹುರಾಷ್ಟ್ರೀಯ ಕಂಪನಿಗಳು ಚಿನ್ನವನ್ನು ತಮ್ಮ ದೇಶಗಳಿಗೆ ಹರಿಸುತ್ತಿವೆ. ಈ ನೆಲದಲ್ಲಿ ರಾಜಕೀಯವಾಗಿಯೂ ರಕ್ತದಲ್ಲಿ ಬರೆದ ಇತಿಹಾಸವಿದೆ. ಫ್ಯೂಜಿಮೇರಿ ಮತ್ತು ಮಾಂಟೆಸಿನೋರ ಸರ್ವಾಧಿಕಾರದಿಂದ ಬಿಡುಗಡೆ ಪಡೆಯಲು ಪೆರುವಿನ ಜನ ಬಹಳಷ್ಟು ಹೋರಾಡಿದ್ದಾರೆ. ಅಮೆರಿಕ ಇವರ ರಾಜಕೀಯದಲ್ಲಿ ತಲೆಹಾಕಿ ತನ್ನ ಲಾಭಕೋರತನವನ್ನು ಮೆರೆದಿದೆ. ಪೆರುವಿಗರು ದಿಟವಾದ ಪ್ರಜಾತಂತ್ರವನ್ನು ಪಡೆಯಲು ಇಂದಿಗೂ ಹೋರಾಡುತ್ತಿರುವುದನ್ನು ನೇಮಿಚಂದ್ರ ಅವರು ಅಲ್ಲಿಯ ರಾಜಕೀಯ ಪರಿಸ್ಥಿತಿಯ ಮೂಲಕ ಕಟ್ಟಿಕೊಡುತ್ತಾರೆ.

ಮಹಿಳಾ ಅಧ್ಯಯನದ ದೃಷ್ಟಿಯಿಂದ ನೋಡಿದಾಗ ನಾಸ್ಕಾ ಗೆರೆಗಳ ಉಳಿವಿಗಾಗಿ ಕಾರಣವಾದ ವಿಜ್ಞಾನಿ ಡಾ. ಮರಿಯಾ ರೇಕಿಯ ಈ ನೆಲದಲ್ಲಿ ನಲವತ್ತಕ್ಕೂ ಹೆಚ್ಚು ವರ್ಷಗಳನ್ನು ಕಳೆದಿರುವುದು ಕಂಡುಬರುತ್ತದೆ. ಮಹಿಳಾ ಸಾಧನೆಯ ಚರಿತ್ರೆಯನ್ನು

ಕಟ್ಟಿಕೊಡುವ ಉದ್ದೇಶದಿಂದ ಹೇಳುವಾಗ ಪೆರುವಿನ ನೆಲದಲ್ಲಿ ಮಹಿಳಾ ಹಕ್ಕುಗಳಿಗಾಗಿ ಹೋರಾಡಿ ಮಡಿದ ಮರಿಯಾ ಎಲೆನಾನ್ನು ಕಾಣಬಹುದು. ನೇಮಿಚಂದ್ರ ಅವರು ಕೃತಿಯ ಉದ್ದಕ್ಕೂ ಪೆರು ಮತ್ತು ಭಾರತವನ್ನು ಹೋಲಿಸಿ ವಿವರಿಸುವುದನ್ನು ಕಾಣಬಹುದು. ಹೀಗೆ ನೇಮಿಚಂದ್ರ ಅವರು ನಿರ್ದಿಷ್ಟವಾದ ಉದ್ದೇಶವನ್ನು ಇಟ್ಟುಕೊಂಡು ಪ್ರವಾಸಮಾಡಿ, ತಮ್ಮ ಅನುಭವಗಳನ್ನೆ ವರದಿಯಾಗಿಸದೆ ಸಾಹಿತ್ಯವಾಗಿಸುವ ಇವರ ಪ್ರವಾಸ ಸಾಹಿತ್ಯ ಮೌಲಿಕ ಕೃತಿಯಾಗಿದೆ ಎಂದು ಹೇಳಬಹುದು.

ನೇಮಿಚಂದ್ರ ಅವರ ಪ್ರವಾಸ ಕಥನ 'ಪೆರುವಿನ ಪವಿತ್ರ ಕಣಿವೆಯಲ್ಲಿ'. ಈ ಕೃತಿಯನ್ನು ಓದಿದರೆ ಆನಂದದಲ್ಲಿ ತೇಲಾಡುವಂತಾಗುತ್ತದೆ. ಈ ಪುಸ್ತಕದಲ್ಲಿ ನೇಮಿಚಂದ್ರ ಅವರು ತಾವೇ ತೆಗೆದ ಫೋಟುಗಳನ್ನು ಹಾಕಿದ್ದಾರೆ. ಓದುಗರನ್ನು ಇತಿಹಾಸದ ಆಯಾಮದಲ್ಲಿ ಸೇರಿಸಿ ಇದರ ಜೊತೆಗೆ 'ರೆಡ್ ಇಂಡಿಯನ್'ರ ಸಂಸ್ಕೃತಿಯನ್ನು ಪರಿಚಯಿಸುತ್ತಾ, ಇನ್ಕಾಗಳ ಕಳೆದುಹೋದ ನಗರವಾದ 'ಮಚುಪಿಚು'ವಿನಲ್ಲಿ ಚಾರಣ ಮಾಡುತ್ತಾ ಅವರ ಪವಿತ್ರ ಕಣಿವೆಗಳಲ್ಲಿ ತಿರುಗಾಡುತ್ತಾ ಚಿಕ್ಕ ಬೋಟಿನಲ್ಲಿ ಬಲಿಷ್ಠವಾದ ಅಮೆಜಾನ್ ನದಿಯಲ್ಲಿ ತೇಲುತ್ತಾ, ದಟ್ಟವಾದ ಅಮೆಜಾನ್ ಕಾಡುಗಳಲ್ಲಿ ಒಂದು ರಾತ್ರಿ ಕಾಲಕಳೆಯುತ್ತಾ, ನೇಮಿಚಂದ್ರ ಅವರು ಪ್ರತ್ಯಕ್ಷವಾಗಿ ಆ ಸ್ಥಳಗಳಿಗೆ ಭೇಟಿಕೊಟ್ಟು ಆ ವೇಳೆಗೆ ಒಂದು ವಿಸ್ಮಯವಾದ ಕಥೆಯನ್ನೇ ಹೆಣೆದಿದ್ದಾರೆ.

ನೇಮಿಚಂದ್ರ ಅವರು ಪೆರುವಿನಲ್ಲಿ ಕಾಲಿಟ್ಟ ಮೊದಲನೇ ಕನ್ನಡದ ಮಹಿಳೆ ಎಂಬುವುದಕ್ಕೆ ಪಾತ್ರರಾಗುತ್ತಾರೆ. ಈ ರಹಸ್ಯವಾದ ಭೂಮಿಯ ಬಗ್ಗೆ ತಿಳಿದುಕೊಳ್ಳುವುದಕ್ಕೆ ಕಾತುರರಾಗಿರುತ್ತಾರೆ ಮತ್ತು ಇದನ್ನು ಅವರು ಪ್ರವಾಸ ಕಥನ ರೂಪದಲ್ಲಿ ದಾಖಲಿಸುತ್ತಾರೆ. ಅವರಿಗೆ ಭಾಷೆ ಗೊತ್ತಿರುವುದಿಲ್ಲ. ಆದರೂ ಅವರು ತುಂಬಾ ಜನರನ್ನು ಭೇಟಿ ಮಾಡಿ ಮತ್ತು ಅನುಭವವನ್ನು ಗ್ರಹಿಸಿ ಪೆರುವಿನ ಬಗ್ಗೆ ಪುಸ್ತಕದಲ್ಲಿ ಕಥೆ ರೂಪದಲ್ಲಿ ಹೇಳಿದ್ದಾರೆ.

ಇವರ ಬರವಣಿಗೆ ಭಿನ್ನವಾದ, ಶಾಬ್ಧಿಕ ವರ್ಣನೆಯಿಂದ ಕೂಡಿದೆ. ಹಾಗೆಯೇ ಕೆಲವು ಸಲ ಹಾಸ್ಯಪ್ರಜ್ಞೆಯಿಂದ ಕೂಡಿರುತ್ತದೆ. ಸುಧಾ ವಾರಪತ್ರಿಕೆಯಲ್ಲಿ ಅವರ ಪೆರುವಿನ ಪ್ರವಾಸ ಕಥನವು ಧಾರವಾಹಿಯ ರೀತಿಯಲ್ಲಿ ಪ್ರಕಟಗೊಂಡಾಗ ಅವರ ಪುಸ್ತಕವೂ ಬಾರಿ ಪ್ರಸಿದ್ಧಿಯಾಯಿತು. ತುಂಬಾ ಸ್ವಾರಸ್ಯಕರ ವಿಷಯವೆಂದರೆ ನೇಮಿಚಂದ್ರ ಅವರು ೨೦ ದೇಶಗಳಿಗೆ ಪ್ರವಾಸ ಹೋಗಿ ಬಂದಿದ್ದಾರೆ.

ನೇಮಿಚಂದ್ರ ಅವರು ತಾವು ನೋವನ್ನು ಪಡೆದು ಖಚಿತವಾದ ಮಾಹಿತಿಯನ್ನೇ ಸಂಗ್ರಹಿಸುತ್ತಾರೆ. ಅವರು ದೊಡ್ಡ ದೊಡ್ಡದಾದ ಲೈಬ್ರರಿಗಳಿರುವ ನಗರಗಳಾದ ನ್ಯೂಯಾರ್ಕ್, ಪ್ಯಾರಿಸ್, ವಾಷಿಂಗ್‌ಟನ್ ಮುಂತಾದವುಗಳಿಗೆ ಭೇಟಿನೀಡಿ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಅವರು ಕೆಲವು ಸ್ಥಳ ಮತ್ತು ವ್ಯಕ್ತಿಗಳ ವಿವರಣೆಯನ್ನು ಮಾಡುವಾಗ ಪಾತ್ರಗಳೊಳಗೆ ಇಳಿದು

ಎಲ್ಲೋ ಒಂದು ಕಡೆ ಅವರ ಜೀವನದಲ್ಲಿ ಬದುಕುತ್ತ ಅವರ ಆಲೋಚನೆಗಳನ್ನೇ ಆಲೋಚಿಸುತ್ತಾ ಇರುವಂತೆ ಭಾಸವಾಗುತ್ತದೆ.

ಯಾವತ್ತೂ ಆರಾಮದ ಕುರ್ಚಿಯ ಬರಹಗಾರರಾಗಿರಲಿಲ್ಲ. ಒಂದು ಕೃತಿ ರಚನೆ ಬೇಕಾಗುವಂತಹ ಪೂರಕ ಸಾಮಾಗ್ರಿಗಳನ್ನು ಹಾಗೆಯೇ ಅವಶ್ಯಕ ಸ್ಥಳಗಳ ಪರಿಶೀಲನೆ, ಅನುಭವದ ಆಳಕ್ಕಿರುವ ಅವರ ಚಿಂತನೆಯನ್ನು ಕಾಣಬಹುದು. ಹೀಗಾಗಿಯೇ ನೇಮಿಚಂದ್ರ ಅವರ ಪ್ರವಾಸ ಕಥನಗಳು ಭೂತಕಾಲದ ವಿಷಯವನ್ನು ವರ್ತಮಾನದಲ್ಲಿ ಬೆಳಕನ್ನು ಚೆಲ್ಲಿ ಭವಿಷ್ಯ ಕಾಲಕ್ಕೂ ಮಾರ್ಗದರ್ಶಕವಾಗುವ ರೀತಿಯಲ್ಲಿ ರಚನೆಗೊಂಡಿವೆ. ಒಂದು ದೇಶದ ಚರಿತ್ರೆಯನ್ನು ಮತ್ತೊಂದು ದೇಶದ ಚರಿತ್ರೆಯೊಂದಿಗೆ ಹೋಲಿಸುವಾಗ ಅಲ್ಲಿರುವ ಸರ್ವಕಾಲಿಕ ಅಂಶಗಳನ್ನು ತಿಳಿಸುತ್ತಾರೆ. ಇವರ ಪ್ರವಾಸ ಕೃತಿಗಳನ್ನು ಓದುವಾಗ ನಾವು ನೊಡಿ ಅನುಭವವನ್ನು ಪಡೆಯುತ್ತಿದ್ದೇವೊ ಎಂಬಂತೆಯೇ ಭಾಸವಾಗುತ್ತದೆ. ಅಲ್ಲದೆ ನಮ್ಮನ್ನು ಎಂದರೆ ಓದುಗರಲ್ಲಿ ಪ್ರವಾಸ ಮಾಡುವುದಕ್ಕೆ ಉತ್ತೇಜನ ನೀಡುತ್ತದೆ. ಮನಸ್ಸಿಗೆ ಆತ್ಮೀಯತೆ ಭಾವವನ್ನು ತುಂಬುತ್ತದೆ.

ಹೀಗೆ ನೇಮಿಚಂದ್ರ ಅವರು ಮೊದಲ ಪ್ರವಾಸ ಕಥನವಾದ 'ಒಂದು ಕನಸಿನ ಪಯಣ' ಕೃತಿಯಲ್ಲಿ ಮುಖ್ಯವಾಗಿ ಮಹಿಳಾ ಸಾಧಕಿಯರ ಬಗ್ಗೆ, ಮಹಿಳಾ ವಿಜ್ಞಾನಿಗಳ ಬಗ್ಗೆ, ಮಹಿಳಾ ಸಾಮಾಜಿಕ ಹೋರಾಟಗಾರ ಬಗ್ಗೆ ಪ್ರವಾಸವನ್ನು ಕೈಗೊಂಡು ಅವರ ಕೇಂದ್ರಸ್ಥಾನಕ್ಕೆ ಹೋಗಿ, ಅವರ ಸಾಧನೆಗಳು, ಎದುರಿಸಿದ ಸವಾಲುಗಳು, ಹೋರಾಟಗಳು, ಇತಿಹಾಸದ ಪುಟಗಳಿಂದ ಮರೆಯಾಗದಂತೆ ಮುಂದಿನ ಮಹಿಳೆಯರಿಗೆ ಮಾರ್ಗದರ್ಶನ ನೀಡುವ ರೀತಿಯಲ್ಲಿ ಚಿತ್ರಿಸಿದ್ದಾರೆ.

ನೇಮಿಚಂದ್ರ ಅವರು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಕ್ಕೆ ಭೇಟಿ ನೀಡಿ ಇದರ ಇತಿಹಾಸವನ್ನು ಪರಿಚಯಿಸುವುದು. ಶಾಮೋನಿ ದ್ವೀಪದ ಹಿಮ ಶಿಖರವನ್ನು ಕಂಡು ಮನಸ್ಸನ್ನು ಹಿಗ್ಗಿಸಿಕೊಂಡು ತನ್ನ ಕಥೆಯ ರಚನೆಗೆ ಸ್ಫೂರ್ತಿ ಪಡೆದುಕೊಳ್ಳುವುದು. ಬುರಾನೋ ದ್ವೀಪದ ಬಣ್ಣ ಬಣ್ಣ ಮಹಡಿಯ ಮನೆಗಳು, ಸಣ್ಣಗಲ್ಲಿಗಳು ಮತ್ತು ಕಸೂತಿ ಬಗ್ಗೆ ತಿಳಿಸುವುದು. ಅನೇಕ ಮ್ಯೂಸಿಯಂ ಭೇಟಿನೀಡಿ ಅನೇಕ ಪ್ರಸಿದ್ಧ ಚಿತ್ರಕಾರರ ಚಿತ್ರಗಳನ್ನು, ಕೊಹಿನೂರ್ ವಜ್ರಗಳನ್ನು ಅದರ ಇತಿಹಾಸವನ್ನು ವಿವರವಾಗಿ ವರ್ಣಿಸುವುದು – ಇವೆಲ್ಲವೂ ಅವರ ಸದಾಭಿರುಚಿಯನ್ನು ವ್ಯಕ್ತಪಡಿಸುತ್ತದೆ. ಮನುಷ್ಯನ ಜೀವನಕ್ಕೆ ನೆಮ್ಮದಿ ಶಾಂತಿಯ ಬಾಳ್ವೆಗೆ ಸಹಕಾರಿ ನೀಡುವ ನಿಟ್ಟಿನಲ್ಲಿ ಇವರ ಪ್ರವಾಸವು ಈ ಹಿನ್ನೆಲೆಯಿಂದ ಕೂಡಿದೆ. ಏಕೆಂದರೆ ತನ್ನ ಸುಖಕ್ಕಿಂತ ಮಿಗಿಲಾಗಿ ಸಮಾಜದ ಹಿತವನ್ನು ಬಯಸುವುದು, ಹೋದಕಡೆಯೆಲ್ಲಾ ಮಾನವೀಯ ಮೌಲ್ಯವನ್ನು ಎತ್ತಿಹಿಡಿಯುವುದು ಇವರ ಕೃತಿಯ

ಉದ್ದಕ್ಕೂ ಕಂಡುಬರುತ್ತದೆ. ಇದು ಸಾಮಾನ್ಯ ವ್ಯಕ್ತಿಯನ್ನು ಅಸಾಮಾನ್ಯ ಮಟ್ಟಕ್ಕೆ ಹೇರಿಸುವಂತಹ ಪ್ರಯತ್ನ ಎಲ್ಲರಿಗೂ ಮಾದರಿಯಾಗಿ ನಿಲ್ಲುವ ನಿದರ್ಶನವಾಗಿದೆ.

ಹೆಣ್ಣುಮಕ್ಕಳು ಮದುವೆ – ಸಂಸಾರ, ಮಕ್ಕಳು ಎಂಬ ಜಂಜಾಟದಲ್ಲಿ ಬದುಕನ್ನು ಅಂತ್ಯಗೊಳಿಸಿಕೊಳ್ಳುತ್ತಿರುವ ಈ ಆಧುನಿಕ ಕಾಲದಲ್ಲಿಯೂ ಬದುಕು ಎಷ್ಟೊಂದು ವಿಶಾಲವಾದುದು ವೈವಿಧ್ಯಮಯವಾದು ಎಂಬುದನ್ನು ಪ್ರವಾಸ ಕೃತಿ ಸಾದರಪಡಿಸುತ್ತದೆ. ಸಮಾಜದಲ್ಲಿ ಸ್ತ್ರೀ–ಪುರುಷ ಸಮಾನ ಜೀವಿಗಳು. ಆಯ್ಕೆ ಮತ್ತು ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಬಯಸಿದ ಬದಲಾವಣೆ ಕಷ್ಟವೇನಲ್ಲ ಎಂಬುದಾಗಿ ಸಾಧಕಿಯ ಜೀವನ ಸಾಧನೆಯಿಂದ ತಿಳಿದುಕೊಳ್ಳುತ್ತೇವೆ. ಹೆಣ್ಣುಮಕ್ಕಳಿಗೆ ಇರಲೇಬೇಕಾದ ಸಾಮಾಜಿಕ ಹೊಣೆಗಾರಿಕೆಯನ್ನು ಸ್ವತಃ ಅನುಸರಿಸುವುದರ ಮೂಲಕ ನೇಮಿಚಂದ್ರ ಅವರು ಸ್ತ್ರೀ ಕುಲಕ್ಕೆ ಆದರ್ಶ ಪ್ರತಿಮೆಯಾಗಿದ್ದಾರೆ.

## ಕೊನೆಟಿಪ್ಪಣಿಗಳು

೧. ಚಿಂತನೆಯ ಪಾಡು, ೨೦೧೦, ಪುಟ. ೮೫.

೨. ಲೇಖಕರ ಸಂದರ್ಶನ

೩. ಅವರ ಆಯ್ದ ಲೇಖನ

೪. ಲೇಖಕರ ಸಂದರ್ಶನ

೫. ಅದೇ

೬. ಅದೇ

೭. ಅದೇ

೮. ಪೆರುವಿನ ಪವಿತ್ರ ಕಣಿವೆಯಲ್ಲಿ, ೨೦೦೪, ಪು. ೮೯.

೯. ಅದೇ, ಪು. ೫೪

೧೦. ಅದೇ, ಪು. ೧೧೪

೧೧. ಅದೇ, ಪು. ೧೧೫

೧೨. ಅದೇ, ಪು. ೨೦೯

೧೩. ಅದೇ, ಪು. ೯೯

೧೪. ಅದೇ.,

೧೫. ಅವರ ಆಯ್ದ ಲೇಖನ

೧೬. ಲೇಖಕರ ಸಂದರ್ಶನ

೧೭. ಒಂದು ಕನಸಿನ ಪಯಣ, ೧೯೯೯, ಪು. ೫೬.

೧೮. ಅದೇ, ಪು. ೮೩

೧೯. ಅದೇ, ಪು. ೮೪

೨೦. ಅದೇ,

೨೧. ಲೇಖಕರ ಸಂದರ್ಶನ

೨೨. ಪೆರುವಿನ ಪವಿತ್ರ ಕಣಿವೆಯಲ್ಲಿ, ೨೦೦೪, ಪು. ೯.

೨೩. ಅದೇ, ಪು. ೯೩

೨೪. ಅದೇ, ಪು. ೩೦

೨೫. ಅದೇ, ಪು. ೪೨

೨೬. ಅದೇ, ಪು. ೫೪

೨೭. ಅದೇ, ಪು. ೫೮

೨೮. ಅದೇ, ಪು. ೫೧

೨೯. ಅದೇ, ಪು. ೫೮

೩೦. ಅದೇ, ಪು. ೯೬

೩೧. ಅದೇ, ಪು. ೧೨೦

೩೨. ಅದೇ, ಪು. ೧೩೯

೩೩. ಅದೇ, ಪು. ೧೪೯

೩೪. ಅದೇ, ಪು. ೧೫೪

೩೫. ಅದೇ, ಪು. ೧೮೯

೩೬. ಅದೇ, ಪು. ೧೯೬

೩೭. ಅದೇ, ಪು. ೨೦೧

೩೮. ಅದೇ, ಪು. ೨೧೫

****



# ಅಧ್ಯಾಯ – ೫

# ನೇಮಿಚಂದ್ರ ಅವರ ಪ್ರವಾಸ ವಿನ್ಯಾಸದ ಕಥನಗಳ ಅಧ್ಯಯನ

# ಅಧ್ಯಾಯ – ೫

# ನೇಮಿಚಂದ್ರ ಅವರ ಪ್ರವಾಸ ವಿನ್ಯಾಸದ ಕಥನಗಳ ಅಧ್ಯಯನ

ಕನ್ನಡ ಭಾಷೆಗೆ ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವಿದೆ. ಕನ್ನಡ ಭಾಷೆ ಸೃಜನಶೀಲವಾಗಿ ಮತ್ತು ಶಾಸ್ತ್ರೀಯವಾಗಿ ಶ್ರೇಷ್ಠಮಟ್ಟದ ಬೆಳವಣಿಗೆಯನ್ನು ಹೊಂದಿದೆ. ಸಮೃದ್ಧವೂ, ಪ್ರಬುದ್ಧವೂ ಆದ ಕನ್ನಡ ಭಾಷಾ ಸಾಹಿತ್ಯ ತನ್ನ ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಿಕ ಅನನ್ಯತೆಯಿಂದ ಜಾಗತಿಕ ಮಟ್ಟದಲ್ಲಿ ಗುರುತಿಸಿಕೊಂಡಿದೆ. ಈ ಬೆಳವಣಿಗೆಗೆ ಕನ್ನಡದ ಅಸಂಖ್ಯಾತ ಕವಿಗಳೂ, ಲೇಖಕರೂ, ಕಲಾವಿದರೂ ಕಾರಣರಾಗಿದ್ದಾರೆ. ಇಂತಹ ವೈವಿಧ್ಯಪೂರ್ಣವಾದ ದೊಡ್ಡ ಸಾಹಿತ್ಯ ಪರಂಪರೆ ನಮ್ಮ ಹಿಂದಿದೆ ಎಂಬುದು ಹೆಮ್ಮೆಯ ಸಂಗತಿಯಾಗಿದೆ.

ಖ್ಯಾತ ವಿಮರ್ಶಕ ಹಾಗೂ ಕಾದಂಬರಿಕಾರ ಡಿ.ಎಚ್.ಲಾರೆನ್ಸ್ ಕಾದಂಬರಿ ಸಾಹಿತ್ಯದ ಮಹತ್ವವನ್ನು ಕುರಿತು ಹೀಗೆ ಹೇಳಿದ್ದಾನೆ: "being a novelist, I consider myself superior to the saint, the scientist, the philosopher and the poet who are all great masters of different bits of man alive, that never get the whole hog. The novel is the one bright book of life."[೧]

ಇಂಗ್ಲಿಷ್ ಸಾಹಿತ್ಯದ ಸಂಪರ್ಕದಿಂದ ಕನ್ನಡಕ್ಕೆ ಆಗಮಿಸಿದ ಸಾಹಿತ್ಯ ಪ್ರಕಾರಗಳಲ್ಲಿ 'ಕಾದಂಬರಿ'ಯು ಮಹತ್ವಪೂರ್ಣವಾದುದು. ಅದು ಮನುಷ್ಯ ಜೀವಮಾನದ ವಿವಿಧ ಸ್ತರಗಳನ್ನು ಚಿತ್ರಿಸುವ ವಿಸ್ತೃತ ಕಥಾನಕವಾಗಿದೆ. ಈ ಸಾಹಿತ್ಯರೂಪ ಹೆಸರೇ ಸೂಚಿಸುವಂತೆ 'ಸ್ತ್ರೀ' ಪ್ರಧಾನವಾದುದು. ಆ ಹಿನ್ನೆಲೆಯಲ್ಲಿ ಬಾಣನ ಕಾದಂಬರಿಯ ಸ್ತ್ರೀ ಪಾತ್ರವೊಂದರ ಹೆಸರೇ ಕನ್ನಡ ಕಾದಂಬರಿಯ ಹೆಸರಾಗಿರುವುದು ವಿಶೇಷ. ಭಾರತೀಯ ಇತರ ಭಾಷೆಗಳಲ್ಲಿ ಈ ಸಾಹಿತ್ಯ ರೂಪಕ್ಕೆ ಬೇರೆ ಬೇರೆ ಹೆಸರುಗಳಿವೆ. ಇಂಗ್ಲಿಷಿನ 'ನಾವೆಲ್' ಎಂದೂ ಹಿಂದಿಯಲ್ಲಿ 'ಉಪನ್ಯಾಸ'ವೆಂದೂ, ಕನ್ನಡದಲ್ಲಿ 'ಕಾದಂಬರಿ'ಯೆಂದೂ ಜನಪ್ರಿಯವಾಗಿದೆ.

ಕಲ್ಪನೆ–ವಾಸ್ತವಗಳ ಸಮಪಾಕದಿಂದ ಇದು ಜನಮನವನ್ನು ಸೂರೆಗೊಂಡ ಸಾಹಿತ್ಯ ಪ್ರಕಾರವಾಗಿದೆ. ಕನ್ನಡದಲ್ಲಿ ಸಾಮಾಜಿಕ, ಐತಿಹಾಸಿಕ, ಪೌರಾಣಿಕ, ವಸ್ತುವಿನ ಜೊತೆಗೆ ಮನೋವೈಜ್ಞಾನಿಕ, ಪತ್ತೇದಾರಿ ಮೊದಲಾದ ವಸ್ತುವೈವಿಧ್ಯದಿಂದ ಕಾದಂಬರಿ ಸಮೃದ್ಧವಾಗಿ ಬೆಳೆದಿದೆ. ಕಾದಂಬರಿಗೆ ವಸ್ತುವಾಗದ ವಿಷಯಗಳೇ ಇಲ್ಲ ಎನ್ನಬಹುದು. ಗ್ಯಾನೆ ಹೇಳುವಂತೆ, "ಮಹಾಕಾವ್ಯದ ಕೇಂದ್ರವಸ್ತು ದಂತಕಥೆಯಾಗಿ ಹೋದ ನಿನ್ನೆಯಾದರೆ,

ಕಾದಂಬರಿಯ ವಸ್ತು ವರ್ತಮಾನವೆಂದು ಗುರುತಿಸಲ್ಪಡುವ ಇವತ್ತಿನದು. ಮಹಾಕಾವ್ಯದ್ದು ಕಥೆ ಹೇಳುವ ಶೈಲಿಯಾದರೆ, ಕಾದಂಬರಿಯದು ವರ್ಣನೆಯ ಶೈಲಿಯಾಗಿದೆ."[೨]

ಯುರೋಪಿನಲ್ಲಿ ಫ್ಯುಡಲ್ ವ್ಯವಸ್ಥೆಯ ಅಧಃಪತನವೇ ಕಾದಂಬರಿ ಹುಟ್ಟಿಗೆ ಕಾರಣವೆಂದು ಹೇಳುತ್ತಾರೆ. ಫ್ರಾನ್ಸ್ ಕ್ರಾಂತಿ, ರಷಿಯಾ ಕ್ರಾಂತಿಗಳ ಜೊತೆ ಕೈಗಾರಿಕಾ ಕ್ರಾಂತಿ ಹಾಗೂ ನಗರೀಕರಣಗಳು ಕಾದಂಬರಿಯ ಹುಟ್ಟಿಗೆ ಕಾರಣವೆಂದು ಹೇಳಬಹುದು. ಕಾದಂಬರಿಯನ್ನು ಆಧುನಿಕ ಜಗತ್ತಿನ ಮಹಾಕಾವ್ಯವೆಂದೂ, ಕರತಲ ರಂಗಭೂಮಿಯೆಂದೂ ಕರೆಯಲಾಗಿದೆ. ಇದೊಂದು ವ್ಯಾಪಕವಾದ ಸಾಹಿತ್ಯ ಪ್ರಕಾರ. ಬದುಕಿನ ಶೋಧನೆ ಇದರ ಮುಖ್ಯ ಕೇಂದ್ರ. ಒಟ್ಟಾರೆ ಹೇಳುವುದಾದರೆ ಜೀವನ ಪ್ರೀತಿ ಮತ್ತು ಲೌಕಿಕದಲ್ಲಿ ವ್ಯಕ್ತಿಯ ಆಸಕ್ತಿಯೇ ಕಾದಂಬರಿಯ ಹುಟ್ಟಿಗೆ ಕಾರಣವಾಗಿದೆ.

ಶಾಂತಿನಾಥ ದೇಸಾಯಿ ಅವರು ಹೇಳುವಂತೆ – ಕಾದಂಬರಿಯು "ಜೀವನಾನುಭವವನ್ನು ಪಡೆದು ನೋಡಿ, ವಿಮರ್ಶಿಸಿ, ಪುನರ್ನಿರ್ಮಿಸಿ, ಮೌಲ್ಯಗಳಿಂದ, ಆದರ್ಶಗಳಿಂದ, ಒಳದರ್ಶನಗಳಿಂದ, ಅದನ್ನು ಬೆಳಗಿಸುವಂಥ ಸಾಹಿತ್ಯ ಪ್ರಕಾರ"[೩]ವಾಗಿದೆ.

ಕನ್ನಡದಲ್ಲಿ ಆರಂಭ ಘಟ್ಟದ ಕನ್ನಡ ಕಾದಂಬರಿಗಳು ಮಹಿಳಾ ಸಮಸ್ಯೆಯನ್ನೇ ಪ್ರಧಾನ ವಸ್ತುವಾಗಿ ರಚನೆಗೊಂಡಿವೆ. ೧೮೯೯ರಲ್ಲಿ ಬಂದ ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ' ಕನ್ನಡದ ಮೊಟ್ಟಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿಯೆಂದು ಹೆಮ್ಮೆಯಿಂದ ಹೇಳುತ್ತೇವೆ.

ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಒಂದು ಶತಮಾನದ ಇತಿಹಾಸವಿದೆ. ಈ ಹರವಿನಲ್ಲಿ ಅದು ಪಡೆದುಕೊಂಡ ಹಲವು ಬಗೆಯ ತಿರುವುಗಳಿವೆ. ನವೋದಯ ಪೂರ್ವ, ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಘಟ್ಟಗಳಲ್ಲಿ ಅದು ಹಾದು ಬಂದಿದೆ. ಸಾಮಾಜಿಕ ಕಾದಂಬರಿಗಳು, ಜನಪ್ರಿಯ ಸಿನಿಮಾ ಕಾದಂಬರಿಗಳು, ಪೌರಾಣಿಕ ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳು ಹೀಗೆ ಕಾದಂಬರಿಗಳು ರಾಶಿ–ರಾಶಿಯಾಗಿ ಬಂದಿವೆ.

ಕಾದಂಬರಿ ಸಾಹಿತ್ಯದಲ್ಲಿ ಮಹಿಳೆಯರ ಪಾತ್ರ ಪ್ರಧಾನವಾಗಿದೆ. ಗಂಡು–ಹೆಣ್ಣಿನ ನಡುವಿನ ಸಂಬಂಧಗಳಿಗೆ ಹೆಚ್ಚಿನ ಆದ್ಯತೆ ದೊರೆತದ್ದರಿಂದ, ಒಂದು ಕುಟುಂಬದ ಒಳಗಿನ ತುಮುಲಗಳನ್ನು, ವ್ಯಕ್ತಿಯ ಅಂತರಂಗದ ತುಡಿತಗಳನ್ನು ಕಾದಂಬರಿಯಲ್ಲಿ ಹೇಳಲು ಸಾಧ್ಯವಾಗುವುದರಿಂದ ಹಾಗೂ ಭಾವನಾ ಪ್ರಧಾನವಾದ ಈ ಸಾಹಿತ್ಯ ಪ್ರಕಾರ ಹೆಣ್ಣು ಮಕ್ಕಳನ್ನು ಸಹಜವಾಗಿಯೇ ಆಕರ್ಷಿಸಿತು.

ಮಹಿಳಾ ಕಾದಂಬರಿ ಇತಿಹಾಸ ಆರಂಭವಾಗುವುದು ಶಾಂತಾಬಾಯಿ ನೀಲಗಾರ ಅವರಿಂದ. ಅವರು ೧೯೦೮ರಲ್ಲಿಯೇ ಒಂದು ಕೃತಿ ಬರೆದು ಮಹಿಳಾ ಕಾದಂಬರಿ ಸಾಹಿತ್ಯಕ್ಕೆ ನಾಂದಿ ಹಾಡಿದರು. ಅವರ 'ಸದ್ಗುಣಿ ಕೃಷ್ಣಾಬಾಯಿ'(೧೯೦೮) ಸ್ತ್ರೀ ಸಂವೇದನೆಯ ಕೃತಿಯಾಗಿದ್ದು, ಸ್ತ್ರೀ ಶಿಕ್ಷಣದ ಮಹತ್ವವನ್ನು ಎತ್ತಿ ಹೇಳಿದೆ. ಅನಂತರ ತಿರುಮಲಾಂಬರಿಂದ ಅದು ಮಹತ್ವದ ತಿರುವು ಪಡೆದುಕೊಂಡಿತು. ಹೀಗೆ ಮಹಿಳಾ ಸಾಹಿತ್ಯದಲ್ಲಿ ಕಾದಂಬರಿಯು ಹಂತಹಂತವಾಗಿ ವಿಕಾಸಗೊಂಡು ದಶಕಗಳಲ್ಲಿ ತನ್ನೆಲ್ಲ ಸಮೃದ್ಧತೆಯೊಂದಿಗೆ ಪುಷ್ಟಿಗೊಂಡು ಬೆಳೆಯುತ್ತಿರುವುದನ್ನು ಕಾಣುತ್ತೇವೆ. ಸಂಖ್ಯಾದೃಷ್ಟಿಯಿಂದಲೂ, ಸತ್ವಗುಣದಿಂದಲೂ ಅಪೂರ್ವವೂ ಅಪರೂಪವೂ ಆದ ಕಾದಂಬರಿಗಳು ಆಯಾ ಕಾಲಘಟ್ಟದಲ್ಲಿ ಮಹಿಳೆಯರಿಂದ ರಚಿತವಾಗಿವೆ. ಈ ಹಿನ್ನೆಲೆಯಲ್ಲಿ ನೇಮಿಚಂದ್ರ ಯಾದ್ ವಶೇಮ್ ಕಾದಂಬರಿಯನ್ನು ನೋಡಬಹುದು.

**ಕಾದಂಬರಿಯ ಪರಿಚಯ**

ನೇಮಿಚಂದ್ರ ಅವರ ಕಾದಂಬರಿ ಯಾದ್ ವಶೇಮ್ ೨೦೦೭ರಲ್ಲಿ ಪ್ರಕಟವಾಯಿತು. ಇದು 'ಕರ್ನಾಟಕ ಸಾಹಿತ್ಯ ಅಕಾಡೆಮಿ' ೨೦೦೭ರ ಗೌರವ ಪ್ರಶಸ್ತಿ ಮತ್ತು 'ಶ್ರೀಮತಿ ಗಂಗಮ್ಮ ಸೋಮಪ್ಪ ಬೊಮ್ಮಾಯಿ' ಪ್ರತಿಷ್ಠಾನದ ೨೦೦೯ರ 'ಅಕ್ಕ' ಪುರಸ್ಕಾರವನ್ನು ಪಡೆದುಕೊಂಡ ಕೃತಿಯಾಗಿದೆ. ಇದು ಯಹೂದಿ ಧರ್ಮ, ಚರಿತ್ರೆ, ಜೀವನ, ಎರಡು ಮಹಾಯುದ್ಧಗಳು, ಜರ್ಮನಿಯ ಇತಿಹಾಸ, ರಾಜಕೀಯ, ಹಿಟ್ಲರನ ಕ್ರೌರ್ಯ, ಪ್ಯಾಲೆಸ್ಟನ್ ನಡುವಿನ ಘರ್ಷಣೆ – ಹೀಗೆ ಹತ್ತು ಹಲವು ಮುಖಗಳನ್ನು ಆಧರಿಸಿ ಮೂಡಿಸಿದ ಐತಿಹಾಸಿಕ ಮಹತ್ವದ ಸಂಕೀರ್ಣ ಕಾದಂಬರಿಯಾಗಿದೆ.

ಹಿಟ್ಲರನ ನೆಲದಿಂದ ಗಾಂಧಿಯ ನೆಲೆಗೆ ಬಂದ ಪುಟ್ಟ ಬಾಲಕಿಯೊಬ್ಬಳು ಈ ಕೃತಿಯ ಕೇಂದ್ರಬಿಂದುವಾಗಿ ಕಂಡುಬರುತ್ತಾಳೆ. ಹ್ಯಾನಾ ಎಂಬ ಇಸ್ರೇಲಿನ ಬಾಲೆ ತಂದೆಯೊಂದಿಗೆ ಬೆಂಗಳೂರಿಗೆ ಬಂದು ನೆಲೆಸಿದ ಹಿನ್ನೆಲೆಯನ್ನು ಶೋಧಿಸುತ್ತಾ ಹೊರಟ ಲೇಖಕಿಗೆ ಲಕ್ಷ ಲಕ್ಷ ಸಂಖ್ಯೆಯಲ್ಲಿ ಯಹೂದಿಯರು ಹತರಾದ ಕರಾಳ ಇತಿಹಾಸದ ದರ್ಶನವಾಗುತ್ತದೆ. ತಂದೆಯನ್ನು ಕಳೆದುಕೊಂಡು ಗುರುತು ಪರಿಚಯವಿಲ್ಲದ ಬೆಂಗಳೂರಿನಲ್ಲಿ. ವಿವೇಕನ ತಾಯಿಯ ಆಸರೆಯಲ್ಲಿ ಅನಿತಳಾಗಿ, ತುಂಬು ಜೀವನವನ್ನು ಬದುಕಿ ಬಾಳಿದ ವಿವರಗಳೊಂದಿಗೆ, ಇತಿಹಾಸದ ಗರ್ಭದಲ್ಲಿ ಕಳೆದುಹೋದ ತನ್ನವರ ದನಿ ಹಿಡಿದು ಮತ್ತೆ ಇಸ್ರೇಲ್‌ಗೆ ತೆರಳಿ ಗತವನ್ನು, ಹಿಟ್ಲರನ ಕ್ರೌರ್ಯವನ್ನು ನೆನೆದು ಮರುಗುವ ಕ್ರೂರ ವಾಸ್ತವದ ಕಥೆಯನ್ನು ಕಾದಂಬರಿಯಲ್ಲಿ ಹೇಳಲಾಗಿದೆ.

ಈ ಕಾದಂಬರಿಯು ಅರ್ಪಣೆಯ ವಿಶೇಷವಾಗಿದೆ. ಬಯಲುಸೀಮೆಯ ಹಳ್ಳಿಗಾಡಿನ ಅನಕ್ಷರಸ್ಥ ಹೆಣ್ಣುಮಕ್ಕಳ ಅನುಭವಗಳನ್ನು, ದಂತಕತೆಗಳನ್ನು ಹಂಚಿಕೊಂಡ, ಯಾರನ್ನು ಕಂಡರೂ ತಟ್ಟನೆ ಮರುಗುವ 'ಗುಂಡಮ್ಮ'ನಂತಹ ವಿಶಾಲ ಮನಸ್ಸಿನ ತಮ್ಮ ತಾಯಿಯಾದ ಹರಿಯಬ್ಬೆ ತಿಮ್ಮಕ್ಕ ಅವರಿಗೆ ನೇಮಿಚಂದ್ರ ಅವರು ಪ್ರೀತಿಯಿಂದ ಅರ್ಪಣೆ ಮಾಡಿದ್ದಾರೆ.

**ಕಾದಂಬರಿಯ ಹೆಸರಿನ ಹಿನ್ನೆಲೆ**

'ಯಾದ್ ವಶೇಮ್' ಎಂಬುದು ನಾಜಿಗಳಿಂದ ಹತರಾದ ನೂರು ಸಾವಿರ ಸಾವಿನ ನೆನಪನ್ನು ಹಿಡಿದಿಟ್ಟು ಸ್ಮಾರಕ ಸ್ಥಳವಾಗಿದೆ. ಈ ಸ್ಥಳವು ಜೆರುಸಲೇಂನಲ್ಲಿದೆ. ಇತಿಹಾಸದ ತಿರುವಿನಲ್ಲಿ ಎದುರಾಗುವ ವರ್ತಮಾನದ ವಾಸ್ತವಕ್ಕೆ ಉತ್ತರ ಹುಡುಕುತ್ತಾ ನಡೆಯುವುದನ್ನು ಕಾದಂಬರಿಯುದ್ದಕ್ಕೂ ಕಾಣಬಹುದು. ಹಿಟ್ಲರನ ಕ್ರೌರ್ಯವನ್ನೂ ಗಾಂಧಿಯ ಮಾನವೀಯ ಮಿಡಿತವನ್ನೂ ಸಮಕಾಲೀನವಾಗಿ ಕಟ್ಟಿಕೊಡಬೇಕೆಂಬ ಆಸೆಯಿಂದ ಲೇಖಕಿ ಪಟ್ಟ ಶ್ರಮ ಕಾದಂಬರಿ ಉದ್ದಕ್ಕೂ ಗಮನಸೆಳೆಯುತ್ತದೆ. ಭಾರತದಲ್ಲಿರುವ ಅನೇಕ ಯಹೂದಿಗಳ ವಿಳಾಸ ಪತ್ತೆಹಚ್ಚಿ, ದೇಶದ ಉದ್ದಗಲಕ್ಕೂ ಓಡಾಡಿ, ಅವರ ಸಂಸ್ಕೃತಿ ಆಚಾರ–ವಿಚಾರಗಳನ್ನು ಅಧ್ಯಯನಗಳಿಂದ ತಿಳಿದು ನೇಮಿಚಂದ್ರ ಅವರು ತೋರಿದ ಕುತೂಹಲ ಆಸಕ್ತಿ, ಕೃತಿರೂಪ ಪಡೆದು ಸಾರ್ಥಕವಾಗಿದೆ.

ನೇಮಿಚಂದ್ರರವರ ಕಾದಂಬರಿಯನ್ನು ಪರಿಶೀಲಿಸುವಾಗ ಹಲವು ಸಂಗತಿಗಳು ಕಂಡುಬರುತ್ತವೆ. ಅದು ವಿಪುಲ ಬರವಣಿಗೆಯಿಂದ ಬೆರಗುಹುಟ್ಟಿಸಿದಂತೆ, ವಿಪುಲ ವಿಶ್ಲೇಷಣೆಗೆ ಒಳಗಾಗಿರುವುದನ್ನು ಕಾಣಬಹುದು. ಕೌಟುಂಬಿಕ ಸಾಮಾಜಿಕ ವಸ್ತುಗಳು, ಐತಿಹಾಸಿಕ ಚಾರಿತ್ರಿಕ ಸಂಗತಿಗಳು, ಸ್ತ್ರೀಪರ ಚಿಂತನೆಗಳು, ವೈಜ್ಞಾನಿಕ ಆವಿಷ್ಕಾರಗಳು, ಯುದ್ಧದ ಪರಿಣಾಮದ ಚಿಂತನೆಗಳು, ಮನುಷ್ಯ ವ್ಯಕ್ತಿತ್ವದ ಬಹುಮುಖಗಳು, ಇತಿಹಾಸದ ಕರಾಳ ಛಾಯೆಗಳು, ವಿವಿಧ ವರ್ಗ ಸಂವೇದನೆಗಳು, ವಿವಿಧ ಧರ್ಮಗಳ ಪರಿಚಯ, ವಿವಿಧ ಸಂಸ್ಕೃತಿಗಳ ಅನಾವರಣ, ವಿವಿಧ ದೇಶಗಳ ಪರಿಚಯ – ಹೀಗೆ ಲೋಕದ ವಿವಿಧ ಸತ್ಯಗಳು ಕಾದಂಬರಿಯ ವಸ್ತುಸ್ವರೂಪದಲ್ಲಿ ಹಂಚಿಕೆಯಾಗಿವೆ.

ಇದರೊಂದಿಗೆ ಮಾನವೀಯ ಭಾವವೂ ಸ್ತ್ರೀಪರತೆಯೂ ದನಿಗೂಡಿವೆ. ವಸ್ತುಸ್ವರೂಪದ ಹಂಚಿಕೆಗಳಿಗೆ ಹೊಂದಿಕೊಂಡಂತೆ, ವಿಭಿನ್ನ ಆಶಯಗಳು, ಪ್ರತಿಪಾದನೆಗಳು ಮೈದಾಳಿವೆ. ಈ ರೀತಿ ಮೂಡಿಬಂದ ವೈವಿಧ್ಯಮಯ ಚಿತ್ರಣ ಇಡೀ ಸಮಾಜದ ಸಾಂಸ್ಕೃತಿಕ ಸ್ಥಿತಿಯನ್ನು ತೆರೆದಿಡುವುದರ ಜೊತೆಗೆ ಸ್ತ್ರೀ ಸಮುದಾಯದ ಅಂತಃಸಾಮರ್ಥ್ಯದ ಶೋಧನೆಗೆ ಗಟ್ಟಿನೆಲೆಯನ್ನೆ ಒದಗಿಸಿದೆ.

ಈ ಕಾದಂಬರಿಯು "ಸುಧಾ"ದಲ್ಲಿ ೨೦೦೪ರಲ್ಲಿ 'ನೂರು ಸಾವಿರ ಸಾವಿನ ನೆನಪು' ಹೆಸರಿನಲ್ಲಿ ಪ್ರಕಟವಾಗಿತ್ತು. ಈ ಕಾದಂಬರಿಗೆ 'ಯಾದ್ ವಶೇಮ್' ಎಂಬ ಹೆಸರನ್ನು ಎನ್.ಗಾಯತ್ರಿಯವರು ಸೂಚಿಸಿದರು. ಮುಂದೆ ಪುಸ್ತಕ ರೂಪದಲ್ಲಿ ನವಕರ್ನಾಟಕ ಪಬ್ಲಿಕೇಷನ್ಸ್‌ನಿಂದ 'ಯಾದ್ ವಶೇಮ್' ಎಂಬ ಹೆಸರಿನಿಂದ ಪ್ರಕಟವಾಯಿತು.

**ನೇಮಿಚಂದ್ರ ಅವರ ಕಾದಂಬರಿಯ ಶೈಲಿ**

ನೇಮಿಚಂದ್ರ ಅವರ ಕಾದಂಬರಿಯಲ್ಲಿ ವಿಚಾರಗಳ ಪ್ರತಿಪಾದನೆ ಅಭಿವ್ಯಕ್ತಿಯಲ್ಲಿ ಬೇರೆಬೇರೆಯಾಗಿಯೇ ಉಳಿಯದೆ ಹಾಸುಹೊಕ್ಕಾಗಿ ಇರುವುದು ಕಂಡುಬರುತ್ತದೆ. ಈ ಕಾದಂಬರಿಯಲ್ಲಿ ಒಂದು ಬಗೆಯ ಸಾಂಸ್ಕೃತಿಕ ಜಾಗತೀಕರಣ ಮತ್ತು ಮಾನವೀಯ ಜಾಗತೀಕರಣದ ಮಾದರಿಯನ್ನು ನಾವು ಕಾಣಬಹುದು. ವಿಚಾರಭಾವನೆ ಇವೆರಡೂ ಸಮ್ಮಿಳಿತವಾಗಿ ಒಂದರಿಂದೊಂದನ್ನು ಬೇರ್ಪಡಿಸಲಾಗದಂತಹ ಅಭಿವ್ಯಕ್ತಿಯಾಗಿದ್ದು, ಇದು ಕುವೆಂಪು ಅವರ ವಿಶ್ವಮಾನವ ಪರಿಕಲ್ಪನೆಯ ಆದರ್ಶವನ್ನು ದ್ಯೋತಿಸುತ್ತದೆ. ಅನುಭವಗಳು ಸೀಮಿತವಾಗಿದ್ದರೂ ಆ ಸೀಮಿತ ಅನುಭವಗಳನ್ನೇ ಸಂಕೀರ್ಣವಾಗಿ ಅಭಿವ್ಯಕ್ತಗೊಳಿಸುವುದು ಇವರ ಕೃತಿಯಲ್ಲಿ ಕಂಡುಬರುವ ಲಕ್ಷಣವಾಗಿದೆ.

ಇವರ ಕಾದಂಬರಿಯಲ್ಲಿ ಸಮಾಜ ಸುಧಾರಣೆಯ ಆಲೋಚನೆಗಳ ಅಭಿವ್ಯಕ್ತಿಯಿದೆ. ಸಂತೃಪ್ತ ಗೃಹಿಣಿಯ ಚಿತ್ರಣವಿದೆ. ಪ್ರಮುಖ ಹಂತದಲ್ಲಿ ಮೇಲ್ನೋಟಕ್ಕೆ ಸುಧಾರಣಾವಾದಿ ಚಿಂತನೆಗಳಿಂದ ಕೂಡಿದ ಮಹಿಳಾ ದೃಷ್ಟಿಕೋನವಿರುವುದನ್ನು ಕಾಣಬಹುದು. ಸ್ತ್ರೀ ಸಮಸ್ಯೆಗಳನ್ನು ಕುರಿತ ಹೊಸ ಚಿಂತನೆಗಳಿಗೆ ಅವಕಾಶವಿದೆ. ಹೆಣ್ಣಿನ ಮಾನಸಿಕ ತುಮುಲಗಳನ್ನು, ಪುರುಷ ಕೇಂದ್ರಿತ ಸಮಾಜದ ಧೋರಣೆಗಳನ್ನು ಸೂಕ್ಷ್ಮವಾಗಿ ದಾಖಲಿಸಿರುವುದನ್ನು ಕಾಣಬಹುದು.

ನೇಮಿಚಂದ್ರ ಅವರು ಹೆಚ್ಚು ಆಶಾವಾದಿಯಾಗಿದ್ದಾರೆ. ಇವರ ಸರಳ, ಸುಂದರ, ಆಕರ್ಷಕ, ಸುಲಭವಾಗಿ ಓದಿಸಿಕೊಂಡು ಹೋಗುವ ಗುಣ – ಇವೆಲ್ಲ ಬೃಹತ್ ಪ್ರಮಾಣದ ಭಾವುಕ ಓದುಗ ವಲಯವನ್ನು ಸೃಷ್ಟಿಸಿದೆ ಎಂದೇ ಹೇಳಬಹುದು.

ನೇಮಿಚಂದ್ರ ಅವರ ಕಾದಂಬರಿ ಪ್ರವಾಸದ ಹಿನ್ನೆಲೆಯಲ್ಲಿ ರಚಿತವಾಗಿರುವುದನ್ನು ಗುರುತಿಸಲು ಸಾಧ್ಯವಿದೆ. ಏಕೆಂದರೆ ಕಾದಂಬರಿಯ ಪೂರ್ವಾರ್ಧದಲ್ಲಿ ಮುಗ್ಧ ಹೆಣ್ಣುಮಕ್ಕಳ ನೈಜ ಜೀವನಾನುಭವವನ್ನು ತುಂಬಿಕೊಡುವ ಈ ಕಾದಂಬರಿಯು, ಉತ್ತರಾರ್ಧದ ಭಾಗದಲ್ಲಿ ತಮ್ಮ ಕುಟುಂಬದವರ ಹುಡುಕಾಟದ ಭಾಗವಾಗಿ ಇತಿಹಾಸದ ಪುನಃ ಸೃಷ್ಟಿಯ ಅಂಶವಾಗಿದೆ. ಜಗತ್ತು ಸುತ್ತುವುದರ ಮೂಲಕ ಪಾತ್ರವೊಂದು ತನ್ನ ಅಸ್ತಿತ್ವದ ವಂಶದ ಬೇರುಗಳನ್ನು

ಗುರುತಿಸಿ ನೆಲೆಯನ್ನು ಕಂಡುಕೊಳ್ಳುವುದಾಗಿದೆ. ಹಾಗೆಯೇ ಜೀವನ ಸಾರ್ಥಕಪಡಿಸಿಕೊಂಡಂತಹ ಅನುಭವವನ್ನು ಕಾದಂಬರಿಯಲ್ಲಿ ಕಾಣಬಹುದು.

ಅಲ್ಲದೆ ನೇಮಿಚಂದ್ರ ಅವರ ಬದುಕು ಮತ್ತು ಪಯಣ ಜೊತೆಜೊತೆಯಾಗಿ ಸಾಗಿದೆ. ಇವರ ಪ್ರವಾಸಗಳು ಒಂದು ನಿರ್ದಿಷ್ಟ ಉದ್ದೇಶದಿಂದ ಆರಂಭವಾದರೂ, ಗುರಿ ಮುಟ್ಟುವುದೊಂದೇ ಇವರಿಗೆ ಮುಖ್ಯವಾಗುವುದಿಲ್ಲ. ಆ ಹಾದಿಯ ಪಯಣ ಮುಖ್ಯವಾಗುತ್ತದೆ. ಇಲ್ಲಿ ಕ್ಷಣ ನಿಂತು, ಅಲ್ಲಿ ಕ್ಷಣ ಕುಳಿತು, ಹಾದಿಬದಿಯ ಹೂವು, ಹಸಿರು, ಬಿಸಿಲು, ನೆರಳುಗಳನ್ನು ಆಸ್ವಾದಿಸುವುದು ಇವರಿಗೆ ಮುಖ್ಯವಾಗುತ್ತದೆ. ಅಲ್ಪ ಹಣದಲ್ಲಿ ಅಗಾಧವಾಗಿ ಯೋಜಿಸಿ ಹೊರಟ ಈ ಕನಸಿನ ಪಯಣಗಳಿಂದ ಅವರು ಕಂಡುಕೊಂಡದ್ದು ಎಂದರೆ, "ಕನಸು ಕಂಡರೆ ಸಾಕು ಹಾರಲಿಕ್ಕೆ ರೆಕ್ಕೆಗಳು ಮೊಳೆಯುತ್ತವೆ"[೪] ಎಂಬುವುದು.

**ಹಿನ್ನೆಲೆ–ಸ್ಫೂರ್ತಿ**

ನೇಮಿಚಂದ್ರ ಅವರು ೧೯೯೫ನೇ ಇಸವಿ: ಅದೊಂದು ಉರಿಬಿಸಿಲಿನ ಮಧ್ಯಾಹ್ನದ ಸಮಯದಲ್ಲಿ ಚಾಮರಾಜಪೇಟೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮ ಮುಗಿಸಿಕೊಂಡು ಆಟೋದಲ್ಲಿ ಹಿಂತಿರುಗುತ್ತಿದ್ದರು. ಆ ಸಂದರ್ಭದಲ್ಲಿ ಮೈಸೂರು ರಸ್ತೆ ದಾಟಿ, ಗೋರಿಪಾಳ್ಯ ಹೊಕ್ಕಂತೆ, ರಸ್ತೆಯ ಎರಡೂ ಬದಿಗೆ ಗೋರಿಗಳಿದ್ದವು. ಒಂದು ಬದಿಗೆ ಹಿಂದುಗಳದು. ಇನ್ನೊಂದು ಬದಿಗೆ ಮುಸ್ಲಿಮರದು. ತಟ್ಟನೆ ಬಲಗಡೆಯ ಸ್ಮಶಾನದ ಏರುಗೋಡೆಯ ಮೂಲೆಗೆ ಕೆತ್ತಿದ ಸಣ್ಣ ಅಕ್ಷರಗಳು ನೇಮಿಚಂದ್ರ ಅವರ ಕಣ್ಣಿಗೆ ಬಿತ್ತು. 'ಜ್ಯೂಯಿಷ್ ಬರಿಯಲ್ ಗ್ರೌಂಡ್' ಯಹೂದಿಗಳ ಸ್ಮಶಾನ, ಅದರ ಕೆಳಗೆ ಹೀಬ್ರೂ ಭಾಷೆಯ ಲಿಪಿ ಇತ್ತು. ಇದನ್ನು ಗಮನಿಸಿದ ನೇಮಿಚಂದ್ರ ಅವರು ಆಟೋವನ್ನು ಅಲ್ಲಿಯೇ ನಿಲ್ಲಿಸಿ ಕಾಂಪೌಂಡಿನ ಒಳಹೋಗಿ ಅಲ್ಲಿರುವ ಕೆಲವು ಗೋರಿಗಳನ್ನು ನೋಡುತ್ತಾರೆ. ಅದರಲ್ಲಿ ಹುಲ್ಲ ನೆಲದಲ್ಲಿ ಹೂತು ಹೋದ, ಹೀಬ್ರೂ ಲಿಪಿಯ ಕೆತ್ತನೆಯಿದ್ದ ಗೋರಿಗಳು, ಕೆಲವು ನೂರು ವರ್ಷಗಳಷ್ಟು ಹಳೆಯವು, ಕೆಲವು ನಲವತ್ತು ವರ್ಷಗಳಷ್ಟು ಹೊಸದಾದ ಗೋರಿಗಳಾಗಿದ್ದವು. ಅಲ್ಲಿಯವರೆವಿಗೂ ಬೆಂಗಳೂರಿನಲ್ಲಿ ಯಹೂದಿಗಳಿದ್ದಾರೆ ಎಂದು ಇವರಿಗೆ ತಿಳಿದಿರುವುದಿಲ್ಲ.

ಆಕಸ್ಮಿಕವಾಗಿ ಮೈಸೂರು ರಸ್ತೆಯ ಮೂಲೆಯೊಂದರಲ್ಲಿ ಇದ್ದಂತಹ ಶತಮಾನದಷ್ಟು ಹಳೆಯದಾದ ಯಹೂದಿಗಳ ಸ್ಮಶಾನವನ್ನು ಗುರುತಿಸಿದಾಗ, ಅಲ್ಲಿ ಆ ಗೋರಿಗಳ ನಡುವೆ ನಿಂತಂತೆ ನೇಮಿಚಂದ್ರ ಅವರ ಮೊಟ್ಟಮೊದಲ ಕಾದಂಬರಿ ಅವರೊಳಗೆ ಜೀವ ತಾಳುತ್ತದೆ. ಇದರಿಂದ ಸ್ಫೂರ್ತಿಗೊಂಡು ಹಿಟ್ಲರನ ನೆಲದಿಂದ ಗಾಂಧಿಯ ನಾಡಿಗೆ ಬಂದ ಪುಟ್ಟ ಯಹೂದಿ ಬಲೆಯ ಕತೆಯನ್ನು ಕಲ್ಪನೆಯಲ್ಲಿ ನೇಯ್ದುಕೊಂಡು ಇತಿಹಾಸ ಪುಟಗಳಿಂದ

ಆಧಾರವನ್ನು ಪಡೆಯುತ್ತಾ ಇತಿಹಾಸ ಮತ್ತು ಪ್ರವಾಸವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಕಾದಂಬರಿಯನ್ನು ರಚಿಸುತ್ತಾ ಹೋಗುತ್ತಾರೆ.

ಕಾಕತಾಳೀಯವೆಂಬಂತೆ, ಆ ಸಮಯದಲ್ಲಿ ಅವರು ಸರ್ ಸಿ.ವಿ.ರಾಮನ್ ಅವರ ಜೀವನ ಚರಿತ್ರೆಯನ್ನು ಓದುತ್ತಿದ್ದರು. ತಮ್ಮ ಪುಟ್ಟ ಮಗಳಿಗೆ ವಿಜ್ಞಾನಿಗಳ ಕತೆಯನ್ನು ಓದಿ ಹೇಳುವ ಪರಿಪಾಠದಲ್ಲಿ, ಅವರು ಉದ್ಯೋಗ ಮಾಡುತ್ತಿದ್ದ ಕಾರ್ಖಾನೆಯ ಗ್ರಂಥಾಲಯದಲ್ಲೇ ಇದ್ದ ಸಿ.ವಿ.ರಾಮನ್ ಕುರಿತ ಪುಸ್ತಕವನ್ನು ತೆಗೆದುಕೊಂಡು ಬಂದಿದ್ದರು.

೧೯೩೩, ಜರ್ಮನಿಯಲ್ಲಿ ಹಿಟ್ಲರ್ ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ ಇಲ್ಲಿ ಸಿ.ವಿ.ರಾಮನ್ ಬೆಂಗಳೂರಿನ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್'ಗೆ ನಿರ್ದೇಶಕರಾಗಿದ್ದರು. 'ನಾಜಿ ಭಯದಲ್ಲಿ ಜರ್ಮನಿಯಿಂದ ಹೊರಗೋಡುತ್ತಿರುವ ವಿಜ್ಞಾನಿಗಳನ್ನು ಬೆಂಗಳೂರಿಗೆ ಆಹ್ವಾನಿಸಿ ಕರೆಯಬೇಕು. ಭಾರತದಲ್ಲಿ ವಿಜ್ಞಾನ ಕ್ರಾಂತಿಯಾಗಬೇಕೆಂದು' ಬಯಸಿದ ಸಿ.ವಿ.ರಾಮನ್, ಮ್ಯಾಕ್ಸ್ ಬಾರ್ನ್ ಅವರನ್ನೂ ಸೇರಿಸಿದಂತೆ ಕೆಲವು ಯಹೂದಿ ವಿಜ್ಞಾನಿಗಳನ್ನು ಕರೆಸಿದ್ದ ವಿಷಯ ನೇಮಿಚಂದ್ರ ಅವರಿಗೆ ತಿಳಿಯುತ್ತದೆ.

ನೇಮಿಚಂದ್ರ ಅವರ ಬಾಲ್ಯದಲ್ಲಿ ಉಂಟಾಗಿದ್ದ ಅನುಭವಗಳನ್ನು ತನ್ನ ಸುತ್ತಮುತ್ತಲಿನ ಸಮಾಜದಲ್ಲಿ ನಡೆಯುತ್ತಿದ್ದ ಘಟನೆಗಳನ್ನು ತನ್ನ ಅಂತರಂಗದಲ್ಲಿ ಭಟ್ಟಿ ಇಳಿಸಿಕೊಂಡಿದ್ದರು. ಕಾಲವನ್ನು ಮುಂದೆ ಹಾಕುತ್ತಾ ಜವಾಬ್ದಾರಿಯುತ ಉದ್ಯೋಗ ದೊರೆತು, ಸಮಾಜದ ಅವಿಭಾಜ್ಯ ಅಂಗವಾದರು. ಸಮಾಜಕ್ಕೆ ಸ್ಪಂದಿಸುತ್ತಾ ಅನಿಸಿಕೆಯನ್ನು ಬರಹದ ಮೂಲಕ ವ್ಯಕ್ತಪಡಿಸಿದರು. ತಮ್ಮ ಅಂತರಂಗದಲ್ಲಿ ಹುದುಗಿದ್ದ ಭಾವನೆಗಳಿಗೆ ಬುದ್ಧಿಪೂರ್ವಕವಾಗಿ ಹಾಗೂ ಅನುಭವ ಹಿನ್ನೆಲೆಯಲ್ಲಿ ಸಾಕ್ಷಿಭೂತವಾದ ಕೃತಿರಚನೆಗೆ ತೊಡಗಿದರು.

ನೇಮಿಚಂದ್ರ ಅವರ ಕಾದಂಬರಿಯ ಪೂರ್ವಾರ್ಧ ಅಪ್ಪಟ ಈ ನೆಲದ ಅಮ್ಮನ ಕತೆಗಳಿಂದ ತುಂಬಿಕೊಂಡಿದೆ ಎನ್ನಬಹುದು. ಏಕೆಂದರೆ ಇವರ ತಾಯಿ ತಿಮ್ಮಕ್ಕರವರ ಜೊತೆಗೆ ಇದ್ದಂತಹ ಒಡನಾಟ ಮತ್ತು ಅಂತರಂಗದಲ್ಲಿ ಇಲ್ಲಿರುವ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನವು ಈ ಕಾದಂಬರಿಯ ಪಯಣದಿಂದ ಕೃತಿರೂಪದಲ್ಲಿ ರೂಪುಗೊಳ್ಳಲು ಸಹಾಯಕವಾಯಿತು. ಬಾಲ್ಯದಲ್ಲಿ ಅಮ್ಮ ಹೇಳಿದ ಅನುಭವಗಳೆಲ್ಲವು ಹರಿದು ಬಂದಿದ್ದವು. ಶತಮಾನಗಳ ಹೆಣ್ಣ ಕತೆಗಳು ಕೊಂಡಿಯಾದವು. ಇವರ ತಾಯಿಯಂತೆಯೇ ಇತರ ಬಯಲು ಸೀಮೆಯ ಹೆಣ್ಣುಮಕ್ಕಳ ದಾಖಲಾಗದ ಅದೆಷ್ಟೋ ಕತೆಗಳು, ಮುಗ್ಧ ನಂಬಿಕೆಗಳು, ಜೀವನ ಪ್ರೀತಿಯ ಕತೆಗಳು – ಈ ಕಾದಂಬರಿಯ ಪೂರ್ವಾರ್ಧದ ಭಾಗವಾದವು.

ನೇಮಿಚಂದ್ರ ಅವರ ತಾಯಿ ಹಿರಿಯೂರಿನ ಹರಿಯಬ್ಬೆ ಎಂಬ ಹಳ್ಳಿಯಿಂದ ಬಂದವರು. 'ಓದಿದ ಗಂಡ' ಸಿಕ್ಕಿದ ಕಾರಣಕ್ಕೆ ಪಟ್ಟಣ ಸೇರಿದರೂ ಅವರ ಅಮ್ಮ ಈ ನೆಲದ ದಂತಕಥೆಗಳನ್ನು ಸೆರಗಲ್ಲಿ ಕಟ್ಟಿಕೊಂಡೇ ಬಂದವರು. ನೇಮಿಚಂದ್ರ ಅವರ ಮೇಲೆ ಇಷ್ಟೊಂದು ಪ್ರಭಾವ ಬೀರಲು ಕಾರಣ ಅವರ ಬಾಲ್ಯದುದ್ದಕ್ಕೂ ಕತೆಗಳನ್ನು ಕೇಳಿ ಬೆಳೆದದ್ದು. ಆ ಕತೆಗಳೇನು ಅಂಬರದ ಅಪ್ಸರೆಯದ್ದಲ್ಲ ; ಹಳ್ಳಿಗಾಡಿನ ದುಡಿವ ಹೆಣ್ಣುಮಕ್ಕಳ ಬದುಕಿನ ಕತೆಗಳು. ತಮ್ಮ ನೋವು, ನಲಿವು, ನಂಬುಗೆ, ಪ್ರೀತಿ, ಸಿಟ್ಟು ಸೆಡವು, ಶ್ರಮ ಜೀವನವನ್ನು ಹಿಡಿದಿಟ್ಟ ಜನಪದ ಕತೆಗಳು. ಶಿಷ್ಟ ದೇವರುಗಳ ಕ್ಲಿಷ್ಟ ಕತೆಗಳನ್ನೂ ಅವರು ಕೇಳಿರಲಿಲ್ಲ. ಕಾಡು ಹಳ್ಳಿಯ ಅಪ್ಪಟ ಮಾನವೀಯ ಗುಡ್ಡಗಾಡು ದೇವರ ಕತೆಗಳನ್ನು ಕೇಳಿಸಿಕೊಂಡು ಬೆಳೆದಿದ್ದರು. ಅಂತಹ ಒಂದು ಕತೆ ಅವರ ಕಾದಂಬರಿಯಲ್ಲಿ ಸೇರಿತು.

"ಅದೇ ಕಾರ್ತಿಕ ಮಾಸದಲ್ಲಿ ಅಮ್ಮ ಸುಮೀನ ಜೊತೆ ಮಾಡಿಕೊಂಡು ತವರೂರಿಗೆ ಹೋಗಿ ಬಂದಳು. ಒಂದು ಸಂಜೆ, ವಿವೇಕ ಮನೆಯಲ್ಲಿ ಇಲ್ಲದ ಹೊತ್ತು, ಅಮ್ಮ ಬಳಿಗೆ ಬಂದು ಸಣ್ಣ ಪೊಟ್ಟಣ ಬಿಡಿಸಿದಳು. ಅದರಿಂದ 'ಈ ಭೂತಿ' ತೆಗೆದು ನನ್ನ ಹಣೆಗೆ ಇಟ್ಟಳು. 'ಅನಿತೂ' 'ಕಾಟಿಂಲಿಂಗ'ದ ಗುಡಿಗೋಗಿ ಗಣಿ ಊದ್ಸಿ, ಕಣಿ ಕೇಳಿದ್ನೆ, ಗಣಿ ಅದೇಷ್ಟ್ ಸರಾಗ್ವಾಗ್ ಊತ್ತು ಅಂತೀಯಾ, ನಿನಗ್ ಫಲ ಐತೆ. ಖಂಡಿತಾ ನಿನ್ ಒಟ್ಯಾಗೆ ಕೂಸ್ ಬೀಳ್ತದಾ..."[೫] ಭರವಸೆಯಿಂದ ಹೇಳಿದ್ಳು. ಅಮ್ಮನ ತವರೂರಿನ ಬಳಿಯಲ್ಲಿತ್ತು. ಕಾಟಿಂಲಿಂಗದ ಗುಡಿ.

"ಸ್ವಾಮಿ ಗುಡೀಕೆ ಓಗಿ ಪೂಜೆ ಮಾಡಿ ಬರಾ ಹೊತ್ಗೇ ಕತ್ಲಾಗಿತ್ತೆ. ಸುಮಿ ಹೊರಗಾದ್ಳು ಅಂತಾ ಹಳ್ಳಿಗೆ ಬಿಟ್ಟು ನಾನೊಬ್ಬಲೇ ಒಗಿದ್ನೆ. ಇಗಾ ತೀರ್ಪದ್ ಕಾಯಿ ಹೆಗಲ್ ಮ್ಯಾಲಿಟ್ಕಂಡ್ ಒಂಗೆ ಸೊರಬ್ನದ್ದಕ್ಕೆ ದಾಪ್‌ಗಾಲ್ ಹಾಕ್ ಬರ್ತಾ ಇದ್ದೆ. ಒಂಗೆ ಗಿಡದಾಗಿಂದ ಜೀಗುಟ್ಟೋ ಸದ್ದು. ಯಾಕೋ ಎದೆ ಒಡ್ಕಂಡಂಗಾಗಿ ಹಿಂದಕ್ ತಿರುಗ್ದೆ. 'ಯಾಕ್ ತಿರುಗ್ ನೋಡ್ತೀ ಗುಂಡಮ್ಮ, ಹೆದ್ರಿಕೆ ಆಯ್ತಾ? ನಾ ನಿನ್ ಜೊತೀ ಇದ್ದೀನಿ. ನಡೀ ನಡೀ... ಆ ಸ್ವಾಮಿ ಕಾಟಿಂಲಿಂಗಾನೇ ನುಡೀತು ನೋಡಾ."[೬]

"ಗುಡಿಯಾಗಿಂದ ಸ್ವಾಮಿ ನನ್ ಜತಿಯಾಗೇ ಬಂದ್ಯೆತೆ. ಮತ್ತೆ ಭಯ ಅಂತಾನೇ ಅನಿಸ್ಲಿಲ್ಲ. ಭರಭರ ಏರಿ ಮ್ಯಾಕೆ ನಡೆದು ಇದ್ದೂರಾಗೆ ಕೊಟ್ಟೀರೋ ನನ್ ಅಕ್ಕನ್ ಮನೀಗೆ ಬಂದು ತೀರ್ಥದ್ ಕಾಯಿ, ಈಭೂತಿ ದ್ಯಾವ್ರು ಮುಂದಿಟ್ಟು ಮನಿ ಕಂಡೆ, ಎಂಥಾ ನಿದ್ದೆ ಅಂತೀಯಾ..."[೭]

ಈ ಮೇಲಿನ ಪ್ಯಾರಾಗಳಲ್ಲಿ ಬರುವ ಮಾತುಗಳು ಯಾದ್ ವಶೇಮ್ ಕಾದಂಬರಿಯದು. ಇವು ನೇಮಿಚಂದ್ರ ಅವರ ತಾಯಿ ಬಳಿ ಬಾಲ್ಯದಲ್ಲಿ ಹಂಚಿಕೊಂಡಂತಹ

ಮಾತುಗಳವು. ಅದನ್ನು ಕೃತಿಯಲ್ಲಿ ಅವರದೇ ಆದ ಅನುಭವದ ಮೂಲಕ ಸೆರೆಹಿಡಿದಿರುವುದನ್ನು ಕಾಣಬಹುದು.

“ಬದುಕಿನ ಬವಣೆಯಲ್ಲಿ ಸೋಲದ ಕುಸಿಯದ ಈ ಹೆಣ್ಣು ಮಕ್ಕಳ ಇಂತಹ ದೇವರ ಕಲ್ಪನೆಯೇ ನನಗೆ ಅದ್ಭುತ ಅನಿಸಿತ್ತು. ಅಲ್ಲೆಲ್ಲೋ ಏಳು ಬೆಟ್ಟದ ಮೇಲೆ ಗರ್ಭಗುಡಿಯಲ್ಲಿ ಬಂಧಿಯಾದ ದೇವರಲ್ಲ, ತನ್ನೊಡನೆ ಮಧ್ಯರಾತ್ರಿಯ ಕತ್ತಲಲ್ಲಿ ಗುಡಿಯಿಂದ ಹೊರ ನಡೆದು ಜೊತೆಗೇ ಬಂದ ದೇವರು. ಈ ಹೆಣ್ಣು ಮಕ್ಕಳೊಡನೆಯೇ ದೇವರಿದ್ದ, ಅವರ ಮಾನವೀಯ ಭಾವದಲ್ಲಿ, ಹೃದಯದಲ್ಲಿ, ದೇವರು ಹೊರಗಿರಲಿಲ್ಲ”[೮]

ಹೀಗೆ ನೇಮಿಚಂದ್ರ ಅವರು ಗ್ರಾಮೀಣ ಭಾಗದ ಬಯಲುಸೀಮೆಯ ಹೆಣ್ಣು ಮಕ್ಕಳು ಜೀವನಾನುಭವ ಅರ್ಥೈಸಿದ್ದಾರೆ. ಈ ಕಾದಂಬರಿಯಲ್ಲಿ ಬರುವ ಕಾಟಂಲಿಂಗ ದೇವರು ನೇಮಿಚಂದ್ರ ಅವರ ತಾಯಿ ಪೂರ್ವಿಕರು ನಂಬಿ ಬಂದ ದೇವರಾಗಿತ್ತು. ಈ ದೇವರು ಕೋಡಿಹಳ್ಳಿಯ ಹೊರವಲಯದ ಕಾಡಿನಲ್ಲಿದೆ ಎಂದು ತಿಳಿದು ಸ್ವತಃ ನೇಮಿಚಂದ್ರ ಅವರು ನಮ್ಮ ಪೂರ್ವಿಕರು ನಂಬಿ ಬಂದ ಆ ದೇವರನ್ನು ಹುಡುಕಿ ‘ಮೂಲಮುಖಿ’ಯಾಗಿ ಹೊರಟರು.

“ಕಾಡಿನೊಳಗೆ ನಡೆದುಹೋಗುತ್ತಿದ್ದ ಹಾಗೆ ಸಣ್ಣ ಹೊಳೆ ಹರಿದಿತ್ತು. ದಾಟಿ ಕಾಡಿನೊಳಗೆ ಒಂದಿಷ್ಟು ಅಲೆದಂತೆ ಕಾಡಿನ ನಡುವಿನ ತುಸು ಕಾಲುಹಾದಿಯ ಸುಳಿವುಗಳಲ್ಲಿ ನಡದಾಗ ತಟ್ಟನೆ ಒಂದಿಷ್ಟು ಜಾಗದಲ್ಲಿ ಕಾಡು ತೆರವಾಗಿ, ನಿಬ್ಬೆರಗಾಗಿ ನಿಲ್ಲುತ್ತಾರೆ. ಅದು ಮನುಷ್ಯರು ಕಟ್ಟಿ ನಿಲ್ಲಿಸಿದ ಗುಡಿಗೋಪುರಗಳ ದೇಗುಲವಾಗಿರಲಿಲ್ಲ. ಭವ್ಯವಾಗಿ ಅಂಬರಕ್ಕೆ ರೆಂಬೆ ಕೊಂಬೆ ಚಾಚಿ ನಿಂತ ಬೃಹತ್ ವೃಕ್ಷದ ತಳದಲ್ಲಿ ಅಪ್ಪಟ ಬಯಲು ಆಲಯವಾಗಿತ್ತು. ಒರಟು ಕಲ್ಲುಗಳ ಜೋಡಣೆಯ ವೃತ್ತಾಕಾರದ ಅರೆಗೋಡೆಯ ಪ್ರಾಕಾರದ ಒಳಗೆ ಧೂಪದ ಹೊಗೆಯಾಡುತ್ತಿತ್ತು. ಅಲ್ಲಿ ಸೊಪ್ಪು ಸದೆಯಲ್ಲಿ ಆವೃತ್ತವಾದ ದೊಡ್ಡದೊಂದು ಗುಂಡುಕಲ್ಲು ಇತ್ತು. ಇವು ಶಿವಲಿಂಗಗಳಾಗಿ ನೇಮಿಚಂದ್ರರವರಿಗೆ ಕಾಣಲಿಲ್ಲ. ಆದರೆ ಅಡವಿಜನರ ನೆಲಮೂಲ ದೇವರಾಗಿ ಕಂಡಿದ್ದವು. ಇಲ್ಲಿನ ಗುಡ್ಡಗಾಡು ಜನರು, ಒಂದಷ್ಟು ನುಣ್ಣನೆಯ ಗುಂಡುಕಲ್ಲುಗಳನ್ನು ಒಟ್ಟೈಸಿ ಗುಡ್ಡೆ ಹಾಕಿ, ಇಲ್ಲಿ ದೇವರನ್ನು ಕಂಡಂತ್ತಿತ್ತು. ಈ ತಾಣ ಇವರಿಗೆ ಬಲು ಪುರಾತನವಾಗಿ ಪ್ರಾಕೃತವಾಗಿ ಕಂಡುಬಂದಿತು. ಚರಿತ್ರೆಯ ಅದ್ಯಾವುದೋ ಆ ತಿರುವಿನಲ್ಲಿ ಅಮ್ಮ ಓದಿದವರ ಕೈಹಿಡಿದಿದ್ದಳು. ಅಪ್ಪ ವಾರಾನ್ನ ಉಂಡು ಎಂ.ಎ. ಮಾಡಿದ್ದರು. ನಾನು ಹುಟ್ಟುವ ಹೊತ್ತಿಗೆ ಕಾಲೇಜು ಪ್ರಾಧ್ಯಾಪಕರಾದ ಅಪ್ಪ ಮನೆಯ ತುಂಬಾ ಸಾವಿರ ಸಾವಿರ ಪುಸ್ತಕಗಳನ್ನು ಸಂಗ್ರಹಿಸಿಟ್ಟಿದ್ದರು. ಓದುವ ಸವಲತ್ತು ನನಗೆ ಹುಟ್ಟಿನಿಂದಲೇ ಹಕ್ಕಿನಂತೆ ದಕ್ಕಿತ್ತು ಎನ್ನುತ್ತಾರೆ”[೯] ನೇಮಿಚಂದ್ರರವರು.

"ನಾನು ಓದಿದೆ, ರ್‍ಯಾಂಕ್ ಬಂದೆ, ನಾನು ಬರೆದೆ, ಜಗತ್ತು ಅಲೆದೆ, ನಾನುಕೆಲಸ ಪಡೆದೆ..... ಬದುಕಿನಲ್ಲಿ ನಮ್ಮ ಸಾಧನೆಯಲ್ಲೆಲ್ಲ ಎಷ್ಟು ಸುಲಭವಾಗಿ 'ನಾನು' ಸೇರಿ ಹೋಗುತ್ತದೆ. ನನ್ನ ಬೇರುಗಳ ಹುಡುಕಿ ಬಂದ ಅಡವಿಯ ನಡುವಿನ ಈ ಅಂತರಂಗದ ಪಯಣ ತಂದು ನಿಲ್ಲಿಸಿದ ಈ ತಾಣದಲ್ಲಿ 'ನಾನು' ಇರಲಿಲ್ಲ. ಈ ಬೃಹತ್ ಮರದಡಿಯಲ್ಲಿ ಆ ದೇವನೂ ಅದೆಷ್ಟು ಪುಟ್ಟವನಾಗಿ ನಮ್ರನಾಗಿ ಕುಳಿತಿದ್ದ. ಸೊಪ್ಪು ಸದೆಯಿಂದ ಆವೃತ್ತನಾಗಿ, ತೃಪ್ತನಾಗಿ. ದೊರೆತದ್ದೆಲ್ಲವೂ ಬದುಕಿನ ಅನಂತ ಕೃಪೆಯಾಗಿತ್ತು. ಇನ್ನು ದೊರೆಯದೆ ಉಳಿದದ್ದರ ಬಗ್ಗೆ 'ದೂರಿಲ್ಲದೆ ಬದುಕುವುದು' ನನ್ನ ಪ್ರಯತ್ನವಾಗಬೇಕಿತ್ತು".[೧೦]

"ನಮ್ಮ ಬೇರುಗಳಿಂದ ಬಲು ದೂರಕ್ಕೆ ನಾವು ಸಾಗಿ ಬಂದಾಗ, ಆ ಬೇರುಗಳನ್ನು ಮರೆತು ಬಿಡುತ್ತೇವೆ. ಎಂತಹ ಸರಳ ಸಾಧಾರಣ ಅತಿ ಸಾಮಾನ್ಯ ಮೂಲದಿಂದ ನಾವು ಹೊರಟದ್ದು, ಎಲ್ಲಿಗೋ ತಲುಪಿದಾಗ, ಎಲ್ಲಿಂದ ಹೊರಟೆವು ಎಂಬುದನ್ನೇ ಮರೆತು ಬೀಗುತ್ತೇವೆ. ಸಂಜೆ ಕತ್ತಲಲ್ಲಿ ಕತ್ತೆತ್ತಿ ನೋಡಿದೆ, ಆಕಾಶಕ್ಕೆ ಸಹಸ್ರ ಬಾಹುಗಳನ್ನು ಚಿಮ್ಮಿ ನನ್ನೊಳಗಿನ ಅಹಂಕಾರವನ್ನು ತುಳಿದ ತ್ರಿವಿಕ್ರಮನಂತೆ ನಿಂತಿತ್ತು ದೇವರ ವೃಕ್ಷ. ಈ ಮಾಂತ್ರಿಕ ಕ್ಷಣದಿಂದ ಎಚ್ಚೆತ್ತು, ಮತ್ತೆ ಹೊರಟಾಗ, ಅಮ್ಮನ ಕತೆಗಳು ಕಾಡಿನ ನಡುವೆ ದಾರಿ ತೋರಿದ್ದವು".[೧೧]

ಹೀಗೆ ನೇಮಿಚಂದ್ರ ಅವರು ತಮ್ಮ ಬಾಳಿನಲ್ಲಿ ನಡೆದ ಕ್ಷಣಗಳನ್ನು ಕಾದಂಬರಿಯ ಆರಂಭವನ್ನಾಗಿ ರೂಪಿಸಿಕೊಳ್ಳುತ್ತಾರೆ. ತಮ್ಮ ಪೂರ್ವಿಕರ ಮೂಲವನ್ನು ಹುಡುಕಿ ಹೊರಟಾಗ ದೊರೆತಂತಹ ಅನುಭವವನ್ನು ಕಾದಂಬರಿಯ ಪೂರ್ವಾರ್ಧದಲ್ಲಿ ದಾಖಲಿಸುತ್ತಾರೆ. ಅನಕ್ಷರಸ್ಥೆ ಗುಂಡಮ್ಮನ ಪಾತ್ರದ ಮೂಲಕ ಇದನ್ನು ಹೇಳಿಸುವುದು, ಅದನ್ನು ಅಂತರಂಗದ ಪಯಣದ ಜೊತೆಗೆ ಬದುಕಿನ ಪಯಣವಾಗಿಸುವುದು ಕಾದಂಬರಿಯ ವಿಶೇಷ.

**ಕಾದಂಬರಿಯ ಮುನ್ನೋಟ**

ಹಿಟ್ಲರ್‌ನ ಜನಾಂಗೀಯ ದ್ವೇಷ ಹಾಗೂ ಅದರ ಪರಿಣಾಮವಾದ ಕ್ರೌರ್ಯದ ಕುರಿತು ಅಸಂಖ್ಯ ಕೃತಿಗಳು ಬಂದಿವೆ. ಆದರೆ ವರ್ತಮಾನದಲ್ಲಿ ನಿಂತು ಭವಿಷ್ಯ ರೂಪಿಸಲು ಇತಿಹಾಸವನ್ನು ನೋಡುವ ಕೆಲವೇ ಕೃತಿಗಳಲ್ಲಿ ಈ 'ಯಾದ್ ವಶೇಮ್' ಕಾದಂಬರಿಯೂ ಒಂದು.

ಜರ್ಮನ್ ದೇಶದ ಬರ್ಲಿನ್ ನಗರದಿಂದ ಬೆಂಗಳೂರು, ಅಮೆರಿಕಾ, ಇಸ್ರೇಲ್ ಸುತ್ತಿ ಬೆಂಗಳೂರಿನ ಗೋರಿ ಪಾಳ್ಯದ ಒಬ್ಬ ಯಹೂದಿಯ ಸಮಾಧಿ ಸ್ಫೂರ್ತಿಯಾಗಿದ್ದು, ಮಾನವ ಕುಲ ಕಂಡ ಕ್ರೂರ ಜನಾಂಗೀಯ ದ್ವೇಷಕ್ಕೆ ಸಾಕ್ಷಿಯಾಗಿದ್ದು, ಇವೆಲ್ಲ ಕನ್ನಡ ಸಾರಸ್ವತ

ಲೋಕದ ಒಂದು ಮಹತ್ವದ ಕೃತಿಗೆ ಆಕರವಾಗಿದ್ದು ಆಕಸ್ಮಿಕವಲ್ಲ. ನಿರಂತರ ಮನುಷ್ಯ ಸಂಬಂಧಗಳ ಹುಡುಕಾಟದಲ್ಲಿದ್ದವರಿಗೆ ಮಾತ್ರ ಇಂಥ ಆಕರಗಳು ಗೋಚರವಾಗುತ್ತವೆ. ಇನ್ನು ಮುಂದೆ ಈ ಕೃತಿಯನ್ನು ಪ್ರವಾಸ ಹಿನ್ನೆಲಯಲ್ಲಿ ಅರ್ಥೈಸುವ ಪ್ರಯತ್ನವನ್ನು ಮಾಡಲಾಗಿದೆ:

ಜರ್ಮನಿಯಲ್ಲಿ ೧೯೩೩ರಲ್ಲಿ ಅಧಿಕಾರಕ್ಕೆ ಬಂದ ಹಿಟ್ಲರ್ ಮೊದಲು ಆರಂಭಿಸಿದ್ದೇ ಯಹೂದಿ ಜನರ ಹತ್ಯಾಕಾಂಡ, ಜೊತೆಗೇ ಕಮ್ಯೂನಿಸ್ಟ್‌ರ ಹತ್ಯೆ. ಹಿಟ್ಲರನ ದಾಳಿಗೆ ಬಲಿಯಾಗಿ ಬದುಕನ್ನರಸಿ ತಪ್ಪಿಸಿಕೊಂಡು ಬೇರೆ ದೇಶಗಳಿಗೆ ತಲೆಮರೆಸಿಕೊಂಡು ಹೋದವರು ಅದೆಷ್ಟೋ ಜನರು. ಈ ರೀತಿ ಭಾರತದಲ್ಲಿ ಆಶ್ರಯವನ್ನರಿಸಿ ಬಂದವರು ತುಂಬ ಕಡಿಮೆ ಜನ.

ಅವರಲ್ಲಿನ ಓರ್ವ ವಿಜ್ಞಾನಿ ಡಾ. ಆರನ್ ಮೊಸೆಸ್ ಹಾಗೂ ಅವರ ಮಗಳು ಹ್ಯಾನಾಳ ಕತೆ 'ಯಾದ್ ವಶೇಮ್'. ಇದರಲ್ಲಿ ಎರಡು ತಲೆಮಾರಿನ ಬದುಕಿನ ಸಂಘರ್ಷದ ಕಥೆಯೇ ತುಂಬಿದೆ. ಕಳೆದುಕೊಂಡ ತನ್ನ ತಾಯಿ ಹಾಗೂ ತಮ್ಮ ಅಕ್ಕಂದಿರ ಹುಡುಕಾಟದ ಕಥೆಯಾಗಿ ಆ ಹುಡುಕಾಟದಲ್ಲಿಯೇ ಕಂಡುಬಂದ ಜೀವನ ಮೌಲ್ಯಗಳ ಕತೆಯಾಗಿ ನಮ್ಮನ್ನು ಇದು ಬಹುಕಾಲದವರೆಗೆ ಕಾಡುತ್ತದೆ.

ಆರೆನ್ ಮೋಸೆಸ್ ಜರ್ಮನಿಯಲ್ಲಿ ಲೀ ಮೆಟ್ನರ್ ಅವರ ಸಂಶೋಧನಾ ತಂಡದಲ್ಲಿನ ಕಿರಿಯ ವಿಜ್ಞಾನಿ. ಅನೇಕ ವೈಜ್ಞಾನಿಕ ಆವಿಷ್ಕಾರಗಳು ಘಟಿಸುತ್ತಿದ್ದ ಆ ಸಮಯದಲ್ಲಿ ಅಲ್ಲಿ ಕೆಲಸ ಮಾಡುತ್ತಿದ್ದವರಲ್ಲಿ ಯಹೂದಿಯರೇ ಹೆಚ್ಚು. ಮೇಧಾವಿಗಳಾದ ಅವರನ್ನು ತನ್ನ ಪ್ರಯೋಗಗಳಿಗೆ ಬಲಿಪಶು ಮಾಡುವ ಅಥವಾ ನಾಮಶೇಷ ಮಾಡುವ ಯೋಜನೆ ಹಿಟ್ಲರನದು.

ಆ ಸಮಯದಲ್ಲಿ ಜರ್ಮನಿ ಬಿಟ್ಟು ಹೋಗುವಲ್ಲಿ ಯಶಸ್ವಿಯಾದವರಲ್ಲಿ ಆರೆನ್ ಒಬ್ಬ. ಹತ್ತು ವರ್ಷದ ಹ್ಯಾನಾಳನ್ನು ಕರೆದುಕೊಂಡು ಕಂಡು ಕೇಳರಿಯದ ಹೊಸ ನೆಲೆಯಾದ ಭಾರತಕ್ಕೆ ಬರುತ್ತಾನೆ. ಯುದ್ಧ ಮುಗಿದೊಡನೆ ಮತ್ತೆ ತನ್ನ ದೇಶಕ್ಕೆ ಹೋಗಿ ಕುಟುಂಬದೊಡನೆ ಜೀವನ ನಡೆಸಬಹುದೆಂದು ಕನಸು ಕಾಣುತ್ತಿದ್ದನು. ಜರ್ಮನಿಯಿಂದ ತಪ್ಪಿಸಿಕೊಂಡು ಬರುವಾಗ ತನ್ನ ತಾಯಿ, ಪುಟ್ಟ ತಮ್ಮ, ಅಕ್ಕನನ್ನು ನಾಝಿ ಸೈನಿಕರು ಎತ್ತಿಹಾಕಿಕೊಂಡು ಹೋದ ನೆನಪು ಹ್ಯಾನಾಳದು.

ಅವರು ನೆಲೆಸಲು ಆರಿಸಿಕೊಂಡ ಊರು ಬೆಂಗಳೂರು. ಇಲ್ಲಿನ ಚಾಮರಾಜಪೇಟೆ ಒಂದನೇ ಬಡಾವಣೆಯಲ್ಲಿ ನೆಲೆಸಿದ ಅನೇಕ ಬ್ರಾಹ್ಮಣ, ಒಕ್ಕಲಿಗ, ತಮಿಳುನಾಡಿನಿಂದ ಬಂದ ಮೊದಲಿಯಾರ್ ಮುಂತಾದ ಕುಟುಂಬಗಳ ಮಧ್ಯದಲ್ಲಿ ತಂದೆ-ಮಗಳು ಇರತೊಡಗಿದರು.

ನೆರೆಯ ಕರಿಯಣ್ಣ ಉರ್ಫ ಭೋಜರಾಜರ ಮನೆಯವರೊಂದಿಗೆ ವಿಶೇಷ ಸ್ನೇಹವಾಗಿ ಅವರ ನಾಲ್ಕು ಹೆಣ್ಣುಮಕ್ಕಳು ಹಾಗೂ ಒಬ್ಬ ಮಗನೊಂದಿಗೆ ಹ್ಯಾನಾ ಬೆಳೆಯತೊಡಗಿದಳು. ಚಿಕ್ಕ ಮಗಳು ಸುಮಿಯೊಂದಿಗೆ ಎಲ್ಲೆಡೆ ಅಡ್ಡಾಡುತ್ತ ಚಿಕ್ಕಮಕ್ಕಳ ಕಣ್ಣು-ಮನಸ್ಸಿನಿಂದ ಅವರ ರೀತಿ-ನೀತಿ ಕಲಿಯುತ್ತ ಪರಂಪರೆ ಸಂಸ್ಕಾರಗಳನ್ನು ಮೈಗೂಡಿಸಿಕೊಳ್ಳುತ್ತಿದ್ದಳು. ಸುಮಿಯ ಅವ್ವ ಗುಂಡಮ್ಮ ಅನಕ್ಷರಸ್ಥೆಯಾದರೂ ಸುಸಂಸ್ಕೃತ ಹೆಣ್ಣು ಮಗಳು. ಮಕ್ಕಳನ್ನು ಒಳ್ಳೆಯ ರೀತಿಯಲ್ಲಿ ಅಂದರೆ ಅವಳ ಮಾತಿನಲ್ಲಿ 'ಬ್ರಾಮ್ರ ಮಕ್ಕಳು ಬೆಳೆದಂತೆ' ಬೆಳೆಸಿದ್ದಳು. ಜಾತಿಯಿಂದ ಕುಂಚಿಟಗರು ಆಗಿದ್ದರೂ ಸುತ್ತಲಿನ ಬ್ರಾಹ್ಮಣ ಲಿಂಗಾಯತ ಮನೆಯವರಂತೇ ಬಾಳಲು ಪ್ರಯತ್ನಿಸುತ್ತಿದ್ದಳು.

ಮೇಲುನೋಟಕ್ಕೆ ಕೆಲವೇ ಪಾತ್ರಗಳು ತಮ್ಮ ಸ್ವಗತಗಳಲ್ಲಿ ವ್ಯಕ್ತಪಡಿಸುವ ಭಾವನೆಗಳ ಕಂತೆಯಾಗಿ ಕಂಡರೂ, ನಾಟಕದಲ್ಲಿ 'ಮಾನೊಲಾಗ್' ತಂತ್ರದಿಂದ ಮುಚ್ಚಿಡುವುದನ್ನೂ ಬಿಚ್ಚಿ ಹೇಳುವಂತೆ, ಯಾತನೆಯ ಬದುಕನ್ನು ಬಿಚ್ಚಿಡಲು ಇದಕ್ಕಿಂತ ಪರಿಣಾಮಕಾರಿಯಾದ ಬೇರೆ ತಂತ್ರ ಇಲ್ಲ ಎನ್ನಬಹುದು. ತನ್ನೊಳಗಿನ ತಾಕಲಾಟಗಳನ್ನು, ಯಾರೊಂದಿಗೂ ಹಂಚಿಕೊಳ್ಳಲಾಗದ್ದನ್ನು ತನಗೆ ಮಾತ್ರವೇ ಹೇಳಿಕೊಳ್ಳುವಂತೆ ಹೆಣೆಯಲಾದ ಈ ಕಥಾನಕದಲ್ಲಿ 'ಹ್ಯಾನಾ'ಳ ನೋವನ್ನು ಓದುಗರು ಅಷ್ಟೇ ತೀವ್ರತೆಯಿಂದ ಅನುಭವಿಸುವಂತೆ ಮಾಡಿರುವುದು ನೇಮಿಚಂದ್ರ ಅವರ ಬರವಣಿಗೆಯ ಗಟ್ಟಿತನವನ್ನು ಸಾಬೀತುಪಡಿಸುತ್ತದೆ.

'ನೂರು ಸಾವಿರ ಸಾವಿನ ನೆನಪು' ಮಾಡಿಕೊಳ್ಳುವಾಗಲೂ ಮತ್ತೆ ಮತ್ತೆ ಕಾಡುವುದು ಸಹಿಷ್ಣುತೆಯ ಸಾಕಾರ ಮೂರ್ತಿಯ ನೆನಪುಗಳೇ! ಅಮಾನವೀಯ ಪರಿಸರದ ಪಾಶವೀ ಕೃತ್ಯಗಳ ಚಿತ್ರಣದ ನಡುವೆಯೂ ಪ್ರೀತಿಯ ಚಿಗುರು, ಶಾಂತಿಯ ಸಂದೇಶಗಳದ್ದೇ ಮೇಲುಗೈ.

"ನಾಳೆಗಳ ಭರವಸೆಯನ್ನು ಯಾರಾದರೂ ನೀಡಿದರೆ ನಿನ್ನೆಗಳ ನೂರು ನೋವನ್ನು ಮರೆಯಲು ಸಿದ್ಧ"[೧೧] ಎನ್ನುವುದು ಕಾದಂಬರಿಯಲ್ಲಿ ಬರುವ ಪ್ರಮುಖ ಮಾತು. ಇಂತಹ ಕಹಿ ನೆನಪುಗಳೇ ಅಗ್ನಿದಿವ್ಯದಲ್ಲಿ ಬೆಂದು ಪಕ್ವವಾದ ಜೀವವೊಂದು ಆತ್ಮೀಯ ಸಂಬಂಧಗಳ ಸುಂದರ ಸಮಾಜವನ್ನು ಕಟ್ಟಲು ದೇಶ-ಕಾಲಗಳನ್ನು ಮೀರಿ ಶ್ರಮಿಸುವ ಅಮರ ನಾಯಕಿಯನ್ನು "ಹ್ಯಾನಾ" ರೂಪದಲ್ಲಿ ಮೂಡಿಸಿದ್ದಾರೆ ನೇಮಿಚಂದ್ರ. ಈ ಮೂಲಕ ಅವರು ತಮ್ಮ ಎಂದಿನ ಮಾಂತ್ರಿಕ ಲೇಖನಿಯಿಂದ ಸ್ತ್ರೀ ಶಕ್ತಿಯ ಔನ್ನತ್ಯವನ್ನು 'ಯಾದ್ ವಶೇಮ್' ಕಾದಂಬರಿಯಲ್ಲಿ ಅಪೂರ್ವವಾಗಿ ಮೆರೆಸಿದ್ದಾರೆ. ಎಲ್ಲರಲ್ಲೂ ಪ್ರೀತಿಯನ್ನೇ ಅರಸುವ, ಸುಂದರ ನಾಳೆಗಳಿಗಾಗಿ ಹಂಬಲಿಸುವ, ನೊಂದ ಜೀವಿಗಳಿಗೆ ಸಹಾಯ ಮಾಡುವ, ಅನ್ಯಾಯದ ವಿರುದ್ಧ ಸಿಡಿದೇಳುವ, ನ್ಯಾಯಕ್ಕಾಗಿ ಹೋರಾಡುವ, ಮಾನವೀಯತೆ

ಮೆರೆಯುವ, ತನ್ನಂತೆ ಪರರ ಬಗೆಯುವ ಹ್ಯಾನಾಳ ವ್ಯಕ್ತಿತ್ವ ಸ್ತ್ರೀ ಸ್ವಭಾವಕ್ಕೊಂದು ಪ್ರತಿಮೆಯಾಗುತ್ತದೆ, ಇಂದಿನವರಿಗೆ ಮಾದರಿಯಾಗುತ್ತದೆ.

ಬೆಂಗಳೂರಿನ ಗೋರಿಪಾಳ್ಯದಿಂದ ಆರಂಭಗೊಂಡ ಕಥಾನಕವು ತನ್ನ ಒಡಲಿನಲ್ಲಿ ಕಥಾಸಾಗರವನ್ನೇ ತುಂಬಿಸಿಕೊಂಡಿದೆ. ಹ್ಯಾನಾ ಅಥವಾ ಅನಿತಾಳ ಆತ್ಮಕಥೆಯೋ, ಜೀವನ ಚಿತ್ರಣವೋ, ಮಾನವ ದ್ವೇಷಿಗಳ ಚರಿತ್ರೆಯ ಪುನಃ ಕಥನವೋ, ಪ್ರವಾಸಿ ತಾಣಗಳ ನೆನಪುಗಳೋ, ನೈಜವಾಗಿ ನಡೆದ ಸತ್ಯ ಕಥೆಯೊಂದರ ಅನಾವರಣವೊ, ಸಾಮಾಜಿಕ ಮತ್ತು ಮಾನಸಿಕ ತುಮುಲ ದಾಖಲೀಕರಣವೋ ಕಳೆದು ಹೋದದ್ದನ್ನು ಪಡೆದುಕೊಳ್ಳಲು ಹಂಬಲಿಸುವ ಮುಗ್ಧ ಮಗುವಿನ ನೆನಪೊ, ಜನಾಂಗೀಯ ಘರ್ಷಣೆಯ ಬೀಭತ್ಸ ಚಿತ್ರಣವೋ, ಮತ್ತೆ ಮತ್ತೆ ಕಾಡುವ ಮಾನವೀಯ ನೆನಪುಗಳೋ, ಆಂತರಿಕ ಭಾವನೆಗಳ ಕೃತಿರೂಪವೋ ಅನ್ನುವಷ್ಟು ಅನಿರೀಕ್ಷಿತ ಘಟನೆಗಳು ಕಾದಂಬರಿಯಲ್ಲಿ ಘಟಿಸುತ್ತವೆ. ಇವನ್ನು ವಿವಿಧ ಕೋನದಲ್ಲಿ ಅರ್ಥೈಸ ಹೊರಟಾಗ ವಿಭಿನ್ನ ನೆಲೆಯಲ್ಲಿ ಪರಿಭಾವಿಸಬಹುದೇ ಎನ್ನುವಷ್ಟರಮಟ್ಟಿಗೆ ಆಗಾಧತೆಯನ್ನೇ ಮೆರೆದಿದೆ. ಆದರೆ ಇಲ್ಲಿ ಈ ಕೃತಿಯನ್ನು ಇತಿಹಾಸವನ್ನು ವರ್ತಮಾನದಲ್ಲಿಟ್ಟು ಹೇಳುವ ಭವಿಷ್ಯದ ಭರವಸೆಗಳ ಜೊತೆಯಲ್ಲಿ ಕಾಲಗರ್ಭದ ಪಯಾಣದಲ್ಲಿ ಹಾಗೆಯೇ ಆಚೆಗೆ ಪಯಾಣಿಸುತ್ತಾ ಸಾಗುವ ಪಾತ್ರಗಳ ಒಳನೋಟವನ್ನು ಪ್ರವಾಸ ವಿನ್ಯಾಸದ ಕಥನಗಳ ಹಿನ್ನೆಲೆಯಲ್ಲಿ ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕಥೆಯಲ್ಲಿ ನೂರು ವರ್ಷಗಳ ಹಿಂದಿನ ಬೆಂಗಳೂರಿನ ಪರಿಸರದ ಚಿತ್ರಣ, ನಲವತ್ತರ ದಶಕದಲ್ಲಿನ ದ್ವಿತೀಯ ಪ್ರಪಂಚ ಮಹಾಯುದ್ಧದ ಪರಿಸರದ ಪರಿಚಯ, ಎಚ್.ಎ.ಎಲ್. ವಿಮಾನ ಕಾರ್ಖಾನೆಯ ಹುಟ್ಟು ಬೆಳವಣಿಗೆಗಳ ಕಥೆ, ಬಯಲುಸೀಮೆಯ ಹಳ್ಳಿಯಿಂದ ಬೆಂಗಳೂರಿಗೆ ಬಂದು ನೆಲೆಸಿದ ಹಿಂದುಳಿದ ಕುಟುಂಬಗಳ ವಿದ್ಯಾಭ್ಯಾಸ ಯಶೋಗಾಥೆ ಪರಿಚಯ, ಜಾತಿಪದ್ಧತಿಯ ಸೂಕ್ಷ್ಮಗಳು, ಮುಕ್ಕೋಟಿ ದೇವರುಗಳ ನಡುವೆಯೂ ಹೊಸ ದೇವರುಗಳಿಗೆ ಜಾಗ ಕೊಡುವುದು, ಹುಟ್ಟು–ಮುಟ್ಟು–ಮದುವೆ–ಬಾಣಂತನ–ನಾಮಕರಣ–ಸಾವು–ಸತ್ಯನಾರಾಯಣ ವ್ರತ ಮುಂತಾದ ಎಲ್ಲ ಕುಟುಂಬಗಳಲ್ಲೂ ಘಟಿಸುವ ಸಂಗತಿಗಳು, ಬೆಂಗಳೂರಿನಲ್ಲಿರುವ ಯಹೂದಿಗಳ ಬದುಕಿನ ಚಿತ್ರಣ, 'ಗುಂಡಮ್ಮ'ನಂತಹ ಅಮ್ಮಂದಿನ ಮಮಕಾರ, ಮಕ್ಕಳ ಆಟ–ಪಾಠ, ಹಬ್ಬ–ಹರಿದಿನಗಳ ಸಂತಸ ಹಂಚಿಕೊಳ್ಳುವುದು – ಹೀಗೆ ಕಥಾನಕವು ಪೂರ್ವಾರ್ಧದಲ್ಲಿ ಹೆಣೆಯುತ್ತಾ ಸಾಗುತ್ತದೆ.

ಸುಮಿ ಮತ್ತು ಹ್ಯಾನಾ ಇಬ್ಬರೂ ಬಾಲ್ಯದ ಗೆಳತಿಯಾಗಿ ಬೆಳೆದರು. ಸುಮಿಯ ಅವ್ವ ಗುಂಡಮ್ಮರವರಿಗೂ ಧರ್ಮ ಜಾತಿಗಳೆಂದೂ ಗೋಡೆಗಳಾಗಿರಲಿಲ್ಲ. ತಮ್ಮ ದೇವರ

ಪಕ್ಕದಲ್ಲಿಯೇ ಹ್ಯಾನಾಳಿಗೂ ತನ್ನ ದೇವರ ಪೋಟೋ ತಂದು ಇಡಲು ಹೇಳುವಷ್ಟು ದೊಡ್ಡ ಮನಸ್ಸು ಆಕೆಯದು. 'ಹ್ಯಾನಾಳ ದೇವರೂ ನಮ್ಮ ದೇವರಂತೇ' ಎಂದುಕೊಂಡ ಆ ತಾಯಿ ಆ ಬೀದಿಗೆ ಇರಲು ಬಂದಾಗಿನಿಂದ ಗಂಡ-ಮಕ್ಕಳಿಗೆ ಮಾಂಸದಡಿಗೆಯನ್ನೂ ಮಾಡುತ್ತಿರಲಿಲ್ಲ. ಹೀಗೆ ಸುತ್ತಲಿನ ಪರಿಸರದಲ್ಲಿ ಒಂದಾಗಿ ಹೋದ ಅವಳು ಹ್ಯಾನಾಳನ್ನು ಪೂರ್ತಿಯಾಗಿ ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಪ್ರಸಂಗ ಬಂತು.

ಆರನ್ ಮೊಸೆಸ್ ಆಕಸ್ಮಿಕವಾಗಿ ಹೃದಯಾಘಾತಕ್ಕೆ ಒಳಗಾಗಿ ತೀರಿಕೊಂಡರು. ಈ ಅರಿಯದ ದೇಶದಲ್ಲಿ ಗೊತ್ತಿಲ್ಲದ ಜನರ ಮಧ್ಯೆ ಏಕಾಕಿಯಾದ ಹ್ಯಾನಾಳನ್ನು ಮನೆಮಗಳಂತೆ ನೋಡಿಕೊಂಡಳು. ಅಪ್ಪ ಮಾತ್ರವೇ ಆಸರೆಯಾಗಿದ್ದು, ಅವರು ತೀರಿಕೊಂಡಾಗ ಮತ್ತೆ ಅನಾಥಳಾದಳು ಹ್ಯಾನಾ. ಭಯ, ಕ್ರೂರತೆಯನ್ನು ಹಿಂದೆ ಬಿಟ್ಟು ರಾಮ, ಕೃಷ್ಣ, ಬುದ್ಧ, ಗಾಂಧಿಯ ನಾಡಿಗೆ ಬಂದ ಹ್ಯಾನಾ ಆ ಭಯವನ್ನು ತನ್ನಲ್ಲೇ ಹೆಪ್ಪುಗಟ್ಟಿಕೊಂಡು ಭಾವನೆಗಳಿಗೆ ಕಟ್ಟೆ ಕಟ್ಟಿ ಗುಂಡಮ್ಮನ ಐದನೆಯ ಮಗಳಾಗಿ ಆ ಮನೆಗೆ ಬಂದಳು. ಗುಂಡಮ್ಮ ಹ್ಯಾನಾಳ ಹೆಸರನ್ನು "ಅನಿತಾ" ಎಂಬುದಾಗಿ ಹೆಸರಿಟ್ಟಳು. ಅವರ ದೇವರ ಮನೆಯಲ್ಲಿ ತನ್ನ "ಮನೋರಾ" ಇಟ್ಟುಕೊಂಡು ಅವರಲ್ಲೇ ಒಬ್ಬಳಾದಳು. ತನ್ನ ಯಹೂದಿ ಹಿನ್ನೆಲೆಯನ್ನು ತನ್ನಲ್ಲೇ ಅಡಗಿಸಿಕೊಂಡು ಭಾರತೀಯಳಾದಳು. ಅನಿತಾಳಾಗಿ ಗುಂಡಮ್ಮನ ಮನೆಯಲ್ಲಿ ವಾಸಮಾಡುತ್ತಿದ್ದರೂ ಅವಳ ಮನಸ್ಸು ಮಾತ್ರ ತನ್ನ ಅಮ್ಮ, ಅಕ್ಕ ಮತ್ತು ತಮ್ಮನಾಗಿ ಸದಾ ಮಿಡಿಯುತ್ತಿತ್ತು. ವಿದೇಶಿಗೆ ಸಂಬಂಧಪಟ್ಟಂತಹ ಮಾಹಿತಿಯನ್ನು ದೊರೆಯಬಹುದು. ಹಿಟ್ಲರ್‌ನ ಯುದ್ಧ ಕೊನೆಗೊಂಡು ನನ್ನನ್ನು ಕರೆಸಿಕೊಳ್ಳಬಹುದು ಎಂದು ಹಂಬಲಿಸುತ್ತಾ ಗ್ರಂಥಗಳ ಅಧ್ಯಯನಕ್ಕಾಗಿ ಗ್ರಂಥಾಲಯಕ್ಕೆ ಭೇಟಿ ನೀಡುವುದು ಮಾಹಿತಿಯನ್ನು ಕಲೆಹಾಕುವುದು ಪತ್ರವನ್ನು ಬರೆಯುವುದು ಮುಂತಾದ ಕಾರ್ಯವನ್ನು ಮಾಡುತ್ತಿದ್ದಳು. ಬಾಲ್ಯ ಸಹಜವಾದ ಆಸೆಗಳು, ಕಿಶೋರಿತನದಲ್ಲಿದ್ದಾಗ ಅವಳ ಕನಸುಗಳು, ಹುಟುಗಾಟಿಕೆಗಳು, ಎಲ್ಲವನ್ನು ಮರೆತು ಜವಾಬ್ದಾರಿಯುತವಾಗಿ ನಡೆದುಕೊಳ್ಳುತ್ತಾ ಎಲ್ಲರ ಪ್ರೀತಿಗೆ ಪಾತ್ರಗಳಿದ್ದಳು.

ಹೀಗೆ ಬೆಳೆದು ದೊಡ್ಡವಳಾದಾಗ, ಸರಿಯಾದ ವಯಸ್ಸಿನಲ್ಲಿಯೇ ವಿವೇಕನ ಪತ್ನಿಯಾದಳು. 'ಎದೆ ಸೀಳಿದರೆ ಮೂರಕ್ಷರ ಇಲ್ಲದಾಕಿ'ಯಾಗಿದ್ದ ಗುಂಡಮ್ಮ ಹ್ಯಾನಾಳನ್ನು ತೆರೆದ ಹೃದಯದಿಂದ ಸ್ವೀಕರಿಸಿದಳು. ಸಂಸಾರ ಸಾಗಿತ್ತು. ಹೆಚ್ಚು ಓದದೇ ಇದ್ದ ವಿವೇಕ ಅಲ್ಲಿಯೇ ಶಾಲೆಯೊಂದರಲ್ಲಿ ಶಿಕ್ಷಕನಾಗಿದ್ದನು. ಬಾಲ್ಯದಿಂದಲೂ ಹ್ಯಾನಾ ಅಂದರೆ ಈಗಿನ ಅನಿತಾಳನ್ನು ಪ್ರೀತಿಸಿ ಮದುವೆಯಾಗೆಂದು ಕೇಳಿಕೊಂಡಾಗ ಅವಳು ಒಪ್ಪಿಕೊಂಡಿದ್ದು ಅವನಿಗೂ ಆಶ್ಚರ್ಯವೆನಿಸಿತ್ತು. 'ತನಗೆ ಕಷ್ಟಕಾಲದಲ್ಲಿ ಆಶ್ರಯ ಕೊಟ್ಟು, ಇಡೀ ಕುಟುಂಬದ

ಪ್ರೀತಿಯನ್ನು ಕೊಟ್ಟ ಕೃತಜ್ಞತೆಯ ಋಣಕ್ಕೆ ಮದುವೆಯಾದಳೆ' ಎನ್ನುವ ಪ್ರಶ್ನೆ ಅವನನ್ನು ಕೊನೆಯವರೆಗೂ ಕಾಡಿದೆ.

ಸಂಪೂರ್ಣವಾಗಿ ಆ ಮನೆಯವಳಾದ ಅನಿತಾ ಕುಂಕುಮ ಬೊಟ್ಟಿಟ್ಟುಕೊಂಡಳು, ತಾಳಿ ಕಟ್ಟಿಕೊಂಡಳು. ದೇವಸ್ಥಾನಕ್ಕೆ ಹೋಗಿ ನಂಬದ ದೇವರಿಗೆ ಕೈಮುಗಿದಳು. ಗುಂಡಮ್ಮ ಹೇಳುವ ಕತೆ, ಪುರಾಣಗಳನ್ನು ಕೇಳಿದಳು. ನಂಬಿಕೆ ಶ್ರದ್ಧೆಗಿಂತ ಈ ನೆಲದಲ್ಲಿ ಬೇರೆಯಾಗದೇ ಬೆರೆಯುವ, ಬೇರು ಹುಡುಕುವುದಕ್ಕಾಗಿ ಇಲ್ಲಿನ ಮಣ್ಣಿನಲ್ಲಿ ಒಂದಾಗುವುದಕ್ಕಾಗಿ ಎತ್ತಿದ ಹೆಜ್ಜೆಯಾಗಿತ್ತು.

ವಿವೇಕನ ಸಂಸಾರದಲ್ಲಿ ತನ್ನನ್ನು ತೊಡಗಿಸಿಕೊಂಡು ಎಲ್ಲ ಜವಾಬ್ದಾರಿಗಳನ್ನು ಪೂರೈಸಿದಳು. ಅತ್ತೆಯನ್ನು ನೋಡಿಕೊಂಡಳು. ನಾದಿನಿಯರ ಮದುವೆ ಮಾಡಿದಳು. ವಿವೇಕನ ಸಣ್ಣ ಸಂಬಳದಲ್ಲೇ ಸಂಸಾರ ತೂಗಿಸಿದಳು. ತನಗಾಗಿ ಎಂದೂ ಏನನ್ನೂ ಕೇಳದ ಅನಿತಾ ತಾನು ಬಿಟ್ಟು ಬಂದ ಬದುಕು, ಬದುಕಿನ ಬೇರುಗಳನ್ನು ಹುಡುಕುವ ಪ್ರಯತ್ನ ಬಿಟ್ಟಿರಲಿಲ್ಲ.

ತನ್ನ ಬಾಲ್ಯದ ಸಿಹಿ–ಕಹಿ, ಸ್ನೇಹ–ಕ್ರೌರ್ಯ ಒಡಲಲ್ಲಿ ಅಡಗಿಸಿಕೊಂಡ ಆಗಾಧ ನೋವಿಗೆ ಧ್ವನಿ ಕೊಡುವ ಪ್ರಯತ್ನ ಮಾಡಿದಳು. ಮಗು ವಿಶು ಹುಟ್ಟಿದಾಗಿನಿಂದ ಒಂದೇ ಕನಸನ್ನು ಕಂಡ ಅನಿತಾ ಅವನೇ ತನಗೆ ತನ್ನವರನ್ನು ಮತ್ತೆ ತೋರಿಸುತ್ತಾನೆ ಎಂದು ನಂಬಿದವಳು. ಇಂಜಿನಿಯರಿಂಗ್ ಓದಿದ ವಿಶುಗೆ ಒಳ್ಳೆ ಕೆಲಸ ಸಿಕ್ಕೊಡನೆ ಅಮ್ಮ–ಅಪ್ಪನನ್ನು ಹುಡುಕಾಟದ ನೆಲೆಗೆ ಹಚ್ಚಲು ಪ್ರಯತ್ನಿಸಿದ. ವಿವೇಕ ತನ್ನ ಉಳಿತಾಯದಿಂದ ಅನಿತಾಳನ್ನು ಜರ್ಮನಿ, ಅಮೆರಿಕೆಗೆ ಕರೆದುಕೊಂಡು ಹೋಗುವ ಯೋಚನೆ ಮಾಡಿದಾಗ ವಿಶುನಿಗೆ ಅವರು ಈ ರೀತಿ ಕಾಣದ ಬೇರುಗಳನ್ನು ಹುಡುಕುತ್ತ ಕಷ್ಟಪಡುವುದು ಇಷ್ಟವಿಲ್ಲದಿದ್ದರೂ ಎಲ್ಲ ಅನುಕೂಲತೆಗಳನ್ನು ಮಾಡಿಕೊಟ್ಟ.

ಬಿಟ್ಟು ಬಂದ ತಾಯಿ, ಅಕ್ಕ ತಮ್ಮನನ್ನು ಹುಡುಕುತ್ತ ಜರ್ಮನಿ, ಅಮೆರಿಕಾ ಅಮಸ್ಟರ್ಡಾಮ್ ಎಲ್ಲೆಡೆ ಅಡ್ಡಾಡಿದಳು. ಅನಿತಾ ಅಡ್ಡಾಡಿದಲ್ಲೆಲ್ಲ ಸಾವು–ನೋವು, ದ್ವೇಷ–ಕ್ರೌರ್ಯಗಳನ್ನು ಕಂಡಳು. ಯಾತನಾ ಶಿಬಿರಗಳು, ಮನುಷ್ಯರನ್ನೇ ಪ್ರಯೋಗ ಪಶುವಾಗಿ ಬಳಸಿದ ಪ್ರಯೋಗಶಾಲೆಗಳು, ಬಾಲ್ಯದಲ್ಲಿ ತಾನು ಕಂಡ ನೋವು–ಯಾತನೆಯ ನೂರುಪಟ್ಟು ಯಾತನೆ ಅನುಭವಿಸಿದ ಜೀವಿಗಳ ಚೀತ್ಕಾರಗಳನ್ನು ಕೇಳಿದಳು. ನಡೆದುಹೋದುದನ್ನು ಮರೆಸುವ ಪ್ರಯತ್ನ ಸತ್ಯದ ಬದಲಾಗಿ ಬರೆದ ನವಿರಾದ ಬಣ್ಣ ಬದಲಿಸದ ಸುಳ್ಳುಗಳನ್ನು ಕೇಳಿದಳು. ಡಕಾವ್ ನಾಝಿ, ಕ್ಯಾಂಪ್‌ನಲ್ಲಿ ತಾಯಿ ಹಾಗೂ ತಮ್ಮ ಬಲಿ ಬಿದ್ದದ್ದನ್ನು ತಿಳಿದ ಅನಿತಾ ಕುಸಿದಳು. ಇಷ್ಟು ದಿನ ಎಲ್ಲೋ ಒಂದು ದೂರದ ಆಸೆ, ಅವರು ಬದುಕಿರಬಹುದು.

ಇಂದಿಲ್ಲ ನಾಳೆ ಸಿಗಬಹುದು ಎನ್ನುವ ಆಸೆ ಇಂದು ಪೂರ್ತಿಯಾಗಿ ಕಮರಿಹೋಯಿತು. ದುಃಖಕ್ಕೆ ಸೀಮೆ ಇಲ್ಲದಂತಾಯಿತು. ವಿವೇಕ ಅವಳನ್ನು ಅವಳಷ್ಟಕ್ಕೇ ಬಿಟ್ಟು ಹೆಪ್ಪುಗಟ್ಟಿದ ದುಃಖ ಕರಗಿಹೋಗಲು ಅನುವು ಮಾಡಿಕೊಟ್ಟನು.

ದಶಕಗಳ ಕಾಲ ನೆನಪಿನ ಗೂಡುಗಳನ್ನು ಕಟ್ಟಿಸಿ, ಕಳೆದ ಶತಮಾನದ ಕೊನೆ ಮತ್ತು ಹೊಸ ಸಹಸ್ರಮಾನದ ಆರಂಭದಲ್ಲಿ ಜರ್ಮನಿಯ ಮೃತ್ಯುಕೂಪ 'ಡಕಾವ್ ನಾಜಿ ಕ್ಯಾಂಪ್', 'ಇಸ್ರೇಲ್‌ನ ಜರೂಸಲೇಮಿನ ಗೋಳುಗೋಡೆ' 'ಯಾದ್ ವಶೇಮ್', ಪ್ಯಾಲೆಸ್ಟೈನ್, ಇಟಲಿ, ಅಮೆರಿಕಾದ ವಾಷಿಂಗ್ಟನ್‌ನ 'ಹೊಲೊಕಾಸ್ಟ್ ಮ್ಯೂಸಿಯಂ', ಲಾಸ್ ಏಂಜಲೀಸ್‌ನ 'ಮ್ಯೂಸಿಯಂ ಆಫ್ ಟಾಲರೆನ್ಸ್'ಗಳಲ್ಲಿ ಸುತ್ತಾಡಿಸಿ ಅರವತ್ತು ಲಕ್ಷ ಯಹೂದಿಗಳ ಮಾರಣ ಹೋಮದ ತಾಣಗಳಿಗೆ ಕರೆದೊಯ್ದು, ಹಿಟ್ಲರ್ ಮತ್ತು ಅವನ ಎಸ್.ಎಸ್. ಪಡೆಯ ಕಟುಕತನವನ್ನು ನೇಮಿಚಂದ್ರ ಅವರು ಈ ಕಾದಂಬರಿಯಲ್ಲಿ ಮರುಚಿತ್ರಿಸಿದ್ದಾರೆ.

ನೇಮಿಚಂದ್ರ ಅವರು ದಾಖಲಿಸಿದ್ದು ನೂರರಲ್ಲಿ ಹತ್ತರಷ್ಟು ಮಾತ್ರ. ಅಂಥ ಮಾನವ ಹತ್ಯಾಯಾತ್ರೆ ಹಿಟ್ಲರ್‌ನ ಕಾಲದಲ್ಲಿ ನಡೆದುಹೋಯಿತು. ನೇಮಿಚಂದ್ರ ಕಥೆಗೆ ಆಯ್ದುಕೊಂಡ ಡಕಾವು ಕ್ಯಾಂಪ್‌ನಲ್ಲಿ ೩೧೯೫೧ ಜನರನ್ನು ಸಾಯಿಸಿದ್ದಾರೆ. ಒಟ್ಟು ೧೯೩೩ರಿಂದ ೧೯೩೬ರವರೆಗೆ ೨೦ ಕ್ಯಾಂಪ್‌ಗಳು. ೧೯೩೬ರಿಂದ ೧೯೪೫ರವರೆಗೆ ೨೨ ಮುಖ್ಯ ಕ್ಯಾಂಪ್‌ಗಳನ್ನು ಹಿಟ್ಲರ್ ಸ್ಥಾಪಿಸಿದ್ದ. ಇವೆಲ್ಲ ಯಹೂದಿಗಳನ್ನು, ಕಮ್ಯುನಿಸ್ಟರನ್ನು , ಯುದ್ಧ ಕೈದಿಗಳನ್ನು ಕೊಲ್ಲಲು. ಒಟ್ಟು ಇಂಥ ಕ್ಯಾಂಪ್‌ಗಳಲ್ಲಿ ೧೮ ಮಿಲಿಯನ್ ಜನರನ್ನು ಬಂಧಿಸಿದ್ದ. ನಾಜಿ ಸೈನ್ಯಾ ೧೧ ಮಿಲಿಯನ್ ಜನರನ್ನು ವಿವಿಧ ರೀತಿಯಲ್ಲಿ ಕೊಂದುಹಾಕಿದೆ. ಒಂದು ಮಾಹಿತಿಯ ಪ್ರಕಾರ ಜರ್ಮನಿ ಮತ್ತು ಒಟ್ಟು ಯುರೋಪ್‌ನಲ್ಲಿ ೬ ಮಿಲಿಯನ್ ಯಹೂದಿಗಳನ್ನು ಹಿಟ್ಲರ್ ಕೊಂದು ಹಾಕಿದ್ದಾನೆ.

ಹ್ಯಾನಾಳ ಕಥೆ ಹೇಳುವ ಮೂಲಕ ಹ್ಯಾನಾಳ ತಾಯಿ ಹಾಗೂ ತಮ್ಮನನ್ನು ಹೇಗೆ ಕೊಲ್ಲಲಾಯಿತು ಎಂದು ಹೇಳುತ್ತಲೇ ಡಕಾವ್ ಕ್ಯಾಂಪಿನಲ್ಲಿ ಇದ್ದ ಕ್ರೂರ ವ್ಯವಸ್ಥೆಯನ್ನು ಬಿಚ್ಚಿಡುತ್ತಾರೆ. ಬದುಕಿನ ಬಗ್ಗೆ ಭಯ ಬರುತ್ತದೆ. ಯಾದ್ ವಶೇಮ್ ಜನಾಂಗೀಯ ದ್ವೇಷ ಹಿಟ್ಲರ್‌ನ ಕ್ರೂರತನಗಳನ್ನು ಬಿಚ್ಚಿಡುತ್ತಲೇ ಮಾನವತೆ ಮತ್ತು ಅಮಾನುಷತೆ ನಡುವಿನ ಚರ್ಚೆಯನ್ನು ಅದ್ಭುತವಾಗಿ ಮೂಡಿ ಬಂದಿದೆ. ಧರ್ಮದೊಳಗಿನ ಅಧರ್ಮವನ್ನು, ಹಿಟ್ಲರ್ ಕೇವಲ ಆರ್ಯ ಜನಾಂಗದಲ್ಲಿ ಮಾತ್ರವಲ್ಲ ಎಲ್ಲೆಲ್ಲೂ ಹುಟ್ಟಬಲ್ಲ ಎಂಬ ಸತ್ಯವನ್ನು ತೆರೆದಿಡುತ್ತದೆ.

ಹ್ಯಾನಾಳ ಅಕ್ಕ ಡಕಾವ್ ಕ್ಯಾಂಪಿನಿಂದ ತಪ್ಪಿಸಿಕೊಳ್ಳುವಾಗ ಅಮೆರಿಕಾ ಸೈನಿಕರು ಹಿಟ್ಲರ್‌ನ ಪಡೆಗಳ ಮೇಲೆ ಮಾಡಿದ ದಾಳಿಯ ಬಗ್ಗೆ ಹೇಳಿದ್ದಾರೆ. ಆದರೆ ಜಗತ್ತಿಗೇ ಗೊತ್ತಿರುವ ಸತ್ಯ ಹಿಟ್ಲರ್ ಸೋಲಿಗೆ ಮುಖ್ಯ ಕಾರಣ ಸೋವಿಯತ್ ರಷ್ಯಾ ಮತ್ತದರ

ಕೆಂಪುಸೇನೆ. ಹಿಟ್ಲರ್ ಆರಂಭಿಸಿದ ಇಡೀ ಯುದ್ಧದಲ್ಲಿ ೧೦ ಮಿಲಿಯನ್ ಸೈನಿಕರಾದರೆ ಇನ್ನರ್ಧ ಜನ ಸಾಮಾನ್ಯ ನಾಗರಿಕರು. ಹಿಟ್ಲರ್‌ನ ಸೋಲಿಗೆ ಅಮೆರಿಕಾದ ಪಾಲೆಷ್ಟು ಸೋವಿಯತ್ ಯೂನಿಯನ್ ಪಾಲೆಷ್ಟು ಎನ್ನುವುದು. ಹಾಗೇ ಇಂದಿನ ಇಸ್ರೇಲ್ ಹಿಂದೆ ಇರುವುದು ಅಮೆರಿಕಾ ದೇಶ. ಹಿಟ್ಲರ್‌ನ ಕ್ರೂರತನದ ವಿವರಗಳು, ಕಮ್ಯುನಿಸ್ಟರ ಪ್ರತಿರೋಧದ ವಿವರಗಳು ಕಾದಂಬರಿಯ ವಸ್ತುವಿನ ಒಳಗೇ ಅಡಕವಾಗಿರುವ ವಿಷಯವಾಗಿದೆ.

ದುಃಖದ ಆವೇಗ ಕಡಿಮೆಯಾದಾಗ ಅವಳ ಹುಡುಕಾಟದ ಇನ್ನೊಂದು ಆಯಾಮ ಆರಂಭವಾಯಿತು. ಅಕ್ಕ ರೆಬೆಕ್ಕಾಳನ್ನು ಎಲ್ಲೆಡೆ ಹುಡುಕಿ ಕೊನೆಯ ಪ್ರಯತ್ನವೆಂದು ಇಸ್ರೇಲ್‌ಗೆ ಹೋಗುವ ಸಿದ್ಧತೆ ತೋರಿಸಿದಳು. ಪ್ರವಾಸಿಗರಂತೆ ಹೋಗಿ ಆರಾಮಾಗಿ ದೇಶ ಸುತ್ತಿ ಬರುವುದನ್ನು ಬಿಟ್ಟು ಯುದ್ಧದ ಭೂಮಿಯಾದ ಇಸ್ರೇಲಿಗೆ ತಂದೆ-ತಾಯಿಯರನ್ನು ಕಳಿಸಲು ಮನಸ್ಸಿಲ್ಲದಿದ್ದರೂ ತಾಯಿಯ ಹಟದ ಮುಂದೆ ತಲೆಬಾಗಿದ ವಿಶು ಅದಕ್ಕೆ ವ್ಯವಸ್ಥೆ ಮಾಡಿದ.

ಟೆಲ್ ಆವೀವ್‌ಗೆ ಬಂದ ನಂತರ ಅನಿತಾಳ ಹುಡುಕಾಟ ಫಲ ಕೊಟ್ಟಿತು. ಅಕ್ಕ ರೆಬೆಕ್ಕಾ ಸಿಕ್ಕಳು. ಅವಳು ಅನುಭವಿಸಿದ ಕಷ್ಟಕೋಟಲೆಗಳ ವಿವರ ಎಂಥ ಕಲ್ಲು ಹೃದಯಗಳನ್ನೂ ಕರಗಿಸುವಂತಹದ್ದು, ನಡುಗಿಸುವಂತಹದ್ದು. ಅಲ್ಲಿಂದ ಪಾರಾಗಿ ಬಂದು ಅಲೆದಾಡಿ ಕೊನೆಗೆ ತಮ್ಮದೆಂದಾದ ಇಸ್ರೇಲ್‌ದಲ್ಲಿ ಬಂದು ಆಕೆ ನೆಲೆಸಿದ್ದಳು.

ಫ್ರೆಡಿಯೊಂದಿಗೆ ಮದುವೆ, ಡ್ಯಾನಿ, ಶಾಲೋಮ್, ಟೆರ್ರಿ ಮಕ್ಕಳು. ಹೀಗೆ ತುಂಬು ಸಂಸಾರ ಈಗ. ಆದರೆ ಅದೇ ಸಮಯದಲ್ಲಿ ಉಗ್ರಗಾಮಿಯೊಬ್ಬನ ಆತ್ಮಾಹುತಿ ಬಾಂಬಿಗೆ ಮೊಮ್ಮಗಳು ಮಾರ್ತಾಳನ್ನು ಕಳೆದುಕೊಂಡಿದ್ದಳು. ಅಕ್ಕನ ಭೇಟಿಯ ಸಂತೋಷದೊಡನೆ ಭಯೋತ್ಪಾದಕರ ದುಷ್ಕೃತ್ಯದಲ್ಲಿ ಮಡಿದ ಮೊಮ್ಮಗಳ ನೆನಪು, ಅಕ್ಕನ ಕಿರಿಮಗ ಟೆರ್ರಿಯ ವಿಚಾರಧಾರೆ ಅವಳ ಮನಸ್ಸಿನಲ್ಲಿ ತುಮುಲವನ್ನೆಬ್ಬಿಸಿತ್ತು.

ಪ್ಯಾಲೆಸ್ತೀನ್-ಇಸ್ರೇಲ್ ನಡುವಿನ ವೈರ, ಇತರ ಧರ್ಮಗಳ ಬಗ್ಗೆ ಅವನ ಹಾಗೂ ಇತರ ಯುವಕರ ಮನದಲ್ಲಿದ್ದ ದ್ವೇಷ ಇವನ್ನೆಲ್ಲ ಕಂಡ ಅನಿತಾಗೆ ಇದೆಲ್ಲ ಏಕೆ ಎನ್ನುವ ಪ್ರಶ್ನೆ ಅವಳ ಬುದ್ಧಿ, ಭಾವಗಳನ್ನು ಅಲುಗಿಸಿಬಿಟ್ಟಿತ್ತು. ತಾ ಕಂಡ, ಅನುಭವಿಸಿದ, ಕೇಳಿದ ಕ್ರೌರ್ಯ, ಅಕ್ಕನ ಯಾತನೆ, ವೇದನೆಗಳು ಸಾಲದೆಂಬಂತೆ ಮತ್ತೆ ಅವುಗಳನ್ನು ತಿರುಗಿ ಅನುಭವಿಸುವ ಧೈರ್ಯ, ಮನಸ್ಸು ಎರಡೂ ಇಲ್ಲ. ಮತ್ತದರ ಪುನರಾವರ್ತನೆ ಬೇಡ ಎಂದುಕೊಳ್ಳುತ್ತಿರುವಾಗಲೇ ಟೆರ್ರಿಯ ಮಗ ಡ್ಯಾನಿ ಇಸ್ರೇಲಿನ ಅಲ್ಲಿನ ಜನರ ಇನ್ನೊಂದು ರೂಪವನ್ನು ತೋರಿಸಿದ. 'ಶಾಂತಿಗೊಂಡು ಅವಕಾಶ ಕೊಡಿ' ಎಂದು ಘೋಷಣೆ ಬರೆದು

ಅವುಗಳನ್ನು ಹಿಡಿದು ನಿಂತ ಜನರ ಗುಂಪು. ಈಗ ಇದು ದೊಡ್ಡವಾಗುತ್ತಿದೆ. ಎಲ್ಲರೂ ಶಾಂತಿ–ಸಮಾಧಾನದಿಂದಿರಲು ಬಯಸುತ್ತಾರೆ ಎಂದು ಹೇಳುವ ಜನರನ್ನು ತೋರಿಸಿದಾಗ ಮನದ ಮೂಲೆಯಲ್ಲಿ ಕತ್ತಲನ್ನು ದೂರ ಓಡಿಸುವ ಜೆರುಸಲೇಮದ ಮಾಯಾದೀಪ ದುಂಡು ಮೊಂಬತ್ತಿಯನ್ನು ತೆಗೆದುಕೊಂಡು ಭಾರತಕ್ಕೆ ಹಿಂತಿರುಗಿದಳು. ಅವಳ ಹುಡುಕಾಟ ಮುಗಿದಿತ್ತು. ಮನಸ್ಸು ತಾಯಿ ಮತ್ತು ತಮ್ಮನ ಸಾವಿನಿಂದ ಮುದುಡಿದ್ದರೂ ಅಕ್ಕ ರೆಬೆಕ್ಕಾಳ ಸಂಸಾರ ಕಂಡು ಸಮಾಧಾನ ಹೊಂದಿತ್ತು.

ಒಂದು ವರ್ಷ ಕಳೆಯಿತು. ಜಗತ್ತಿನಲ್ಲಿ, ಭಾರತದಲ್ಲಿ ಘಟನೆಗಳು ನಡೆದಿದ್ದವು. ಗೋಧ್ರಾದ ನರಮೇಧದ ಪರಿಣಾಮವಾಗಿ ಬೆಂಗಳೂರಿಗೆ ಬಂದ ಅನೇಕರಲ್ಲಿ ಎದುರುಮನೆಯ ಕರುಣಾಕರ ಶೆಟ್ಟಿಯ ಪರಿಚಯದ ಸವಿತಾ ಒಬ್ಬಳು. ಅನಿತಾಳ ಬಳಿ ಕರೆತಂದು ನಿಮ್ಮ ಮನೆಯಲ್ಲಿರಲು ಅನುವು ಮಾಡಿಕೊಡಿ. ಕೆಲಸ ಸಿಕ್ಕೊಡನೆ ಬೇರೆಡೆ ಹೋಗುತ್ತಾಳೆ ಎನ್ನುತ್ತಾನೆ. ಆ ಸವಿತಾ ಇರತೊಡಗಿದಳು. ಆದರೊಂದು ದಿನ ಅವಳೊಬ್ಬ ಮುಸ್ಲಿಂ ಹುಡುಗಿ 'ಸಬೀಹಾ' ಎಂದು ಗೊತ್ತಾದಾಗ ಮಗ ವಿಶು ವಿಪರೀತ ಸಿಟ್ಟಿಗೆದ್ದು ಮನೆ ಮೈಲಿಗೆಯಾಯಿತು, ಅನ್ಯಾಯವಾಯಿತೆಂದು ಹಾರಾಡಿದಾಗ, ಅವಳನ್ನು ಹೊರಗಟ್ಟುವ ಮಾತುಗಳನ್ನಾಡಿದಾಗ ವಿವೇಕ ಅವನನ್ನು ಗೌರಿಪಾಳ್ಯದ ಯಹೂದಿ ಸ್ಮಶಾನಕ್ಕೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಒಂದು ಗೋರಿಯನ್ನು ತೋರಿಸಿ, 'ಇದು ನಿನ್ನ ತಾತನ ಡಾ. ಆರನ್ ಮೊಸೆಸ್‌ನ ಗೋರಿ. ನಿಮ್ಮಮ್ಮನ ತಂದೆ ಅಂದರೆ ಹ್ಯಾನಾಮೊಸೆಸ್‌ನ ತಂದೆ ಎಂದು ಹೇಳಿ ಇತಿಹಾಸದ ಪುಟಗಳನ್ನು ತೆರೆದಿಡುತ್ತಾನೆ. ಅಲ್ಲಿಂದ ಮನೆಗೆ ಬಂದ ವಿಶು ಪುಟ್ಟಮಗುವಿನಂತೆ ಅಮ್ಮನ ತೊಡೆಯ ಮೇಲೆ ಮಲಗಿ ಸಬೀಹಾ ತಮ್ಮ ಮನೆಯಲ್ಲೇ ಇರಲಿ ಎಂದು ಹೇಳುವುದರೊಂದಿಗೆ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

ವಿವೇಕನ ಸ್ವಗತದೊಂದಿಗೆ ಆರಂಭವಾಗುವ ಕಾದಂಬರಿ ಅನಿತಾ ಅಂದರೆ ಹ್ಯಾನಾ ಹಾಗೂ ವಿವೇಕ ಇವರಿಬ್ಬರ ವಿಚಾರ ಸರಣಿ, ನೆನಪು, ಮಾತುಗಳಲ್ಲೇ ಮೂಡಿಬಂದಿದೆ. ಸುಮಾರು ಹತ್ತು ವರುಷದವಳಿದ್ದಾಗ ಯುದ್ಧಪೀಡಿತ ಜರ್ಮನಿಯಿಂದ ಭಾರತಕ್ಕೆ ಬಂದ ಹ್ಯಾನಾ ಕೆಲವೇ ದಿನಗಳಲ್ಲಿ ಮತ್ತೆ ತನ್ನ ತಾಯಿ ಹಾಗೂ ತಾಯ್ನಾಡನ್ನು ಸೇರಿಕೊಳ್ಳುವ ನಂಬಿಕೆಯಲ್ಲಿ ದಿನ ಕಳೆಯುತ್ತಿದ್ದಾಗ ಬದುಕಿನ ಕೆಲ ಅನಿರೀಕ್ಷಿತ ತಿರುವುಗಳಿಂದ ಅನಿತಾಳಾಗಿ ಭಾರತದಲ್ಲಿ ಉಳಿಯಬೇಕಾಗಿ ಬರುತ್ತದೆ. ತನ್ನ ಮನಸ್ಸಿನ ತುಂಬ ಪ್ರಶ್ನೆಗಳನ್ನು ತುಂಬಿಕೊಂಡು ಮೌನವಾಗಿದ್ದಳು.

ಮದುವೆಯಾಗಿ ಇಷ್ಟು ವರುಷಗಳಾದರೂ ತನ್ನ ಪತ್ನಿಯನ್ನು ಅರಿಯದೇ ಹೋದ ವೇದನೆಯನ್ನು ಮನದಲ್ಲಿ ಹುದುಗಿಸಿಕೊಂಡ ವಿವೇಕ ಈ ಎರಡೂ ಪಾತ್ರಗಳಿಂದ ಕತೆ

ಕಟ್ಟಿಕೊಡುವ ರೀತಿ, ವಿವೇಕನ ಕುಟುಂಬ, ಸ್ನೇಹಿತರು, ಬಳಗ, ಸುತ್ತಲಿನ ಪರಿಸರ ಇವೆಲ್ಲವೂ ಈ ಕಾದಂಬರಿಯನ್ನು ಬೇರೊಂದು ಸ್ತರಕ್ಕೆ ಒಯ್ಯುತ್ತದೆ.

ಸಿಂಹಾವಲೋಕನ ತಂತ್ರದಲ್ಲಿ ಕಾದಂಬರಿ ವರ್ತಮಾನ ಇತಿಹಾಸದಲ್ಲಿ ಹರಡಿದೆ. ಈ ಕಾದಂಬರಿಯ ಹರವು ರಾಷ್ಟ್ರ-ಖಂಡಗಳ ಹರಹಿನದು. ಐತಿಹಾಸಿಕ ವಿಷಯಗಳನ್ನು ವರ್ತಮಾನದ ವಿಫುಲತೆಯೊಂದಿಗೆ ವಿವರಿಸುವುದರಿಂದ ಕಾದಂಬರಿಯ ನಿರೂಪಣಾ ವಿಧಾನಕ್ಕೆ ಭದ್ರವಾದ ಅಡಿಪಾಯ ದೊರೆತಿದೆ. ಸಂಕ್ರಮಣ ಕಾಲದಲ್ಲಿ ಸಾಗುತ್ತಿರುವ ಜಾಗತಿಕ ಸಮಸ್ಯೆಗಳನ್ನು ಹಿಡಿದಿಟ್ಟು ತಮ್ಮದೇ ಆದ ರೀತಿಯಲ್ಲಿ ಆಶಾವಾದದ ಹಿನ್ನೆಲೆಯಲ್ಲಿ ಪರಿಹಾರ ಕೊಟ್ಟಿರುವುದನ್ನು ಕಾಣುತ್ತೇವೆ

'ಯಾದ್ ವಶೇಮ್' ಕಾದಂಬರಿ ಅನೇಕ ರೀತಿಯಿಂದ ವಿಶಿಷ್ಟ ಕಾದಂಬರಿಯಾಗಿದೆ. ೧೯೩೩ರಲ್ಲಿ ಅಧಿಕಾರಕ್ಕೆ ಬಂದ ಹಿಟ್ಲರ್ ನಿಧಾನವಾಗಿ ತನ್ನ ಕಬಂಧ ಬಾಹುಗಳನ್ನು ಎಲ್ಲೆಡೆ ಹರಡಿ ಯಹೂದಿಯರ ನಿರ್ನಾಮಕ್ಕೆ ಹುನ್ನಾರ ನಡೆಸಿದ್ದ. ಮೇಧಾವಿಗಳಾದ ಯಹೂದಿಯರು ಜರ್ಮನಿಯನ್ನು ತನ್ನ ಕೈತಪ್ಪಿಸಿ ತಾವೇ ಆಳುತ್ತಾರೆನ್ನುವ ಭಯ. ಆದ್ದರಿಂದ ಅವರನ್ನು ನಾಮಶೇಷ ಮಾಡುವ ಎಲ್ಲ ಮಾರ್ಗಗಳನ್ನು ಅನುಸರಿಸಿದ. ನಾಝಿ ಸೈನ್ಯವನ್ನು ಹುಟ್ಟುಹಾಕಿ ಕ್ರೌರ್ಯಕ್ಕೆ ಹೊಸವ್ಯಾಖ್ಯೆಯನ್ನು ಬರೆದ.

ನಾಝಿಪಡೆಗಳು ಯಾತನಾ ಶಿಬಿರದಲ್ಲಿ ನಡೆಸಿದ ನರಮೇಧ ಸಂಶೋಧನೆಯ ಹೆಸರಿನಡಿ ನಡೆಸಿದ ದೌರ್ಜನ್ಯ. ಅಲ್ಲಿನ ಚಿತ್ರಹಿಂಸೆಗಳ ಕುರಿತಾದ ಅನೇಕ ಪುಸ್ತಕ, ಕಾದಂಬರಿಗಳು ಇಂಗ್ಲಿಷ್ ಹಾಗೂ ಇತರ ಭಾಷೆಗಳಲ್ಲಿ ಬಂದಿವೆ. ಚಲನಚಿತ್ರಗಳೂ ಇವೆ. ಆದರೆ ಈ ವಿಷಯ ಕುರಿತು ಬರೆದ ಕನ್ನಡದಲ್ಲಿ ಬಂದ ಮೊದಲ ಕಾದಂಬರಿ ಎನ್ನಬಹುದು. ನೇಮಿಚಂದ್ರ ಅವರು ವಿಷಯಕ್ಕೆ ಪೂರ್ತಿ ನ್ಯಾಯ ಒದಗಿಸಿದ್ದಾರೆ ಎಂದು ಹೇಳಬಹುದು.

ಕಾದಂಬರಿಯ ಕಥೆ ಇತಿಹಾಸ ಹಾಗೂ ವರ್ತಮಾನಗಳಲ್ಲಿ ಅಡ್ಡಾಡುತ್ತಿರುವುದರಿಂದ ಆ ಹಳೆಯ ಬೆಂಗಳೂರು, ಅದರ ಅಂದಿನ ಪರಿಸರ, ಜನರ ಜೀವನಶೈಲಿ, ಬದುಕಿನ ಮೌಲ್ಯಗಳು, ಕರಿಯಣ್ಣ ಉರ್ಫ-ಭೋಜರಾಜ, ಪತ್ನಿ ಗುಂಡಮ್ಮ, ಅವರ ಮಕ್ಕಳು, ಸುತ್ತಲಿನ ವಠಾರಗಳಲ್ಲಿ ವಾಸಿಸುತ್ತಿರುವ ವಿಭಿನ್ನ ಜಾತಿಯ ಜನ, ೧೯೪೧ರಲ್ಲಿ ಬೆಂಗಳೂರಿನಲ್ಲಿ ಆರಂಭವಾದ ವಿಮಾನ ಕಾರಖಾನೆ, ಅದರ ಮೊದಲ ನೌಕರ ಗುರಪ್ಪ, ಇತರ ಅಧಿಕಾರಿಗಳು, ಬೆಂಗಳೂರಿನ ವಾಚನಾಲಯಗಳು, ರಸೆಲ್ ಮಾರ್ಕೆಟ್ ಬಳಿ ಇದ್ದ ಯಹೋದ್ಯರ ಪ್ರಾರ್ಥನಾ ಸ್ಥಳ, ರೂಬೆನ್‌ಮನೆ ಅಂದಿನ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್', ಕನ್ನಡ ಸಾಹಿತ್ಯ ಪರಿಷತ್ತು ಹೀಗೆ ೧೯೩೫-೪೦ ಬೆಂಗಳೂರನ್ನು ಬಿಚ್ಚಿಟ್ಟಿದ್ದಾರೆ ನೇಮಿಚಂದ್ರ ಅವರು.

ತಮ್ಮ ತಮ್ಮ ಜಾತಿಯ ಬಗ್ಗೆ ಅಭಿಮಾನವಿದ್ದರೂ ಇತರ ಧರ್ಮಗಳನ್ನು ತಮ್ಮೊಂದಿಗೆ ತೂಗಿಸಿಕೊಂಡು ಹೋಗುವ ಮನೋಧರ್ಮ ಆಚರಿಸುತ್ತಿದ್ದ ವಿವಿಧ ಹಬ್ಬಗಳು. ಅವುಗಳ ಕಾರಣಗಳು. ಅವುಗಳ ಜನಪದ ಹಿನ್ನೆಲೆ, ಇವೆಲ್ಲವುಗಳ ವಿವರಗಳು ಕತೆಗೊಂದು ಮೆರಗು ಕೊಡುತ್ತವೆ. ಓದುಗರನ್ನು ಆ ಕಾಲದ ನೆಲೆಯಲ್ಲಿ ಒಯ್ದು ನಿಲ್ಲಿಸುತ್ತವೆ.

ಭಾರತೀಯ ಸಂಪ್ರದಾಯಗಳ ವಿವರಗಳಂತೆಯೇ ಯಹೂದ್ಯರ ಸಂಪ್ರದಾಯಗಳನ್ನು ಹ್ಯಾನಾ ಹಾಗೂ ಆರನ್ ಮೊಸೆಸ್ ಮುಖಾಂತರ ಬಿಡಿಸಿಡುವ ನೇಮಿಚಂದ್ರ ಅವರು 'ಮೆಸುಬಾ', 'ಸಬಾತ್' ಆಚರಣೆ, 'ಟಿಫಲಿನ್' ಎಡಕೈಗೆ ಕಟ್ಟಿಕೊಂಡು ಜರಿಯಂಚಿನ ಕುಚ್ಚುಗಳ 'ತಾಲಿತ್' ಹೊದ್ದು ಪಶ್ಚಿಮಕ್ಕೆ ಮುಖಮಾಡಿ ಸಲ್ಲಿಸುವ ಪ್ರಾರ್ಥನೆ 'ಸಿನೆಗಾನ್', ಜೆರೂಸಲೇಮಿನ 'ಗೋಳುಗೋಡೆ' ಇವೆಲ್ಲವುಗಳನ್ನು ನಮಗೆ ಪರಿಚಯಿಸುತ್ತಾರೆ.

ಮೊಸೆಸ್ ಕುಟುಂಬದ ಮುಖಾಂತರ ಜರ್ಮನಿಯಲ್ಲಿ ನಡೆದ ನರಮೇಧದ ವಿವಿಧ ರೂಪಗಳನ್ನು ಓದುಗರ ಮುಂದಿಟ್ಟು ಅಂದಿನ ಜರ್ಮನಿ ಅನುಭವಿಸಿದ ತುಮುಲವನ್ನು ಮೈನಡುಗಿಸುವ ರೀತಿಯಲ್ಲಿ ಬಿಡಿಸಿಟ್ಟಿದ್ದಾರೆ.

ಇಂದಿನ ಈ ಸಂಘರ್ಷಮಯ ಯುಗದಲ್ಲಿ ಜಾತಿ, ಧರ್ಮಗಳ ಹೆಸರಿನಲ್ಲಿ ನಡೆಯುತ್ತಿರುವ ಕಲಹಗಳು, ಬಡವರ, ದಲಿತರ ಶೋಷಣೆ ನಮ್ಮದಲ್ಲದ್ದನ್ನು ಕಸಿದುಕೊಳ್ಳುವ ಭಾವದ ಇಂತಹ ದಿನಗಳಲ್ಲಿ ಶಾಂತಿ, ಸಮಾಧಾನದ ಮಾತು ವಿಚಾರಗಳು ಆದರ್ಶವೆನಿಸುತ್ತವೆ. ಆದರೆ ಇಂತಹ ವಿಚಾರಗಳು ಜನರ ಮನದಲ್ಲಿ ಬಿಂಬಿಸುವಂತಹ ಮಾತುಗಳು ಮತ್ತೆ ಮತ್ತೆ ಕೇಳಿಬಂದರೆ ಅವುಗಳ ಪರಿಣಾಮವಾಗಿರಬಹುದು ಎನ್ನುವ ರೀತಿಯಲ್ಲಿ ನೇಮಿಚಂದ್ರರು ಅನಿತಾ, ರೆಬೆಕ್ಕಾ, ಆರನ್, ಡ್ಯಾನಿ ಹಾಗೂ ಜರ್ಮನಿಯ ಯಾದವಿ ಕಲಹದಲ್ಲಿ ನರಳಿ ಬದುಕಿದ ಅನೇಕರ ಮೂಲಕ ಮತ್ತೆ ಮತ್ತೆ ಪುನರುಚ್ಚರಿಸಿ, ಅದಕ್ಕೊಂದು ಹೊಸ ರೂಪ ಕೊಟ್ಟಿದೆ.

ಏನೂ ಅರಿಯದ ತಿಳಿಯದ ಬಷೀರ ಹೇಳಿದ 'ತಾನು ಸಾಯದೆ ಸಾವು ತರುವ' ಜನರ ಕತೆ, ಕೆನಡಾದಿಂದ ಬಂದಿಳಿದ ಯಹೂದಿ ಮಹಿಳೆ, ಮುಸ್ಲಿಂರನ್ನು ದ್ವೇಷಿಸುವ ಟೆರ್ರಿ, ಶೋಷಣೆಗೆ ಒಳಗಾದ ಜನರೇ ಮಾಡುತ್ತಿರುವ ಇನ್ನೊಂದು ಜನಾಂಗದ ಶೋಷಣೆ ಹೀಗೆ ಹತ್ತು–ಹನ್ನೆರಡು ಸಮಸ್ಯೆಗಳು ಮಾನವೀಯ ಅಂತೆಯೇ ಮಹಿಳಾ ಸಮಸ್ಯೆಗಳೂ ಹೌದು. ಒಂದೇ ದಿನದಲ್ಲಿ ಪರಿಹಾರ ಕಾಣದ ಸಮಸ್ಯೆಗಳು ಒಬ್ಬರಿಂದಲೇ ಬಿಡಿಸಲಾರದ ಸಮಸ್ಯೆಗಳು. ಆದರೆ ಸಮಸ್ಯೆಗಳಿಗೆ ನೇಮಿಚಂದ್ರರು ನೋಡುವ ದೃಷ್ಟಿಕೋನ, ಅವರು ಅದಕ್ಕೆ ನೀಡುವ ವಿಶಿಷ್ಟ ಪರಿಹಾರ ನಾವೆಲ್ಲರೂ ವಿಚಾರ ಮಾಡುವಂತಿವೆ.

ಅವರ ಕಾದಂಬರಿಯಿಂದಲೇ ಈ ವಿಚಾರಗಳನ್ನು ಎತ್ತಿಕೊಂಡರೆ ಅನಿತಾಳ ಮಾತುಗಳು "ನನ್ನ ಜನಾಂಗದ ಮೇಲೆ ಸಾವಿರ ಅತ್ಯಾಚಾರ ಮಾಡಿದ ಅವರೆಲ್ಲರನ್ನು ನಾನು ಕ್ಷಮಿಸಬೇಕು. ಅವರ ಉದ್ಧಾರಕ್ಕಲ್ಲ, ನನ್ನೊಳಗಿನ ತಳಮಳವನ್ನು ಶಾಂತಗೊಳಿಸಲು ಕ್ಷಮಿಸಬೇಕು. ಗೋಳುಗೋಡೆಯ ಮುಂದೆ, ನಾನು ನೂರು ಸಾವಿರ ಸಾವಿನ ನೆನಪಲ್ಲಿ ತೊಯ್ದುಹೋಗಿದ್ದೆ. ಸತ್ತ ತಾಯಿ ತಮ್ಮನನ್ನು ನೆನೆದು ಶೋಕಿಸಿದ್ದೆ. ಆದರೆ ನನ್ನ ದುಃಖ ಈ ಕ್ಷಣ ಆ ಎರಡು ಸಾವುಗಳದಾಗಿರಲಿಲ್ಲ."[೧೨]

ಅನಿತಾಳನ್ನು ಕಾಡಿದ್ದು ಇತಿಹಾಸದ ಸಾವುಗಳಲ್ಲ ; ವರ್ತಮಾನ ಸಾವುಗಳು, ಭವಿಷ್ಯದ ಸಾವುಗಳು. "ನಾನು ನಿನ್ನೆಗಳ ನೂರು ನೋವನ್ನು ಮರೆಯಲು ಸಿದ್ಧ. ಆದರೆ ನನಗೆ ನಾಳೆಗಳ ಭರವಸೆ ಬೇಕು. ಯಾವ ಕೂಸೂ ತನ್ನ ತಾಯ ಮಡಿಲಿಂದ ಅಗಲದ ನಾಳೆಗಳು ಬೇಕು. ಕಾಲ ಕಲಿಸಿದ ಪಾಠಗಳು ನೆನಪಿರಲಿ. ಇತಿಹಾಸ ಮತ್ತೆ ಮರುಕಳಿಸದಿರಲಿ ಎಂದು ಮನಸ್ಸು ಹಂಬಲಿಸುತ್ತದೆ."[೧೩]

ನಲವತ್ತರ ದಶಕದಲ್ಲಿ ಹೊತ್ತಿ ಉರಿದ ಜರ್ಮನಿಯನ್ನು, ಯಹೂದಿಗಳ ಜೀವಂತ ದಹನವನ್ನು ಕಣ್ಣಿಗೆ ಕಟ್ಟಿಸುತ್ತಾ 'ನಮ್ಮ ನಡುವೆಯೂ ಹುಟ್ಟಿಬಿಡಬಲ್ಲ, ನಮ್ಮೊಳಗೇ ಜನಿಸಿಬಿಡಬಲ್ಲ ಹಿಟ್ಲರ್‌ನನ್ನು ತಡೆಹಿಡಿವ ಹೊಣೆ ನಮ್ಮದು' ಎಂಬ ಎಚ್ಚರಿಕೆಯನ್ನು ಕೊಡುತ್ತಾರೆ ನೇಮಿಚಂದ್ರ ಅವರು.

'ಯಾದ್ ವಶೇಮ್' ಕಾದಂಬರಿಯಲ್ಲಿ ವರ್ಣಿಸಿರುವ ಆ ಭೀಭತ್ಸ ಘಟನೆಗಳೆಲ್ಲವನ್ನೂ ಕಣ್ಣ ಮುಂದೆ ತರುತ್ತವೆ. ಕನ್ನಡದಲ್ಲಿ ಪ್ರಕಟವಾಗಿರುವ ಈ ಕಾದಂಬರಿಯ ತಿರುಳು ಮತ್ತು ಆಶಯಗಳು ಅದೆಷ್ಟು ನೊಂದ ಜೀವಗಳಿಗೆ ಅರ್ಥವಾಗುತ್ತದೆಯೋ ಗೊತ್ತಾಗುವುದಿಲ್ಲ. ಆದರೆ ನೋವಿನ ನಡುವೆಯೂ ಆಶೆಯ ಗೋಪುರ ಕಟ್ಟುವ, ಯಾತನೆಯನ್ನು ಮರೆತು ಪ್ರೀತಿಯನ್ನು ಸಾರುವ, ಶಾಂತಿ ದೂತನಾಗುವ, ನೂರು ಸಾವಿರ ಸಾವಿನ ನೆನಪನ್ನು ಸುಂದರ ನಾಳೆಗಾಗಿ ತ್ಯಾಗಮಾಡುವ ಆಶಯವುಳ್ಳ ಈ ಕೃತಿ 'ಇಂಗ್ಲಿಷ್' ಮತ್ತು 'ಹೀಬ್ರೂ' ಭಾಷೆಗಳಿಗೆ ಭಾಷಾಂತರಗೊಂಡು ನಿಜವಾಗಿಯೂ ನೋವುಂಡಿರುವ ಲಕ್ಷ ಲಕ್ಷ ಯಹೂದ್ಯರಿಗೆ ತಲುಪಿದರೆ ನೇಮಿಚಂದ್ರ ಅವರು ಸ್ವಪ್ರಯತ್ನದಿಂದ, ಶ್ರಮಪಟ್ಟು ಪ್ರವಾಸಮಾಡಿ, ಮೌಲ್ಯಧಾರಿತವಾದ ಮಾಹಿತಿಗಳನ್ನು ಕಲೆಹಾಕಿ ರೂಪಗೊಂಡ ಕೃತಿಯು ಸಾರ್ಥಕ ಪಡೆದುಕೊಳ್ಳುತ್ತದೆ. ಜೊತೆಗೆ ದೇಶ ಮತ್ತು ಅಂತಾರಾಷ್ಟ್ರೀಯ ಪ್ರಶಸ್ತಿಗಳಿಗೆ ನಾಮಕರಣಗೊಳ್ಳುವುದರಲ್ಲಿ ಯಾವುದೇ ಸಂಶಯ ಎಲ್ಲ ಎಂದೇ ಹೇಳಬಹುದು.

ದೇವರ ಮನೆಯ ನಂದಾದೀಪದಲ್ಲಿ ಒಂದು ಕುಡಿ ಇದ್ದರೆ, ಯಹೂದಿಗಳ ಅಪರೂಪದ 'ಮಿನೋರಾ'ದಲ್ಲಿ ಏಳು ದೀಪಗಳು ಒಂದೆಡೆ ಇರುತ್ತವೆ. ಯಹೂದಿಗಳ

ವ್ಯಥೆಯ ಕಥೆಯನ್ನು ಏಳು ಸಾಗರ, ಏಳು ಖಂಡಗಳಿಂದ ಆಯ್ದು ತರಲಾಗಿದೆ. ಸಹಿಷ್ಣುತೆಯ ಪಾಠ ಹೇಳಿ, ಹರಿಯ ಹಂಚಿಹೋದ ಕುಟುಂಬದ ಮುಂದೆ ಎಲ್ಲ ಜಾತಿ ಧರ್ಮಗಳನ್ನೂ ತನ್ನೊಳಗೆ ಅಡಗಿಸಿಕೊಳ್ಳುವ ಭರವಸೆಯ ಬೆಳಕನ್ನು ತೋರಿಸಿದೆ. ನಂದಾದೀಪದ ಬಗಲಲ್ಲಿ ಜೆರೊಸಲೇಂನ 'ಮಾಯಾದೀಪ' ಮಿನೋರಾ ಬೆಳಗಿಸಿ, ನೂರು ಸಾವಿರ ಸಾವಿನ ನೆನಪನ್ನು ಸಹ್ಯವಾಗಿಸಿ ನಾಳಿನ ಬದುಕಿಗೆ ದಾರಿದೀಪವಾದ 'ಯಾದ್ ವಶೇಮ್' ನಮ್ಮೆಲ್ಲರನ್ನೂ ಇತಿಹಾಸದ ಪುಟಗಳ ಬಳಿ ಕರೆದೊಯ್ಯುತ್ತದೆ. ಅಲ್ಲದೆ ಈ ಕೃತಿ ಮುಂದಿನ ಜನಾಂಗಕ್ಕೊಂದು ದಾಖಲೆ ತೆಗೆದಿರಿಸಿದಂತಾಗುತ್ತದೆ. ಮಾನವತಾವಾದಿಗಳು ಓದಲೇಬೇಕಾದ ಕೃತಿಯಾಗಿದೆ.

ಕಲ್ಪನೆ ಮತ್ತು ವಾಸ್ತವತೆಯನ್ನು ಸರಿಸಮವಾಗಿ ಬೆರೆಸಿ ರಚಿಸಿದ ಈ ಕಾದಂಬರಿಯಲ್ಲಿ ವಾಸ್ತವತೆ ಕೆಲ ಬಾರಿ ಮೇಲುಗೈ ಸಾಧಿಸುತ್ತದೆ ಏನೋ ಎನ್ನಿಸುತ್ತದೆ. ಜರ್ಮನಿಯ ಪರಿಸ್ಥಿತಿ, ಅಲ್ಲಿನ ವಿಜ್ಞಾನಿಗಳ ಸ್ಥಿತಿಗತಿ, ಯಾತನಾ ಶಿಬಿರಗಳಲ್ಲಿ ಕೈದಿಗಳು ಅನುಭವಿಸಿದ ಯಾತನೆ ಇವೆಲ್ಲ ಕೆಲಬಾರಿ ಕಥಾಹಂದರವನ್ನು ಮೀರಿ ಹೋಗುತ್ತಿವೆ ಎನ್ನಿಸುತ್ತದೆ. ಶೈಲಿ, ಭಾವಪೂರ್ಣ ವಾಕ್ಯಗಳು, ಭಾವನಾ ಪ್ರಧಾನ ವಿಚಾರಗಳೂ, ಆ ಮೊನಚನ್ನು ಕಡಿಮೆಮಾಡುತ್ತವೆ. ಒಟ್ಟಿನಲ್ಲಿ 'ಯಾದ್ ವಶೇಮ್' ಓದುಗರಿಗೆ ಒಂದು ವಿಭಿನ್ನ ಅನುಭವವನ್ನು ಪ್ರವಾಸ ವಿನ್ಯಾಸದ ಕಥನಗಳ ಅಧ್ಯಯನವನ್ನು ಕೊಡುವ ಕಾದಂಬರಿಯಾಗಿದೆ ಎಂದು ಹೇಳಬಹುದು.

**ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು**

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಣ್ಣಕತೆಗಳು ಒಂದು ಸ್ವತಂತ್ರವಾದ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ. ಇಪ್ಪತ್ತನೇ ಶತಮಾನದ ಕೊನೆಯ ದಶಕಗಳಲ್ಲಿ ಸಣ್ಣಕತೆಗಳು ಬೆಳೆಯತೊಡಗಿದವು. ಆಗಿನ ಬಹಳಷ್ಟು ಲೇಖಕರು ಸಣ್ಣಕತೆಗಳನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿಸಿಕೊಂಡು ಮುಂಚೂಣಿಗೆ ಬರತೊಡಗಿದರು. ಅವರುಗಳಲ್ಲಿ ನೇಮಿಚಂದ್ರರವರು ವಿಭಿನ್ನವಾಗಿ ನಿಲ್ಲುತ್ತಾರೆ. ಕನ್ನಡ ಸಾಹಿತ್ಯ ಕೃಷಿ ಕ್ಷೇತ್ರಕ್ಕೆ ನೇಮಿಚಂದ್ರರವರ ಸಣ್ಣಕತೆಗಳು ಅತ್ಯಮೂಲ್ಯವಾದ ಕೊಡುಗೆಯನ್ನು ಕೊಟ್ಟಿದೆ.

ಆಧುನಿಕ ಕನ್ನಡ ಕತೆಗಾರ್ತಿಯರಲ್ಲಿ ನೇಮಿಚಂದ್ರ ಪ್ರಮುಖರು. ಸರಳ ಹಾಗೂ ವಿಶಿಷ್ಟ ನಿರೂಪಣಾ ಶೈಲಿಯಲ್ಲಿ ತಮ್ಮದೇ ಆದ ಛಾಪು ಮೂಡಿಸಿರುವಂಥವರು. ಅವರ ಕತೆಗಳನ್ನು ಅಧ್ಯಯನ ಮಾಡಿದಾಗ ವಿವಿಧ ಜೀವನ ವಿನ್ಯಾಸಗಳ ದರ್ಶನ ನಮಗೆ ಉಂಟಾಗುತ್ತದೆ. ಅದು ಗಂಭೀರವೂ ಉದಾತ್ತವೂ ಆಗಿರುವುದು ವಿಶೇಷ. ಈ

ಅಧ್ಯಾಯದಲ್ಲಿ ಅವರ ಕತೆಗಳಲ್ಲಿ ಕಂಡುಬಗುವ ಪ್ರವಾಸ ಅನುಭವವನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ.

ನೇಮಿಚಂದ್ರ ಅವರಲ್ಲಿ ಒಂದು ಕತೆ ಬರಿಯ ಕತೆ ಮಾತ್ರವಾಗಿರದೆ ಆಯಾ ಕಾಲದ ಸಮಕಾಲೀನ ಬದುಕನ್ನು ಒಳಗೊಂಡಿರುತ್ತದೆ. ಭಾವನೆ, ಚಿಂತನೆ, ಅಂತರಂಗದ ತಳಮಳ, ಸಂಸ್ಕೃತಿ, ಮೊದಲಾದ ವಿಚಾರಗಳ ಆಳ ವಿಶ್ಲೇಷಣೆಯನ್ನು ಇವರ ಕತೆಗಳು ಕೈಗೊಳ್ಳುತ್ತವೆ. ಅದೇ ರೀತಿ ಪ್ರವಾಸ ಕೂಡ ಕತೆಗಳಲ್ಲಿ ಸ್ಥಾನ ಪಡೆದುಕೊಳ್ಳುತ್ತವೆ. ಅವರ ಹಲವು ಕತೆಗಳು ಪ್ರವಾಸದ ವಿನ್ಯಾಸದಲ್ಲಿ ಒಡಮೂಡಿವೆ ಅಥವಾ ಆ ತಂತ್ರದಲ್ಲಿ ಜೀವನವನ್ನು ಮುಖಾಮುಖಿಯಾಗುತ್ತವೆ. ಅದನ್ನು ಅಧ್ಯಯನ ಮಾಡುವ ಮುಖಾಂತರ ಒಂದು ನಿರ್ದಿಷ್ಟ ಸನ್ನಿವೇಶಗಳ ಬಗ್ಗೆ ನೇಮಿಚಂದ್ರರವರು ಹೊಂದಿರಬಹುದಾದ ನಿಲುವುಗಳೇನು ಎಂಬುದನ್ನು ತಿಳಿಯಬಹುದು. ಅದಕ್ಕಾಗಿ **‘ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು’** ಎಂಬ ಕೃತಿಯಲ್ಲಿರುವ ಆಯ್ದ ಕತೆಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಇಲ್ಲಿರುವ ಕೆಲವು ಕತೆಗಳಲ್ಲಿ ಪ್ರವಾಸವು ಪ್ರಮುಖವಾದ ಸ್ಥಾನವನ್ನು ಪಡೆದುಕೊಳ್ಳುವುದನ್ನು ಕಾಣಬಹುದು. ಅವರ ಪ್ರವಾಸಿ ಬರಹಗಳಲ್ಲಿ ಕಥನಗುಣವೂ, ಕಥನ ಸಾಹಿತ್ಯದಲ್ಲಿ ಪ್ರವಾಸಿ ವಿನ್ಯಾಸ ಹಾಗೂ ದರ್ಶನವೂ ಮೇಳೈಸಿದಂತೆ ಮೂಡಿಬಂದಿವೆ. ಪ್ರಸ್ತುತ ಈ ಅಧ್ಯಾಯದಲ್ಲಿ ಅಂತಹ ಕೆಲವು ವಿಶಿಷ್ಟ ಕತೆಗಳನ್ನು ಆಯ್ದು ಚರ್ಚಿಸಲಾಗಿದೆ.

‘ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು’ ಎಂಬ ಕೃತಿಯಲ್ಲಿ ಒಟ್ಟು ಆರು ಕಥೆಗಳನ್ನು ಪ್ರವಾಸದ ಹಿನ್ನೆಲೆಯಲ್ಲಿ ಕಾಣಬಹುದು. ಆ ಕಥೆಗಳೆಂದರೆ, ಮರಳಿ ಬದುಕಿಗೆ ಈ ಪಯಣ, ತಣ್ಣನೆಯ ಕಣಿವೆಯಲಿ ಒಂದು ಪ್ರೀತಿಯ ಕನಸು, ಬದುಕು ಕಾಯುವುದಿಲ್ಲ, ನೆನಪಿನಂಗಳದಲ್ಲಿ ನೂರು ಚಿತ್ತಾರ, ನೆನಪುಗಳು ನೋಯಲಿಲ್ಲ, ಮತ್ತೆ ಮತ್ತೆ ಬರೆದ ಕವನಗಳು – ಹೀಗೆ ಬರೆದ ಕಥೆಗಳಲ್ಲಿ ಪ್ರವಾಸಕ್ಕೆ ಇರಬಹುದಾದ ಸಂಸ್ಕೃತಿಯ ಮುಖಾಮುಖಿಯ ವಿಶಾಲ ಭಿತ್ತಿಯನ್ನು ಕಾಣಬಹುದು.

ವೃತ್ತಿಯಿಂದ ತಂತ್ರಜ್ಞರಾಗಿ ಪ್ರವೃತ್ತಿಯಲ್ಲಿ ಸಾಹಿತಿಯಾಗಿರುವ ನೇಮಿಚಂದ್ರರವರ ಕತೆಗಳು ಸದಾ ಚಿಂತನೆಗೆ, ವಿಚಾರಸಂಕಿರಣಕ್ಕೆ ವಿಮರ್ಶೆಗೆ ಹಚ್ಚುವಂತಹವು. ಯಾವುದೇ ವಿಷಯವನ್ನು ವಿಶಿಷ್ಟ ಪ್ರಕಾರದಲ್ಲಿ ಚಿಂತನೆ ನಡೆಸಬಹುದು ಎಂಬುದನ್ನು ಇವರ ಕತೆಗಳು ಕಟ್ಟಿಕೊಡುತ್ತವೆ. ಸ್ತ್ರೀವಾದಿ ಧೋರಣೆಯುಳ್ಳ, ಜೊತೆಗೆ ಕ್ವಚಿತ್ತಾಗಿ ಹೆಣ್ತನ ತಾಯ್ತನ ಕಾಣಿಸಿಕೊಳ್ಳುವ ಜೊತೆಗೆ ಕ್ರಿಯಾಶೀಲ ಮಹಿಳೆಯರ ಕತೆಗಳನ್ನು ಗುರುತಿಸಬಹುದು.

ಉದ್ಯೋಗಸ್ಥ ಮಹಿಳೆಯರ ಯಾಂತ್ರಿಕ ಬದುಕಿನಲ್ಲಿನ ಬಗೆಗಿನ ಕಾತುರ ತಳಮಳಗಳನ್ನು ಇವರ ಕಥೆಗಳಲ್ಲಿ ಕಾಣಬಹುದು.

ಪ್ರವಾಸ ಅನುಭವವನ್ನು ಜೀವನದ ನೈಜ ಸ್ಥಿತಿಯೊಡನೆ ದಾಖಲಿಸುವ, ಚಿತ್ರಿಸುವ ಕೃತಿಯಾಗಿ ಕಾದಂಬರಿ ಕಂಡುಬಂದರೆ, ಕಥೆಯೊಳಗೆ ಪ್ರವಾಸ ವಿನ್ಯಾಸವನ್ನು ತರುವುದರ ಮೂಲಕ ಮನಸ್ಸಿನ ಪರಿಪಕ್ವತೆ ಎಡೆಗೆ ನಮ್ಮನ್ನು ಎಳೆದೊಯ್ಯುವುದನ್ನು ಕಾಣಬಹುದು.

**ಮರಳಿ ಬದುಕಿಗೆ ಈ ಪಯಣ........**

ಈ ಕತೆಯಲ್ಲಿನ ಸುಧಾ ಕನ್ನಡ, ಇಂಗ್ಲಿಷ್, ಜರ್ಮನ್, ಫ್ರೆಂಚ್ ಭಾಷೆಗಳಲ್ಲಿ ಚಟಪಟ ಮಾತನಾಡುವ ಹುಡುಗಿ. ಸುಧಾ ಕೆಲಸ ಮಾಡುವ ಕಂಪನಿಗೆ ಫ್ರೆಂಚ್ ಫರ್ಮ್ ಒಂದು ಬಂದಾಗ, ಇಂಗ್ಲಿಷ್ ಬಾರದೆ ಅವರು ತಡವರಿಸುವಾಗ, ಅವರದೇ ಭಾಷೆಯಲ್ಲಿ ಮಾತನಾಡುವ, ನೀಡಿದ 'ಪ್ರಾಜೆಕ್ಟ್ ಪ್ರೊಪೋಸಲ್ ಪ್ರೆಸೆಂಟೇಷನ್' ಅನ್ನು ಸರಾಗವಾಗಿ ದಂಗಾಗಿಸುವಂತೆ ಮಾಡುವ ಚಾಕಚಕ್ಯತೆ ಅವಳದು. ಒಂದು ದಿನವೂ ರಜೆ ಹಾಕದೆ, ಪುರುಸೊತ್ತಿಲ್ಲದೇ ದುಡಿಯುವವಳು ; ಕೆಲಸಕ್ಕೆ ಸಂಬಂಧಿಸಿದಂತೆ ಸದಾ ಜೆಟ್ ವೇಗದ ದಿನಚರಿ ಅವಳದಾಗಿತ್ತು.

ಆದರೆ ಒಂದು ದಿನ ವಾಕಿಂಗ್‌ಗೆ ಹೋದವಳು ಅಪಘಾತವಾಗಿ ಹಿಂದಿನದೆಲ್ಲಾ ಮರೆತುಬಿಡುತ್ತಾಳೆ. ಅತ್ಯಂತ ಚಟುವಟಿಕೆಯಿಂದ, ಲವಲವಿಕೆಯಿಂದ ಕೂಡಿದ್ದ ಸುಧಾಳ ಬದುಕು ಮಗುವಿನಂತೆ ಆಗಿಬಿಟ್ಟಾಗ ಅವಳ ಪತಿ ರಿಪುದಮನ್‌ಸಿಂಗ್ ಮಾತ್ರ ಅವಳ ಸೇವೆ ಮಾಡುತ್ತಾ, ಮಗುವಿನಂತೆ ನೋಡಿಕೊಳ್ಳುತ್ತಾ ಇರುತ್ತಾನೆ. ಅವಳ ನೆನಪಿನ ಶಕ್ತಿ ಬರುವಿಕೆಗಾಗಿ ಅನೇಕ ಪ್ರಯತ್ನವನ್ನು ಮಾಡುತ್ತಾನೆ.

ಸುಧಾಳನ್ನು ಅವಳ ತವರಿಗೆ ಕರೆದೊಯ್ದು, ಅವಳು ಆಡಿ ಬೆಳೆದ ಸ್ಥಳ, ಮನೆ ಮತ್ತು ಜಾಗವನ್ನು ತೋರಿಸುತ್ತಾ ಹೇಳುವಾಗ ಅದನ್ನು ಕತೆಯೆಂಬಂತೆ ಕೇಳುತ್ತಾಳೆ. ಇದ್ನೆಲ್ಲಾ ಪಂಜಾಬಿನ ಪತಿಯಾದ ರಿಪುದಮನ್‌ಗೆ ಅವಳೇ ಹೇಳಿದ ಕತೆಯಾಗಿರುತ್ತದೆ. ತವರಿನ ಬಾಲ್ಯ ನೆನಪುಗಳು, ಪರಿಸರ, ಸಂಪ್ರದಾಯ, ಮುನಿಸಿಕೊಂಡಂತಹ ನೆನಪುಗಳನ್ನು ಪರಿಚಯಿಸಿದ್ದ ಸುಧಾಳಿಗೆ ಈಗ ಎಲ್ಲವೂ ಅಪರಿಚಿತವಾಗಿ ಕಾಣುತ್ತದೆ.

ಅನಂತರ ರಿಪುದಮನ್ ತನ್ನ ಸ್ಥಳವಾದ ಅಮೃತಸರಕ್ಕೆ ಕರೆದುಕೊಂಡು ಹೋದಾಗ ಅವರ ಅಮ್ಮ-ಅಪ್ಪ ಅವಳ ಸ್ಥಿತಿಯನ್ನು ನೋಡಿ ಮರುಕವನ್ನು ವ್ಯಕ್ತಪಡಿಸದೆ ಮಗನ ಬಾಳು ಹಾಳಾಯಿತಲ್ಲ ಎಂದು ವ್ಯಥೆಪಡುತ್ತಾರೆ. ಮಗನಿಗೆ ಮಾನಸಿಕ ಧೈರ್ಯವನ್ನು ನೀಡದೆ ಸಿಪಾಯಿ

ಆಗಿದ್ದರೂ ರಣಹೇಡಿಯಂತೆ ಮಾತನ್ನಾಡಿ ಅವಳನ್ನು ಹೀಗಳೆದು ವಂಶೋದ್ಧಾರದ ಬಗ್ಗೆ ಎಚ್ಚರಿಸುತ್ತಾರೆ.

ರಿಪುದಮನ್ ಸಿಂಗ್ ಮಾತ್ರ "ತನ್ನ ಸುಧಾಳ ಬದುಕು ಯುದ್ಧವಲ್ಲ, ವಿಧಿಗೆ ಎದುರು ನಿಂತ ಯುದ್ಧ. ನನ್ನ ಹುಡುಗಿ ಬದುಕಿದ್ದಾಳೆ, ಅವಳನ್ನು ಸಾವಿಗೊಪ್ಪಿಸಿ ನಾನು ಸೋತು ಹಿಂತಿರುಗುವುದಿಲ್ಲ" ಎಂದು ಭರವಸೆಯ ನುಡಿಯನ್ನಾಡುತ್ತಾನೆ.

ಹುಟ್ಟಿ ಬೆಳೆದ ತವರನ್ನ ಮರೆತವಳಿಗೆ ಅತ್ತೆ ಮನೆ ನೆನಪಿಗೆ ಬರುವುದಿಲ್ಲ. ಆದರೆ ಅಮೃತಸರದಲ್ಲಿ ಅನೇಕ ಸ್ಥಳಗಳಿಗೆ ಭೇಟಿ ನೀಡಿದಾಗ ಅವಳ ಕಣ್ಣಿನಲ್ಲಿದ್ದ ಕಾತುರತೆಯನ್ನು ರಿಪು ಗಮನಿಸುತ್ತಾನೆ. ಇದು ಅವನಲ್ಲಿರುವ ಆಶಾಭಾವನೆಯನ್ನು ತಿಳಿಸುತ್ತದೆ.

ಇಬ್ಬರು ರೈಲಿನಲ್ಲಿ ಕುಳಿತು ಪ್ರಯಾಣ ಮಾಡುವಾಗ ಸುಧಾ ರಿಪುವನ್ನು "ಎಲ್ಲಿಗೆ"? ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ರಿಪು "ಮರಳಿ ಬದುಕಿಗೆ ಸುಧಾ ಈ ಪಯಣ, ಮರಳಿ ಬದುಕಿಗೆ" ಎಂದು ಹೇಳುತ್ತಾನೆ. ಅವನ ಈ ಧ್ವನಿಯಲ್ಲಿ ಪ್ರವಾಸದ ಮೂಲಕ ಅವಳ ನೆನಪನ್ನು ಪುನಃ ಬದುಕಿಗೆ ಮರಳಿ ತರಲು ಪ್ರಾಮಾಣಿಕ ಪ್ರಯತ್ನವನ್ನು ಕಾಣಬಹುದು.

ಸುಧಾಳಿಗೆ ಆಸರೆಯಾಗಿ ನಿಂತು ತನ್ನ ಊರಾದ ಮೈಸೂರಿಗೆ ಕರೆತರುತ್ತಾನೆ. ಈ ಸಂದರ್ಭದಲ್ಲಿ ಸುಧಾಳಿಗೆ, "ನಿನ್ನ ಪಕ್ಕದಲ್ಲಿ ಸದಾ ನಾನಿರುತ್ತೇನೆ. ನಿನ್ನೊಡನೆ ಜೊತೆ ನಿಂತು ಹೋರಾಡುತ್ತೇನೆ" ಎಂದು ಮನಸ್ಸಿನಲ್ಲಿ ಹೇಳಿಕೊಳ್ಳುವಾಗ ಅವನ ಎದೆಯ ಭಾರ ಇಳಿದು ನಿರಾಳವಾಗುತ್ತದೆ. ಅವನ ಬದುಕಿಗೊಂದು ಹೊಸ ಅರ್ಥ, ಉದ್ದೇಶ, ಧ್ಯೇಯ ಸಿಕ್ಕಿದಂತಾಗುತ್ತದೆ. ಸುಧಾ ಬದುಕನ್ನು ನಿನ್ನೆ ಮೊನ್ನೆಯವರೆಗೂ ದೊಡ್ಡ ದುರಂತವೆನಿಸಿದ್ದು, ಇಂದು ರಿಪುವಿಗೆ ಸವಾಲು ಎನಿಸಿ, ಛಲದಿಂದ ಎದುರಿಸುವ ಉತ್ಸಾಹವುಂಟಾಗುತ್ತದೆ.

ಹೀಗೆ ಕತೆಯುದ್ದಕ್ಕೂ ಸುಧಾಳನ್ನು ಮತ್ತೆ ಬದುಕಿಗೆ ಕರೆತರುವ ಪ್ರಯತ್ನದಲ್ಲಿ ಪ್ರವಾಸ ಪ್ರಮುಖ ಪಾತ್ರವಹಿಸುತ್ತದೆ. ಕತೆಯುದ್ದಕ್ಕೂ ಅನೇಕ ಸ್ಥಳಗಳಿಗೆ ಭೇಟಿ ನೀಡಿ, ನೆನಪುಗಳನ್ನು ಮರುಕಳಿಸಲು ಭೂತ ವರ್ತಮಾನಕ್ಕೆ ಕೊಂಡಿಯಂತೆ ಪ್ರವಾಸವು ವಿನ್ಯಾಸಗೊಂಡಿದೆ. ಬದುಕಿನ ಅತ್ಯಂತ ನಿಧಾನಗತಿಯಲ್ಲೂ ಅದಕ್ಕೊಂದು ವೇಗೋತ್ಕರ್ಷ ತುಂಬಲು ಪ್ರವಾಸ ಹೇಗೆ ನೆರವಾಗುತ್ತದೆಂಬುದು ಈ ಕತೆಯ ಮೂಲಕ ಸಾಕಾರಗೊಳ್ಳುತ್ತದೆ.

**ತಣ್ಣನೆಯ ಕಣಿವೆಯಲ್ಲಿ ಒಂದು ಪ್ರೀತಿಯ ಕನಸು**

ಈ ಕತೆಯಲ್ಲಿ 'ಲೇ–ಲದಾಕ್' ಎಂಬ ಜಾಗದ ಪರಿಸರ, ಭೌಗೋಳಿಕ ಹಿನ್ನೆಲೆ, ಅದರ ಗುಣಲಕ್ಷಣಗಳು, ಹವಾಮಾನ ವೈಪರೀತ್ಯ, ಜನಜೀವನ, ಸಾಂಸ್ಕೃತಿಕ ಪರಂಪರೆ, ಜಪದ

ವಿಚಾರಗಳು, ಮೂಢನಂಬಿಕೆಗಳು, ಲದಾಕಿ ವ್ಯಕ್ತಿಗಳ ಪ್ರೀತಿಯ ಭಾವನೆ, ಚಳಿಗಾಲ, ಮಳೆಗಾಲದ ಬೇಸಿಗೆಕಾಲದ ವಿಶಿಷ್ಟ ಅನುಭವಗಳು ಕತೆಯುದ್ದಕ್ಕೂ ಹಾಸುಹೊಕ್ಕಾಗಿ ಕಂಡುಬರುತ್ತದೆ.

ಈ ಕತೆಯಲ್ಲಿ ಬೆಂಗಳೂರಿನ ಹುಡುಗಿ ಲದಾಕಿ ವ್ಯಕ್ತಿಯನ್ನು ಪ್ರೀತಿಸಿ ಅವನನ್ನು ಕಾಣಲು 'ಲೇ ಲದಾಕ್‌ಗೆ ಹೋಗಿ ಅಲ್ಲಿನ ಪರಿಸರ ಮತ್ತು ಹವಾಮಾನ ವೈಪರೀತ್ಯಕ್ಕೆ ಬೇಸತ್ತು, ಮರಳಿ ಬೆಂಗಳೂರಿಗೆ ವಾಪಾಸಾಗುತ್ತಾಳೆ. ಕರ್ನಾಟಕದಲ್ಲಿ ಇಲ್ಲಿನ ಸ್ಥಳೀಯ ಪರಿಸರ, ಆಚಾರ–ವಿಚಾರಗಳು, ಸಾಂಸ್ಕೃತಿಕ ಪರಂಪರೆಗಳೊಂದಿಗೆ ಬೆಳೆದ ಹುಡುಗಿ 'ಲೇ' ಎಂಬ ಸ್ಥಳದ ಆಚಾರ–ವಿಚಾರ ಸಾಂಸ್ಕೃತಿಕ ಪರಂಪರೆಗೆ ಅಲ್ಲಿನ ಹವಾಮಾನ, ಪರಿಸರಕ್ಕೆ ಹೊಂದಿಕೊಳ್ಳುವಲ್ಲಿ ಆಗುವಂತಹ ಕಷ್ಟಗಳನ್ನು ಮತ್ತು ಪ್ರೀತಿಭಾವನೆಗಳನ್ನು ಈ ಕತೆಯ ಪ್ರವಾಸದ ಹಿನ್ನೆಲೆಯಲ್ಲಿ ಗುರುತಿಸಬಹುದು.

"ಲೇ" ಎಂಬ ಸ್ಥಳಕ್ಕೆ ಬೆಂಗಳೂರಿನ ಹುಡುಗಿ ತಾನು ಇಷ್ಟಪಟ್ಟಿದ್ದ ಹಿಮಾಂಕನನ್ನು ಅವನ ಪರಿಸರದಲ್ಲಿ, ಅವನ ಬದುಕಿನ ಭಾಗವಾಗುವ ಭವಿಷ್ಯದ ಕನಸಿನಲ್ಲಿ, ಹಿಮ ಸುರಿವ ಶಿಶಿರ ಋತುವಿನಲ್ಲಿ ನೋಡಬಯಸುತ್ತಾಳೆ. "ಲೇ" ಎಂಬುದು ತಣ್ಣನೆಯ ಕಣಿವೆಯಲ್ಲಿ ಮಲಗಿದ್ದ ಪುಟ್ಟ ಊರು. ಕೊರೆವ ಮರಳುಗಾಡು, ಗಿಡವಿಲ್ಲ, ಮರವಿಲ್ಲ, ಸುತ್ತಲೂ ಬೋಡುಬೆಟ್ಟಗಳು, ಅದರಾಚೆಗೆ ಮುಗಿಲ ಸ್ಪರ್ಶಿಸಿ ನಿಂತ ಶುಭ್ರಬಿಳಿಯ ಹಿಮವತ್ ಪರ್ವತಗಳು. ಇದು ಈ ಹುಡುಗಿಗೆ ಅದ್ಭುತ ದೃಶ್ಯವಾಗಿ ಕಂಡುಬರುತ್ತದೆ.

ಈ ದೆಸೆಯಲ್ಲಿ ಲೇ.ನ. ವ್ಯಕ್ತಿಗಳ ವ್ಯಕ್ತಿತ್ವದ ನಿಲುವುಗಳನ್ನು ಹಿಮಾಂಕನ ಪಾತ್ರದಲ್ಲಿ ಕಾಣಬಹುದು. ಯಾವುದೇ ತರಹದ ಅವಸರ, ಆತುರ, ತಳಮಳ, ಚಡಪಡಿಕೆ ಇಲ್ಲದ ವ್ಯಕ್ತಿಯನ್ನು ಬೆಂಗಳೂರಿನ ಹುಡುಗಿ ಪ್ರೀತಿಸುವಂತಹದ್ದು, ಮೆಚ್ಚುವಂತಹದ್ದು. ಅವನ ಹಿನ್ನೆಲೆಯಲ್ಲಿ ಅವನ ಪರಿಸರದಲ್ಲಿ, ಅವನ ಬದುಕಿನ ಭಾಗವಾಗುವ ಭವಿಷ್ಯದ ಕನಸಿನಲ್ಲಿ ಹಿಮಾಂಕನನ್ನು ನೋಡಬಯಸಿದ್ದುದು ಹಿಮದ ಕಾಲದಲ್ಲಿ. 'ಲೇ'ಗೆ ಬಂದ ಬೆಂಗಳೂರಿನ ಹುಡುಗಿಯ ಬಗ್ಗೆ ಅಪಾರವಾದ ಕಾಳಜಿಯನ್ನು ಹಿಮಾಂಕ ತೆಗೆದುಕೊಳ್ಳುತ್ತಾನೆ.

ಆದರೆ ಆಕೆ ಅವನೊಂದಿಗೆ ಅಲೆದಾಡುತ್ತಾ, ತಣ್ಣನೆಯ ಕಣಿವೆಯಲಿ ಶೀತಲ ಸೂರ್ಯ, ಬಿಸಿ ಇಲ್ಲದ ಶಾಖ ಮರೆತ ನಿಶ್ಶಕ್ತ ಸೂರ್ಯ, ಆದರೆ ಕಣ್ಣುಕುಕ್ಕುವಂತೆ ಪ್ರಖರ ಬೆಳಕಿನ ನಡುವೆ ತನ್ನ ಒಳಗೆ ಪ್ರಶ್ನೆಗಳಿಗೆ ನಿರ್ಧಾರಗಳಿಗೆ ವಾಸ್ತವದ ಪರಿಸರದ ಮೂಲಕ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡುತ್ತಾಳೆ. ಹಿಮಾಂಕನ ಜೊತೆ ಕೊನೆಯ

ತನಕ ಇರಲು ಬಂದವಳು ಮನಸ್ಸು ಬದಲಾಯಿಸಿಕೊಳ್ಳುತ್ತಾಳೆ. 'ಲೇ'ಗೆ ಬಂದು ಹತ್ತು ದಿನಗಳ ನಂತರ ಅವಳ ಮನಸ್ಸು ಮಾತ್ರ ಬೆಂಗಳೂರಿನ ಕಡೆಗೆ ಮುಖ ಮಾಡಿತ್ತು.

ಲೇ. ನ ಪರಿಸರದಲ್ಲಿ ಕಂಡುಬರುವ ಕತ್ತಲ ಗುಹೆಗಳು, ಹಿಮವತ್ಪರ್ವತಗಳು, ಸಿಂಧೂ ಕಣಿವೆಯ ಅದ್ಭುತನೆಲ, ಗುಡ್ಡಗುಡ್ಡಗಳ ಮೇಲೆ ಕಟ್ಟಿ ನಿಲ್ಲಿಸಿದ ಶಾಂತ ಗೊಂಪಾಗಳು, ಬೌದ್ಧ ದೇವಾಲಯಗಳು, ಬುದ್ಧನ ಭವ್ಯಮೂರ್ತಿಗಳು, ಮೈತ್ರೇಯಿ ಬುದ್ಧ, ಹತ್ತು ತಲೆಗಳ ಸಹಸ್ರ ಕೈಗಳ ಅವಲೋಕಿತೇಶ್ವರ, ಬುದ್ಧನ ರೂಪಗಳಾಗಿದ್ದವು. ಇವೆಲ್ಲವೂ ಎದೆಯಲ್ಲಿ ಉದ್ವೇಗ ಸಂಭ್ರಮಕ್ಕೆ ಕಾರಣವಾಗಿದ್ದರೂ, ಆದರೆ ಆರಂಭದ ಉತ್ಸಾಹ ಬಹಳ ದಿನ ಉಳಿಯಲಿಲ್ಲ. ಯಾವುದು ವಾಸ್ತವತೆ, ಏನು ಬೇಕು? ಮನಸ್ಸಿಗೆ, ಹೃದಯಕ್ಕೆ, ಏಕೋ ಕಳೆದುಕೊಂಡ ಕಸಿವಿಸಿ ಶುರುವಾಯಿತು. 'ಹಿಮಾಂಕ್' ನಾನು ಹೊರಡಬೇಕು ಎಂದು ಬಲುಪ್ರಯಾಸದಿಂದ ಹೇಳುತ್ತಾಳೆ.

"ರಾತ್ರಿಯಿಡಿ ಕನಸಿನ ನಡುವೆ, ದೇಹ ಆತ್ಮದ ನಡುವೆ ನೂರು ಬಯಕೆಯ ನಡುವೆ ಜೀವ ಚಡಪಡಿಸಿತು. ಹಿಮಾಂಕ್ ನಿನ್ನಲ್ಲಿ ಕೊರತೆಗಳಿಲ್ಲ. ನನ್ನ ಪ್ರೀತಿಗೆ ಮಿತಿ ಇರಬಹುದು. ನಿನ್ನ ನೆಲದಲ್ಲಿ ನಿನ್ನೆಗಳಿವೆ. ನೆನಪುಗಳಿವೆ, ನನ್ನ ನಾಳೆಗಳು ಇಲ್ಲಿಲ್ಲ"[೧೪] ಬಿಸಿಲ ನೆಲದಲ್ಲಿ ಚಿಗುರೊಡೆದ ಪ್ರೀತಿ, ತಣ್ಣನೆಯ ಕಣಿವೆಯಲ್ಲಿ ಕರಗಿತ್ತು.

ವಾಸ್ತವದಲ್ಲಿ ಸಾಧ್ಯವಾಗದಿದ್ದಾಗ ಕನಸಿನಲ್ಲಿ ಮಾಡುವ ಪ್ರಯತ್ನ ಮನಸ್ಸಿನದಾಗಿರುತ್ತದೆ ಇವಳಿಗೆ. ಹಿಮಾಂಕನನ್ನು ಅವನ ಬೆಟ್ಟಗಳಿಂದ ಕಸಿದುಕೊಳ್ಳುವುದು. ಅವನ ಈ ನಿಧಾನದ ನೆಮ್ಮದಿಯ ಬದುಕಿನಿಂದ ಕಿತ್ತುಕೊಂಡು ಬೆಂಗಳೂರಲ್ಲಿ ತಂದು ನೆಡುವುದು ಕ್ರೌರ್ಯವಾಗಿ ಕಂಡುಬರುತ್ತದೆ. ಹಿಮಾಂಕನನ್ನು ಅವನ ಹಿನ್ನೆಲೆಗೆ ಹಿಮವತ್ಪರ್ವತಗಳಿಗೆ ಒಪ್ಪಿಸಿ ಹೊರಡುತ್ತಾಳೆ. ಬೆಟ್ಟದಾಚಿನ ಜಗಕ್ಕೆ ಹೊರಟು ಹೋದ ಮೇಲೆ ಇವನು ನನ್ನ ನೆನೆಯುತ್ತಾನೆಯೇ ಎಂದು ಅವಳ ಮನಸ್ಸು ಕೇಳಿಕೊಳ್ಳುತ್ತದೆ.

ಹೀಗೆ ಈ ಕತೆಯ ಉದ್ದದ್ದೂ "ಲೇ" ಸ್ಥಳದ ಬಗ್ಗೆ ಅಲ್ಲಿಯ ವಾತಾವರಣ, ಆಚಾರ–ವಿಚಾರ, ಉಡುಗೆ–ತೊಡುಗೆ, ರೀತಿ–ನೀತಿಗಳು ಇಲ್ಲಿಗೆ ಒಗ್ಗದೆ ಪ್ರೀತಿಯನ್ನು ಹಿಮಾಂಕನನ್ನು ಅರಸಿ ಬಂದವಳು, ತಣ್ಣನೆಯ ಕಣಿವೆಯಲ್ಲಿ, ಬೋಡು ಬೆಟ್ಟಗಳಲ್ಲಿ ಒಪ್ಪಿಸಿ ಹೋಗುವಂತಹದ್ದು ಮತ್ತು ತನ್ನ ಪ್ರೀತಿಯ ಕನಸ್ಸನ್ನು ಆ ಸ್ಥಳದಲ್ಲಿ ಬಿಟ್ಟುಹೋಗುತ್ತಾಳೆ. ಇಲ್ಲಿ "ಲೇ" ಎಂಬ ಜಾಗ ಪ್ರೀತಿಯ ಅದ್ಭುತದ ಪ್ರಾರಂಭ ಸಾಕ್ಷಿಯಾಗುತ್ತದೆ. ಆನಂತರದಲ್ಲಿ ಅದೇ ಸ್ಥಳ ಪ್ರೀತಿಯನ್ನು ಅವಳಲ್ಲಿ ಶಾಶ್ವತವಾಗಿ ಉಳಿಸಿಕೊಳ್ಳಲು ಸಾಧ್ಯವಾಗದೇ ಕೇವಲ

ಕನಸಾಗಿಸಿಕೊಳ್ಳುವ ಒತ್ತಡವನ್ನು ತರುತ್ತದೆ. ಒಟ್ಟಿನಲ್ಲಿ ಈ ಕತೆಯಲ್ಲಿನ ಪ್ರವಾಸವು ಅವಳ ಪಾಲಿಗೆ ಅರಿವಿನ ಪಯಣವಾಗುತ್ತದೆ.

**ಬದುಕು ಕಾಯುವುದಿಲ್ಲ**

ಈ ಕತೆಯಲ್ಲಿ ಪ್ರಕೃತಿ ವರ್ಣನೆಯು ವಿವರವಾಗಿ ಕತೆಗೆ ಹಿನ್ನೆಲೆಯಾಗಿ ಚಿತ್ರಣಗೊಂಡಿದೆ. ಆ ಮೂಲಕ ಪ್ರಕೃತಿಯ ವರ್ಣನೆ ಕಥಾವಸ್ತುವಿನ ಮಹತ್ವವನ್ನು ಎತ್ತಿಹಿಡಿಯುತ್ತದೆ. ಈ ದೆಸೆಯಲ್ಲಿ ಕಥಾನಾಯಕ ಸಂಯುಕ್ತ ನಕ್ಷತ್ರಗಳ ಬಗೆಗೆ, ಇರುಳ ಬಗೆಗೆ, ತೀವ್ರಾಸಕ್ತಿ ತೋರುತ್ತಾಳೆ. ಸಾಗರವನ್ನು, ಕಡಲನ್ನು ನೋಡುವಾಗ ಮೈಮನಸ್ಸನ್ನು ಮರೆತು ಬೆರಗಾಗುವಂತೆ ಏಕಾಂತದಲ್ಲಿ, ಮೌನದಲ್ಲಿ ಸೌಂದರ್ಯವನ್ನು ತುಂಬಿಕೊಳ್ಳುತ್ತಾಳೆ.

ಆದರೆ ಪಕ್ಕದಲ್ಲಿದ್ದ ಗಂಡನ ಮನಸ್ಥಿತಿಗೂ ಆಕೆಯ ಮನಸ್ಥಿತಿಗೂ ಅಪಾರ ವ್ಯತ್ಯಾಸವಿದೆ. ಆಕೆಯಲ್ಲಿರುವ ಪ್ರಕೃತಿಯ ರಮಣೀಯತೆಯನ್ನು ಸುಂದರ ಸಂಜೆಯನ್ನು ಆಸ್ವಾದಿಸುವ ಸಹೃದಯತೆ ಗಂಡನಾದ ವಿಶೂನಲ್ಲಿ ಕಾಣುವುದಿಲ್ಲ. ಇದು ಇವರಿಬ್ಬರ ನಡುವಿನ ಮನಸ್ಥಿತಿ. ಕುಟುಂಬದ ಮನಸ್ಥಿತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೇ ಕೇವಲ ಎರಡು ದಿನಕ್ಕೆ ಗೋವಾಕ್ಕೆ ಬಂದಿದ್ದರೂ ಕಛೇರಿಯ ಬೇತಾಳವನ್ನು ಹೆಗಲ ಮೇಲೆ ಸದಾ ಹೊತ್ತೇ ತಿರುಗುತ್ತಿರುತ್ತಾನೆ. ಪ್ರವಾಸದ ತುಂಬಾ ಕಛೇರಿಯ ವಿಷಯಗಳನ್ನು ಹೇಳುತ್ತಾ, ಕುಟುಂಬವನ್ನು ಮೈಮರೆಯುವಂತಹದ್ದು ನಗರದ ಬದುಕಿನ ವಿಪರ್ಯಾಸವೆಂಬಂತೆ ಗೋಚರಿಸುತ್ತದೆ.

ಸಂಯುಕ್ತ ತನ್ನ ಎರಡು ದಶಕದ ದಾಂಪತ್ಯದಲ್ಲಿ ವಿಶೂ ಜೊತೆಯಲ್ಲಿ ಹೆಚ್ಚು ಹೊತ್ತು ಕಳೆಯಲು ಸಾಧ್ಯವಾಗುವುದಿಲ್ಲ. ಮಗನಾದ ಮುನ್ನನ 'ಸ್ಪೋರ್ಟ್ಸ್ ಡೇ'ಗೆ ಮಧ್ಯಾಹ್ನ ಬಂದು ಬಿಡು ಸಾಕು ಎಂದು ಸಂಯುಕ್ತ ಕೇಳಿಕೊಂಡರೂ ವಿಶೂಗೆ ಇದು ಯಾವುದು ಮುಖ್ಯವಾಗಿ ಕಾಣುವುದಿಲ್ಲ. ವಿಶೂ ಮುನ್ನಗಿನ್ನೂ ಜ್ವರ ಬಿಟ್ಟಿಲ್ಲ. ಮೂರು ದಿನದಿಂದ ನಾನು ಆಫೀಸಿಗೆ ಹೋಗಿಲ್ಲ. ಆದರೆ ಇವತ್ತು ಫಾರೀನ್ ಡೆಲಿಗೇಷನ್ ಬರ್ತಾ ಇದೆ. ನಾನು ಹೋಗಲೇ ಬೇಕು. ನಾನು ಒಂದು ದಿನ ರಜೆ ಹಾಕು ಪ್ಲೀಸ್' ಎಂದು ಸಂಯುಕ್ತ ಹೇಳಿದಾಗ ಹರಿಕತೆ ತೆಗೀಬೇಡ ಒಂದು ಪ್ರಾಜೆಕ್ಟ್ ಡೈರಕ್ಟರ್ ಅಂದರೆ ಸುಮ್ಮನೆ ಅಲ್ಲ ಎಂದು "ನನ್ನ ಕೆಲಸ ಇರೋದೇ ಹಾಗೆ....." ಎಂದು ಕೂಗಾಡುತ್ತಾ ಉತ್ತರಕ್ಕೂ ಕಾಯದೆ ಹೊರ ನಡೆಯುತ್ತಾನೆ.

ಮರಳ ಮೇಲೆ ಮಲಗಿದಂತೆ ಸಂಯುಕ್ತಾಳ ಕಣ್ಣ ಮುಂದೆ ಸುಳಿದ ಇಂಥ ಅವೆಷ್ಟೋ ಚಿತ್ರಗಳಲ್ಲಿ ವಸ್ತು ಒಂದೇ ಆಗಿದ್ದರೂ, ಸಂದರ್ಭ ಮಾತ್ರ ಬೇರೆ ಆಗಿತ್ತು. ಬಹುಶಃ ಮೊದಲ

ಬಾರಿಗೆ ವಿಶೂವನ್ನು ಎರಡು ದಿನ ಪೂರಾ, ಅವನ ಕಛೇರಿಯೊಡನೆ ಹಂಚಿಕೊಳ್ಳದೆ ತಾನು ಪಡೆದಿರುವುದೇ ಪವಾಡವೆನಿಸಿತು.

ಹೋಟಲ್ಲಿಗೆ ಬಂದೊಡನೆ ಫೋನು ಎತ್ತಿಕೊಂಡು ಕಛೇರಿಯ ಲೈನ್ ಸಿಗದಾಗ ಎತ್ತಿ ಕುಕ್ಕಿ ಬಂದು ಹಾಸಿಗೆಯ ಮೇಲೆ ಬಿದ್ದುಕೊಂಡಾಗ 'ವಿಶೂ, ನೀನಿಲ್ಲದೆ ಕಛೇರಿ ನಡೆಯೊಲ್ಲವಾ?' ನಿನ್ನ ಮರಣ ಶಯ್ಯೆಯಲ್ಲಿ "ನಾ ಕಛೇರಿಯಲ್ಲಿ ಹೆಚ್ಚು ಸಮಯ ಕಳೆಯಲಿಲ್ಲ ಎಂದು ವಿಷಾದಿಸುವೆಯಾ?" ಎಂದು ಸಂಯುಕ್ತಾ ನಕ್ಕು ಹೇಳಿದಳು – ಆದರೆ ಗಾಬರಿಯಾಗಬೇಡ, ಇದು ನನ್ನ ಪ್ರಶ್ನೆಯಲ್ಲ ಸ್ಟೀಫನ್ ಕೋವಿದು. ಆದರೆ ನಿನ್ನ ಉತ್ತರ ಕೇಳಬಹುದಲ್ಲ ಎನ್ನುತ್ತಾಳೆ.

ರೇಸ್‌ನ ಕುದುರೆಯಂತೆ ಕಣ್ಣಿಗೆ ಅಡ್ಡಪಟ್ಟಿಕೊಂಡು ಓಡುವ ಜಾಯಮಾನ ನನ್ನದಲ್ಲ. ನನಗೆ ವೇಗ ಮುಖ್ಯವಲ್ಲ. ನಾವು ನಡೆಯುವ ಗುರಿ, ಉದ್ದೇಶಗಳೇ ಮುಖ್ಯ ಎನ್ನುವುದು ಸಂಯುಕ್ತಳ ಆಂತರಿಕ ತುಮುಲಗಳನ್ನು ಬಿತ್ತರಿಸುತ್ತದೆ. ಹಿಂದೊಮ್ಮೆ ಬಸ್ಸು ಘಟ್ಟದ ಹಾದಿಯ ಬಸ್ಸು, ಎತ್ತಿ ಕುಲುಕುವ ಬಸ್ಸಿನಲ್ಲಿ ನಿಂತು ಕಾಲು ಸೋತ ನಲ್ಲೆಯ ಬೆನ್ನಿಗೆ ತನ್ನ ಬಾಹುಗಳ ಆಸರೆ ನೀಡುತ್ತಾ ಅವ ಹೇಳಿದ್ದ, 'ನಲ್ಲೆ ಈ ಹಾದಿಯಲ್ಲಿ ನೀ ಮತ್ತೆ ಬರುವೆ, ನಿಂತು ನಿಂತು ನಡೆವ ಈ ನೇತಾಡುವ ಬಸ್ಸಿನಲ್ಲಲ್ಲ, ನಮ್ಮದೇ ಬೆನ್ಜ್ ಕಾರಿನಲ್ಲಿ? ಅವನು ಮಾತು ಉಳಿಸಿಕೊಳ್ಳುತ್ತಾನೆ. ಆದರೆ ಹತ್ತು ವರ್ಷಗಳ ನಂತರ ಆಕೆ ಅದೇ ಹಾದಿಯಲ್ಲಿ ಬಂದಿದ್ದಳು. ಅವನು ಕೊಂಡುಕೊಟ್ಟ ಕಾರಿನಲ್ಲಿ, ಆದರೆ ಬಗಲಲ್ಲಿ ಅವನಿರಲಿಲ್ಲ. 'ಲಕ್ಷಾಂತರ ರೂಪಾಯಿ ಪ್ರಾಜೆಕ್ಟ್'ನಲ್ಲಿ ಮುಳುಗಿದ್ದ. ಅವನು ಆ ಹಾದಿಯಲ್ಲಿ ಹೊರಟಿದ್ದೇ ಅವಳಿಗಾಗಿ. ಅವನ ದುಡಿಮೆಗೆ ಕೇವಲ ಅವಳ ಖುಷಿ ಗುರಿಯಾಗಿತ್ತು.

ಆದರೆ ಆ ಹಾದಿಯಲ್ಲಿ ಹೆಜ್ಜೆ ಹಾಕುತ್ತಾ ಅವನ ಮೂಲ ಉದ್ದೇಶ ಎಲ್ಲೋ ಮಸುಕಾಯಿತು. ಅವಳು, ಕುಟುಂಬ ಎಲ್ಲವೂ ನೇಪಥ್ಯಕ್ಕೆ ಸರಿದು ಹಣವನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಎಲ್ಲಿಯೂ ನಿಲ್ಲದೆ, ವಿಶ್ರಾಂತಿಗೊಳ್ಳದೆ ಬಿಡುವಿಲ್ಲದೆ ಹೊರಟು ತನಗೆ ತಾನೇ ಸ್ಪರ್ಧಿಯಾಗಿ ಯಶಸ್ಸೇ ಮುಖ್ಯ ಉದ್ದೇಶವಾಯಿತು. ಹಣದ ವ್ಯಾಮೋಹಕ್ಕೆ ಬಲಿಯಾದಂತಹ ವ್ಯಕ್ತಿಗೆ ಪ್ರೀತಿ, ಆದರಗಳು, ಭಾವನೆಗಳು ಬೇಕಾಗಿರುವುದಿಲ್ಲ. ಹಣವೇ ದೊಡ್ಡಪ್ಪ, ಅದಿಲ್ಲದ ಜೀವನವನ್ನು ಆತ ಊಹಿಸಿಕೊಳ್ಳಲು ಇಷ್ಟಪಡುವುದಿಲ್ಲ. ಹಣಕೇಂದ್ರಿತ ಮಾರುಕಟ್ಟೆ ವ್ಯವಸ್ಥೆಯ ಜಾಗತೀಕರಣವು ಮನುಷ್ಯನನ್ನು ಎಂತಹ ಯಂತ್ರವನ್ನಾಗಿಸಿದೆ ಎಂಬುದನ್ನು ಈ ಕತೆ ಸೂಕ್ಷ್ಮವಾಗಿ ತೆರೆದಿಡುತ್ತದೆ.

ಈ ನಿಟ್ಟಿನಲ್ಲಿ ಗಂಡನಾದವನು ಹೆಂಡತಿಯ ಭಾವನೆಗಳಿಗೆ, ಅಭಿಪ್ರಾಯಗಳಿಗೆ ಬೆಲೆಕೊಟ್ಟು ಕೆಲಸದ ಜೊತೆಜೊತೆಗೆ ಕುಟುಂಬಕ್ಕೂ ಅದಮ್ಯ ಪ್ರೀತಿಯನ್ನು ಆಧರವನ್ನು ಕೊಡಬೇಕಾಗಿದೆ. ಹಿಂದಿನ ಕಾಲದಲ್ಲಿ ತೃಪ್ತ ಬದುಕು ಇರುತ್ತಿತ್ತು. ಇಲ್ಲಿ ಅತೃಪ್ತ ಜೀವನವನ್ನು ಸಾಗಿಸುತ್ತಿದ್ದೇವೆ. ಆದರೆ ಆಧುನಿಕ, ವೈಜ್ಞಾನಿಕ, ಪಾಶ್ಚಿಮಾತ್ಯ ಸಂಪ್ರದಾಯವನ್ನು ನಮಗೆ ಗೊತ್ತಿಲ್ಲದೆ ಅಪ್ಪಿಕೊಂಡಿರುವುದು ದೌರ್ಭಾಗ್ಯವೇ ಸರಿ. ಉದ್ವಿಗ್ನಗೊಂಡ ಮನಸ್ಸನ್ನು ಸಮಾಧಾನಗೊಳಿಸಿಕೊಂಡು ಹೋಗಬೇಕಾಗಿದೆ.

ಈ ಕತೆಯಲ್ಲಿ ಪ್ರವಾಸವು ದಂಪತಿಗಳನ್ನು ಒಗ್ಗೂಡಿಸುವ ಭಾವನೆಯನ್ನು ಹಂಚಿಕೊಂಡು ಆತುರದ ಬದುಕಿಗೆ ಸ್ವಲ್ಪ ಕಾಲ ಬಿಡುಗಡೆ ನೀಡಿ ಒಂದಾಗಿಸುವ ಪ್ರಯತ್ನವನ್ನು ಮಾಡುತ್ತದೆ ಎಂದು ಹೇಳಬಹುದು. "ಸಂಬಂಧಗಳು, ಕ್ಷಣದಲ್ಲಿ ಬೆಸೆಯೋಲ್ಲ, ವರ್ಷ ವರ್ಷಗಳ ಸೂಕ್ಷ್ಮನೇಯ್ಗೆಯ ಹೆಣಿಗೆ ಸಂಬಂಧ"[೧೫] ಇದನ್ನು ಸಂಯುಕ್ತಾ ನಿರಾಯಾಸವಾಗಿ ಹೊತ್ತು ನಿಂತರೆ, ವಿಶೂ ಏದುಸಿರಿಟ್ಟು ವೃತ್ತದಲ್ಲಿ ಸುತ್ತುತ್ತಿರುವಂತೆ ಕತೆಯಲ್ಲಿ ಭಾಸವಾಗುತ್ತದೆ. ಹಗಲು ಇರುಳುಗಳು ಕೇವಲ ಕಣ್ಣರೆಪ್ಪೆಯಲ್ಲಡಗಿವೆ. ಅದರಿಂದ ಅಂತರಂಗ ಕಣ್ಣು ಬಿಟ್ಟಾಗಲೇ ಬೆಳಕು ಆವರಿಸುತ್ತದೆ ಎಂಬುದನ್ನು ನೇಮಿಚಂದ್ರ ಅವರು ಸಂಯುಕ್ತಾ ಪಾತ್ರದ ಮೂಲಕ ಎಚ್ಚರಿಸುತ್ತಾರೆ.

**ನೆನಪಿನಂಗಳದಲ್ಲಿ ನೂರು ಚಿತ್ತಾರ**

ಈ ಕತೆಯಲ್ಲಿ ಹದಿಹರೆಯದ ಹುಡುಗಿಯರು ಕಾಣುವ ಆಸೆಗಳು, ಕನಸುಗಳು, ಅದರ ತಾತ್ಕಾಲಿಕ ವೈಫಲ್ಯ-ಶಮನ ಮುಂತಾದ ವಿಚಾರಗಳು ಕಿಕ್ಕಿರಿದಿವೆ. ತಾಯಿಯಾದವಳು ಹದಿಹರೆಯದ ಮಗಳ ಜೊತೆ ಸ್ನೇಹಿತೆಯಂತೆ ಬೆರೆತು ಭಯವನ್ನು ಹೋಗಲಾಡಿಸಿ ಭವಿಷ್ಯದ ಬಗ್ಗೆ ಚಿಂತಿಸುವಂತೆ ಮಾಡುವುದು ಪ್ರಸ್ತುತ ಕತೆಯ ಕಥಾವಸ್ತು. ಇಲ್ಲಿನ ತಾಯಿ ಹದಿಹರೆಯದಲ್ಲಿ ಉಕ್ಕುವಂತಹ ಪ್ರೀತಿ, ಪ್ರೇಮವೆಂಬ ಉದ್ವಿಗ್ನಗಳಿಗೆ ಬಿದ್ದು ತನ್ನ ಮಗಳ ಜೀವನ ಹಾಳಾಗುವುದನ್ನು ತಪ್ಪಿಸಲು ಪ್ರವಾಸವನ್ನು ಏರ್ಪಡಿಸುವುದು, ಆ ಮೂಲಕ ತನ್ನ ಹಿಂದಿನ ಜೀವನದ ಘಟನೆಗಳನ್ನು ವಿವರಿಸುತ್ತಾ, ಮಗಳನ್ನು ಸಹಜ ಸ್ಥಿತಿಗೆ ತರುವುದು ವಿಶಿಷ್ಟವಾಗಿದೆ.

ಈ ಕತೆಯಲ್ಲಿ ಮಗಳು ಬೇಬಿ ಪ್ರೇಮಪಾಶಕ್ಕೆ ಸಿಲುಕಿ ಮನುವಿನ ನಿರಾಕರಣೆಯಿಂದ ಕಂಗೆಟ್ಟು ನಿಂತಿದ್ದಾಗ ತಾಯಿ ಪ್ರಬುದ್ಧವಾಗಿ ಸ್ನೇಹಿತೆಯಂತೆ ವರ್ತಿಸುತ್ತಾಳೆ.

"ನನ್ನಜ್ಜ ನನ್ನಮ್ಮನ ಒಳದನಿಗಳು ನನ್ನ ತಲುಪಲೇ ಇಲ್ಲ ಬೇಬಿ. ಆದರೆ ನನ್ನ-ನಿನ್ನ ನಡುವೆ ಈ ಪರಂಪರೆಯ ಪರದೆ ಏಕೆ? ಹೆಣ್ಣು-ಹೆಣ್ಣಿನ ಅನುಭವಗಳ ಸರಮಾಲೆಯ ಅನಂತ ಎಳೆಯ ಕೊಂಡಿಯಾಗೋಣ, ಬಾ ಹಂಚಿಕೊಳ್ಳೋಣ"[೧೬] ಎಂದು ಮಗಳನ್ನು ತನ್ನ ಗತಕಾಲದ ಬಾಲ್ಯಕ್ಕೆ ಕೊಂಡೊಯ್ಯುತ್ತಾಳೆ.

ತನ್ನ ಹಳೆಯ ಪ್ರೇಮಿಗಳನ್ನೇ ಪರಿಚಯಿಸುತ್ತಾ, ಬದುಕು ಹೇಗೆ ನಿಂತ ನೀರಾಗದೆ ಹರಿಯುತ್ತಿದೆ ಎಂಬ ಪರಿಚಯ ಮಾಡಿಸುತ್ತಾಳೆ. ಆ ಮೂಲಕ ಅಳುತ್ತಾ ಖಿನ್ನತೆಗೆ ಒಳಗಾದ ಮಗಳು ಬದಲಾಗುವಲ್ಲಿ ಸಹಕಾರಿಯಾಗುತ್ತಾಳೆ. ಮಕ್ಕಳನ್ನೇ ದಂಡಿಸದೆ ಅವರ ಸಮವಾಗಿ ನಿಂತು ನೀನು ಪಡುತ್ತಿರುವ ದುಃಖ ನನ್ನದು. ಅದರಿಂದ ಹೊರ ಬಾ ಸಮಯವಿದೆ ಹೊರ ಬಾ ಎಂದು ಮಗಳನ್ನು ಹುರಿದುಂಬಿಸುತ್ತಾಳೆ.

ಆಸ್ತಿ, ಅಂತಸ್ತು, ಉದ್ಯೋಗ, ಡಿಗ್ರಿ ಇವುಗಳಿಗೆ ತೂಗಿ ನೋಡುವಂತಹ ಸ್ಪರ್ಧೆ ಇಂದು ನಡೆಯುತ್ತಿದೆ. ವ್ಯಾವಹಾರಿಕ ಸಂಬಂಧಗಳಿಗೆ ಪ್ರೀತಿ, ಮನಸ್ಸು, ಭಾವನೆಗಳನ್ನು ಅರ್ಥ ಮಾಡಿಕೊಳ್ಳಲಾಗುತ್ತಿಲ್ಲ. ಪ್ರೀತಿಯಲ್ಲಿ ಜೀವನವನ್ನು ವಿಸ್ತರಿಸುವ ಶಕ್ತಿ ಇದೆ ಮತ್ತು ಸಾವಿನತ್ತ ಕರೆದುಕೊಂಡು ಹೋಗುವಷ್ಟು ಕಠಿಣತೆಯೂ ಕೂಡ ಇದೆ.

ಈ ದಿಸೆಯಲ್ಲಿ ತಾಯಿ ಅವಳ ಭೂತಕಾಲದ ಘಟನೆಗಳನ್ನು ತೋರಿಸುತ್ತಾ ವಿವರಿಸಿದಾಗ ಬೇಬಿಗೆ ಅರಿವಾಗುತ್ತವೆ. ಅನುಭವಗಳನ್ನು ತೋರಿಸುವುದರ ಜೊತೆಗೆ ಅಭಿವ್ಯಕ್ತಿಸುವಿಕೆಯಲ್ಲಿ ಅವರಲ್ಲಿರುವಂತಹ ಉದ್ವಿಗ್ನತೆಗಳನ್ನು ಹೋಗಲಾಡಿಸಿ ಒಳ್ಳೆಯ ವ್ಯಕ್ತಿತ್ವವನ್ನು ಇವುಗಳ ಮುಖೇನ ಬೆಳೆಸಬಹುದು.

ತಾಯಿಯ ಪ್ರೀತಿಯಲ್ಲಿ ನೋವಿಲ್ಲ, ತುಡಿತವಿಲ್ಲ, ವಿಷಾದವಿಲ್ಲ, ಸ್ನೇಹದ ಸವಿ ಕಂಪು ಮಾತ್ರ ಹೇಳುತ್ತಾಳೆ. "ಬೇಬಿ, ನನಗೆ ಗೊತ್ತಿತ್ತು ಬದುಕಿನಲ್ಲಿದ್ದಂಥ ತುಂಟ ಕ್ಷಣಗಳು ಎದುರಾಗುತ್ತವೆಂದು ಆ ಕ್ಷಣದ ರೋಮಾಂಚನಕ್ಕೆ ತೆತ್ತುಕೊಂಡರೆ ಬಹಳಷ್ಟು ಕಳೆದುಕೊಳ್ಳುವೆನೆಂದು ನಿಯಂತ್ರಣ, ಸಂಯಮ ಬೋರಿಂಗ್ ಆಗಿ ಕಾಣಬಹುದು. ಆ ಸಾಹಸ, ಒಂದು ಕ್ಷಣದ ಶಿಖರವೆತ್ತರದ ಅನುಭವ ಆಕರ್ಷಕವಿದ್ದೀತು. ಆದರೂ ನಿಜಕ್ಕೂ "ಈಸ್ ಇಟ್ ರಿಯಲೀ ವರ್ತ್ ಇಟ್" ಹಲವು ಬಾರಿ ಕೇಳಿಕೊಂಡೆ, ಉತ್ತರ ನಕಾರವಿತ್ತು".[೧೭] ಮಗಳಿಗೆ ತನ್ನೆಲ್ಲಾ ಭಾವನೆಗಳನ್ನು ತೆರೆದು ಹೇಳುವುದರ ಮೂಲಕ ಮಗಳ ಭಾವನೆಗಳು ಹೊರಹೊಮ್ಮಿದವು. ಮಗಳೊಡನೆ ಕಳೆದ ಒಂದು ವಾರ ಹೊಸದೇ ಲೋಕಕ್ಕೆ ಕರೆದೊಯ್ದಿತ್ತು, ಇಬ್ಬರಿಗೂ ಮನಸ್ಸು ನಿರಾಳವಿತ್ತು. ನಾಲ್ಕೈದು ದಿನದ ಹೊರ ಓಡಾಟದಲ್ಲಿ

ಬೇಬಿಯೂ ತನ್ನ ಭಗ್ನ ಪ್ರೀತಿಯನ್ನು ಮರೆತು ಒಂದಿಷ್ಟು ಗೆಲುವಾಗಿದ್ದಳು. ಏಕೆಂದರೆ ಈ ಕತೆಯಲ್ಲಿ ಪ್ರತಿಯೊಂದು ಸನ್ನಿವೇಶವೂ ಬದುಕಿನ ಹಾದಿಯಾಗಿ ಕಂಡುಬರುತ್ತದೆ.

ಆ ಹಾದಿಯ ಮೂಲಕ ಮುಂದೆ ಸಾಗಿದಾಗ ಮುಂದೆ ಇನ್ನೊಂದು ಹಾದಿ ಬದುಕಿಗೆ ಕರೆದೊಯ್ಯುತ್ತದೆ. ಹದಿಹರೆಯ ಪ್ರೀತಿಯ ಆಕರ್ಷಣೆಯ ಹುಚ್ಚು ಕೋಡಿಯಲ್ಲಿ ಬದುಕನ್ನು ಅಂತ್ಯಗೊಳಿಸಿಕೊಳ್ಳದೇ ಜೀವನದ ಕ್ಷಣದ ಅನುಭವವನ್ನಾಗಿಸಿಕೊಂಡು ಮುಂದೆ ಹೋಗುವುದನ್ನು ಕಾಣಬೇಕು ಎಂಬುದು ಈ ಕತೆಯ ಮೂಲಕ ತಿಳಿಯಬಹುದು.

ಈ ಕತೆಯಲ್ಲಿ ಪ್ರವಾಸವು ಮುಖ್ಯ ಸೂತ್ರವಾಗಿ ಕಂಡುಬರುತ್ತದೆ. ಏಕೆಂದರೆ ಭಗ್ನಪ್ರೇಮಿಯಾದ ಮಗಳನ್ನು ತಾಯಿ ತನ್ನ ಯೌವನದ ದಿನಗಳಲ್ಲಿ ತನಗಾದ ಪ್ರೇಮದ ಅನುಭವಗಳನ್ನು ಬೇರೆ ಬೇರೆ ಸ್ಥಳದಲ್ಲಿ ತಾಯಿಯುಂಟಾಗದ ಪ್ರೀತಿಯ ಸೆಳೆತಗಳನ್ನು ವರ್ತಮಾನದಲ್ಲಿ ಮಗಳಿಗೆ ತನ್ನ ಗೆಳತಿ ಎಂಬಂತೆ ಸಲುಗೆಯಿಂದ ಭಾವನೆಗಳನ್ನು ಆ ಸ್ಥಳಕ್ಕೆ ಕರೆದುಕೊಂಡು ಹೋಗಿ ಹೊರಹಾಕುತ್ತಾ, ಆ ಮೂಲಕ ಮಗಳನ್ನು ವಾಸ್ತವಕ್ಕೆ ತರಲು ತಾಯಿಯು ಮಾಡಿದಂತಹ ಪ್ರಯತ್ನ ಎಲ್ಲಾ ಹದಿಹರೆಯ ಹುಡುಗ–ಹುಡುಗಿಯರಿಗೆ ಹಾದಿತಪ್ಪದಂತೆ ಎಚ್ಚರಿಕೆಯ ಮಾರ್ಗದರ್ಶನವನ್ನು ನೀಡಿದಂತಿದೆ.

**ನೆನಪು ನೋಯಲಿಲ್ಲ**

ಈ ಕತೆಯಲ್ಲಿ ಮಗಳ ಜೊತೆ (ರಾಮೇನಿ) ತಾಯಿ(ಸಾವಿತ್ರಿ) ಬಿಚ್ಚು ಮನಸ್ಸಿನಿಂದ ತನಗಾದ ಅನುಭವಗಳನ್ನು ಭಾವನೆಗಳನ್ನು ಹಂಚಿಕೊಳ್ಳುವ ವಿನ್ಯಾಸ ಇದೆ. ಆ ಮೂಲಕ ತಾಯಿಗೆ ತಾನು ಮಾಡಿದ ತಪ್ಪಿನ ಅರಿವು ಮಗಳಿಂದ ನಿವೇದನೆಗೊಂಡು ಬಹುವರ್ಷಗಳಿಂದ ಅಂತರಂಗದಲ್ಲಿ ಸುಡುತ್ತಿದ್ದ ಬೆಂಕಿಯ ಕಿಡಿ ತಣ್ಣಗಾಗಲು ಮಗಳು ಕಾರಣವಾಗುವುದನ್ನು ಕಾಣಬಹುದು.

ಮಗಳಿಗೆ ಅಮ್ಮನ ಬದುಕಿನಲ್ಲಿ ಅದೆಂಥದ್ದೋ ವಿಷಾದದ ಛಾಯೆ ಶಾಶ್ವತವಾಗಿ ಉಳಿದುಬಿಟ್ಟಿದೆ. ಎಂಥದ್ದೋ ಅತೃಪ್ತಿ, ಬದುಕು ತನ್ನ ಮೇಲೆ ಹಗೆ ಸಾಧಿಸಿದೆ ಎಂಬ ಅಸಮಾಧಾನ. ಅವಳ ಸಿಟ್ಟು, ಆಕ್ರೋಶ, ಅಸಹಾಯಕತೆಯನ್ನು ಕಂಡ ಎಷ್ಟೋ ಪ್ರಶ್ನೆಗಳಿಗೆ ಅಮ್ಮನ ಡೈರಿ ಉತ್ತರ ನೀಡಿತ್ತು. ಈ ಕತೆಯಲ್ಲಿ ಮಗಳು ಪಕ್ವತೆಯೆಡೆಗೆ ಯೋಚಿಸುವುದನ್ನು ಕಾಣಬಹುದು. ಅಮ್ಮನ ಅಂತರಂಗವನ್ನು ಅರ್ಥಮಾಡಿಕೊಂಡು, ಹಂಚಿಕೊಳ್ಳುತ್ತಾ ಅವಳೆದೆಯ ಮಣಭಾರವನ್ನು ಇಳಿಸುವುದನ್ನು ಕಾಣಬಹುದು.

ಸಾವಿತ್ರಿ ಮದುವೆಯಾದ ವರ್ಷ, ಕೆಲಸದ ಮೇಲೆ ಜಿನೀವಾಗೆ ಹೋಗುವ ಅವಕಾಶ ಬಂದಾಗ ಒಂದಿಷ್ಟು ಕೈಯಿಂದ ಹಣ ಹಾಕಿಕೊಂಡು ತನ್ನ ಗಂಡನಾದ ಗೋಪಿಯನ್ನು

ಕರೆದೊಯ್ದಳು. ಅವರ ಜೊತೆಯಲ್ಲಿ ಸಹೋದ್ಯೋಗಿ ರವಿ ಹೋಗುತ್ತಾನೆ. ಕೆಲಸ ಮುಗಿದು ಮೂರು ದಿನ ಬಿಡುವು ಸಿಕ್ಕಾಗ ಸ್ವಿಟ್ಜರ್‌ಲ್ಯಾಂಡ್‌ನ ಸರಹದ್ದಿಗೆ ಅಂಟಿದ ಫ್ರಾನ್ಸ್ ನೆಲದಲ್ಲಿ ನಿಂತ ಶ್ಯಾಮೋನಿಗೆ ಹೋಗುತ್ತಾರೆ. ಕಣಿವೆಯಾಳದ ಹಿಮವತ್ಪರ್ವತಗಳ ಮಡಿಲಿನ ಶ್ಯಾಮೋನಿಯ ತುಂಬೆಲ್ಲ ಅಲೆದಾಡುವಾಗ 'ಗಾರೆ ದು ಮಾಂಟೆ ಸ್ಯುಯೆ, ಮರ್ ದ ಗ್ಲಾಸ' ಪುಟ್ಟ ರೈಲು ನಿಲ್ದಾಣ ಕಂಡು ರವಿ 'ಬನ್ನಿ ಗ್ಲೇಸಿಯರ್‌ಗೆ ಈ ರೈಲು ಹೋಗುತ್ತೆ' ಎಂದು ಹೊರಡಿಸುತ್ತಾನೆ. ಪುಟ್ಟ ರೈಲು, ಗ್ಲೇಸಿಯರ್‌ನ ಮೇಲ್ಭಾಗಕ್ಕೆ ಶಿಖರದ ತುದಿಗೆ ತಂದುಬಿಟ್ಟಾಗ ಇಷ್ಟೇ ಇಷ್ಟಗಲದ ಸರಳ ತಡೆಯೊಳಗೆ ನಿಂತು ನೋಡಲು ತೆರವು ಮಾಡಿದ್ದರು. ಕಡಿದಾದ ಬೆಟ್ಟಕ್ಕಂಟಿದ ಇಕ್ಕಟ್ಟು ಹಾದಿಯಲ್ಲಿ ಬೇಡವೆಂದರೂ ಸಾವಿತ್ರಿ ಆಳಕ್ಕೆ ಇಳಿಯುತ್ತಾಳೆ. ಆದರೆ ಅವಳ ಕಾಲು ಜಾರಿದಾಗ ಗೋಪೀ 'ಮೈ ವೈಪ್, ಪ್ಲೀಸ್ ಸೇವ್ ಮೈ ವೈಫ್' ಎಂದು ಕೂಗಿಕೊಳ್ಳುತ್ತಾನೆ. ಆದರೆ ರವಿ ವೇಗವಾಗಿ ಹೋಗಿ ಅವಳ ಕೈಹಿಡಿದು ಮೇಲಕ್ಕೆ ಎತ್ತಿ 'ಎಂಥಾ ಕೆಲಸ ಮಾಡಿದ್ರಿ, ಏನಾದರೂ ಆಗಿದ್ರೆ, ಕೈ ಕೊಡಿ' ಎಂದು ಹೆಜ್ಜೆ ನಡುಗುತ್ತಿದ್ದವಳಿಗೆ ಆಜ್ಞಾಪಿಸುತ್ತಾನೆ. ಆ ಕ್ಷಣದಲ್ಲಿ ಸಾವಿತ್ರಿ ಸಾವು-ಬದುಕಿನ ನಡುವೆ ತೂಗು ಸೇತುವೆಯನ್ನು ದಾಟುತ್ತಾಳೆ. ಆದರೆ ಮುಂದೆ ಈ ಘಟನೆ ಬದುಕಿನುದ್ದಕ್ಕೂ ಕಿಡಿಯಾಗಿ ಅವಳೆದೆ ಸುಡುವುದನ್ನು ಕಾಣಬಹುದು.

ಆ ಕ್ಷಣದಿಂದ ಗಂಡನಾದ ಗೋಪಿ ಪೌರುಷವೇ ಇಲ್ಲದ ಗಂಡಸಿನಂತೆ ಕಂಡು ಅವಳಲ್ಲಿ ಅಗಾಧವಾದ ಬದಲಾವಣೆಯಾಗಿತ್ತು. ಗಂಡನ ಬಗ್ಗೆ ಆಕ್ರೋಶ, ಅತೃಪ್ತಿ, ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾಳೆ. ಆದರೆ ಜೀವವನ್ನು ಲೆಕ್ಕಿಸದೆ ಓಡಿಬಂದು ಕೈಹಿಡಿದು ಎಳೆದೆತ್ತಿದ ರವಿ ಅವಳ ಮನಸ್ಸಿನಲ್ಲಿ ಹತ್ತಿರವಾಗುತ್ತಾನೆ. ಸಾವಿತ್ರಿ ಗಂಡನೊಡನೆ ಸಂವಾದಕ್ಕೆ ಅವಕಾಶ ಕೊಡದೆ ಸಂಭಾಷಣೆಯನ್ನು ಮರೆತು ಬದುಕು ಪೂರ್ತಿಯಾಗಿ ಸ್ವಗತಗಳೊಡನೆಯೇ ಕಳೆಯುತ್ತಾರೆ. ಈ ಘಟನೆಯನ್ನು ಸದಾ ನೆನಪಿನಲ್ಲಿ ಉಳಿಸಿಕೊಳ್ಳಲು ಸಾವಿತ್ರಿ ತನ್ನ ಮಗಳಿಗೆ ಶ್ಯಾಮೋನಿ ಎಂದು ಆ ಸ್ಥಳದ ಹೆಸರನ್ನು ಇಡುತ್ತಾಳೆ. ಅವಳದೇ ಆದ ಪ್ರಶ್ನೆಗಳಿಗೆ ಈಗಲೂ ಉತ್ತರ ಸಿಕ್ಕಿಲ್ಲ.

ಲೋಕರೂಢಿಯ ದಾಂಪತ್ಯ ಮುಂದುವರೆದಿದ್ದರೂ ಅವರಿಬ್ಬರ ನಡುವೆ ಗೋಡೆ ಕಟ್ಟಿ ನಿಲ್ಲಿಸಿದ್ದರು. ಸಾವಿತ್ರಿಗೆ ದಿಲ್ಲಿಗೆ ವರ್ಗವಾದಾಗ ಕೌಟುಂಬಿಕ ಕಾರಣದಿಂದ ವಜಾ ಮಾಡಿಸಿಕೊಳ್ಳಬಹುದಾಗಿದ್ದರೂ ಆ ಕೆಲಸ ಮಾಡಲಿಲ್ಲ. ಬದುಕು ಪರಸ್ಪರ ನಿರೀಕ್ಷೆ ಇಲ್ಲದೆ ಏರಿಳಿತವಿಲ್ಲದೆ ನೀರಸ ಹೆಜ್ಜೆಯೊಂದಿಗೆ ದಶಕಗಳನ್ನು ದಾಟಿದ್ದರು.

ಗೋಪುಗೆ ಹೊಟ್ಟೆಯ ಕ್ಯಾನ್ಸರ್ ಎಂದು ತಿಳಿದಾಗ ಸಾವಿತ್ರಿ ಕೆಲಸಕ್ಕೆ ರಜೆ ಹಾಕಿ ಶುಶ್ರೂಷೆ ಮಾಡುತ್ತಾಳೆ. 'ನಿನ್ನ ಕೆಲಸ ಬಿಟ್ಟು ಯಾಕೆ ಬಂದೆ ಸಾವಿತ್ರಿ' ಗೋಪುವಿನ ಕ್ಷೀಣ

ದನಿಗೆ ಉತ್ತರಿಸುವುದಿಲ್ಲ. ಗೋಪಿ ಸಾಯುವ ಮುನ್ನಾ ಸಾವಿತ್ರಿ ಕೈಹಿಡಿದು ಅತ್ಯಂತ ದೀನವಾಗಿ ಹೇಳುತ್ತಾನೆ. "ನಾನು ಸತ್ಯವಾನನಾಗಲಿಲ್ಲ, ನೀನು ಮಾತ್ರ ಸಾವಿತ್ರಿಯಾದೆ"[೧೮] ಎನ್ನುತ್ತಾನೆ. ಅವಳಲ್ಲಿ ಅನೇಕ ಪ್ರಶ್ನೆಗಳಿಗೆ ಮೌನವೇ ಉತ್ತರವಾಗುತ್ತದೆ.

ಆದರೆ ಇಷ್ಟು ದಿನ ಎದೆಯಲ್ಲಿ ಹೆಪ್ಪುಗಟ್ಟಿದ ಸ್ವಗತಗಳು ಮುಂದೆ ಸಂವಾದವಾಗಬೇಕಿತ್ತು. ಅವಳ ಮನಸ್ಸು ತಿಳಿಯಲು. ಶ್ಯಾಮೋನಿ ತನ್ನ ತಾಯಿಗೆ ಮೆಲ್ಲನೆ ಕೇಳಿದಳು. "ಅಮ್ಮ, ನೀನೆಂದೂ ಅಪ್ಪನನ್ನು ಕ್ಷಮಿಸಲೇ ಇಲ್ಲವೇ... ಈಗಲೂ ಕೂಡಾ..." ಅವಳ ಎದೆಯಲ್ಲಿ ಹೊರೆಯಾದ ಭಾವಗಳನ್ನು ಮಗಳು ಕದಡುತ್ತಿದ್ದಳು. "ಅಮ್ಮ, ನಮ್ಮ ಆಕ್ರೋಶ ಇತರರನ್ನು ನೋಯಿಸುವುದಕ್ಕಿಂತಾ ಹೆಚ್ಚು ನಮ್ಮನ್ನು ನೋಯಿಸುತ್ತದೆ. ನಮ್ಮೊಳಗಿನ ಅಗ್ನಿಪರ್ವತ ನಮ್ಮೊಡಲನ್ನೇ ಮೊದಲು ಸುಡುತ್ತದೆ..." ಎಂದು ಅಮ್ಮನಲ್ಲಿದ್ದ ತಿಳಿವಳಿಕೆಯನ್ನು ಬಡಿದೆಬ್ಬಿಸಿದಳು.

'ಬದುಕಿನ ಒಂದು ಕ್ಷಣ, ಒಂದೇ ಒಂದು ಪ್ರಕರಣ ಇಡೀ ಬದುಕನ್ನು ಬದಲಾಯಿಸಬಲ್ಲದು. ಶ್ಯಾಮೋನಿ...' ಸಾವಿತ್ರಿ ತನ್ನ ಮಗಳಿಗೆ ಹೇಳುತ್ತಾಳೆ. ಅದಕ್ಕೆ ಮಗಳು ಅಮ್ಮ ಬದಲಿಸಿದ್ದ "ಆ ಘಟನೆಯೇ ಅಥವಾ ಆ ಘಟನೆಗೆ ನಾವು ಪ್ರತಿಕ್ರಿಯಿಸಿದ ರೀತಿಯೇ?" ಎಂದು ಪ್ರಶ್ನಿಸುತ್ತಾಳೆ. "ಬದುಕು ನಮಗೇನಾಗುತ್ತೆ ಎಂಬುದಲ್ಲ, ನಮಗಾದದ್ದನ್ನು ನಾವು ಹೇಗೆ ಸ್ವೀಕರಿಸುತ್ತೇವೆ, ಹೇಗೆ ಎದುರಿಸುತ್ತೇವೆ, ಹೇಗೆ ಮುಖಾಮುಖಿಯಾಗುತ್ತೇವೆ". ಒಂದು ಪ್ರಸಂಗವನ್ನು ಅದನ್ನು ಎದುರಿಸುವ ಬಗೆಯನ್ನು ಸೂಕ್ಷ್ಮವಾಗಿ ಮಗಳು ತಾಯಿಗೆ ತಿಳಿಹೇಳುತ್ತಾಳೆ. ಅವಳದೆ ಜೀವನದ ಕಥೆಯ ಮೂಲಕ.

**ಮತ್ತೆ ಬರೆದ ಕವನಗಳು**

ಈ ಕತೆಯಲ್ಲಿ ಅಜಯ್ ಶ್ರೀಮತಿ ಅನುಳ ಜೊತೆ ಪ್ರಯಾಣಿಸುವಾಗ ಅವಳು ಅವನ ಜೊತೆ ಪ್ರಯಾಣದುದ್ದಕ್ಕೂ ಸ್ನೇಹದ ಸಲಿಗೆ ಮತ್ತು ಜೊತೆಯಲ್ಲಿರುವಾಗ ಅವಳು ತನ್ನ ಬಾಲ್ಯದ ನೆನಪುಗಳನ್ನು ಒಂದೊಂದಾಗಿ ಬಿಚ್ಚುವುದನ್ನು ಅರ್ಥವತ್ತಾಗಿ ಈ ಕತೆಯಲ್ಲಿ ಬಿಂಬಿಸಲಾಗಿದೆ. ಅವಳ ಪ್ರಯಾಣ ಜಮ್ಮುವಿನ ಅನುಭವದೊಂದಿಗೆ ತನ್ನ ನೆನಪುಗಳ ವರ್ಣನೆಯನ್ನು ಇಲ್ಲಿ ಕಾಣಬಹುದು.

ಪ್ರೀತಿ ಎಂಬುದು ಕಾಲದ ದಾಸನಲ್ಲ, ಪ್ರೀತಿಯ ಕಾಲವನ್ನು ಮೀರಿನಿಂತ ಭಾವನೆ, ಪ್ರೀತಿಯು ಬದಲಾಗುವ ಕಾಲದ ಜೊತೆ ಬದಲಾಗುವುದಿಲ್ಲ. ದೇಹದ ಸೌಂದರ್ಯ ಕ್ಷೀಣಿಸಿದರೂ, ಪ್ರೀತಿ ಕ್ಷೀಣಿಸುವುದಿಲ್ಲ. ನಿಜವಾದ ಪ್ರೀತಿ ಸೌಂದರ್ಯ ಮಾತ್ರವಲ್ಲ, ನಿಜವಾದ ಪ್ರೀತಿ ಕೆಲಗಂಟೆಗಳು ಅಥವಾ ವರ್ಷದ್ದಲ್ಲ, ಕಾಲಾತೀತವಾದದ್ದು ಎಂಬ ಪ್ರೀತಿಯ ನೆನಪಿನಂಗಳವನ್ನು ಈ ಕಥೆಯ ಪ್ರಯಾಣದುದ್ದಕ್ಕೂ ಅನುಭವಿಸುವ ಪ್ರಕೃತಿ ಸೌಂದರ್ಯದ

ಜೊತೆಗೆ ಅನುಭವಗಳ ಸರಮಾಲೆಯನ್ನು ಮೆಲುಕು ಹಾಕುವ ರೀತಿಯಲ್ಲಿ ಚಿತ್ರಿಸಿದ್ದಾರೆ. ರಮಣೀಯವಾದ ರಸಿಕತನದ ವರ್ಣನೆ ತುಂಬಾ ಚೆನ್ನಾಗಿ ಮೂಡಿಬಂದಿದೆ.

ಈ ಕತೆಯಲ್ಲಿನ ಡಾ. ಅನು ಕಾನ್‌ಫೆರೆನ್ಸ್‌ನಲ್ಲಿ ಪ್ರಬಂಧ ಮಂಡಿಸಲು ಶ್ರೀನಗರಕ್ಕೆ ತೆರಳಿರುತ್ತಾಳೆ. ಅಲ್ಲಿ ಈ ಹಿಂದೆ ಅವಳು ಕವನ ಬರೆಯುತ್ತಿದ್ದಾಗಿನ ಅಭಿಮಾನಿ ಅಜಯ್ ಭೇಟಿಯಾಗುತ್ತಾನೆ. ಅವಳು ಈ ಹಿಂದೆ ಕವನ ಏಕೆ ಬರೆಯುತ್ತಿಲ್ಲ ಎಂದು ವಿಚಾರಿಸುತ್ತಾನೆ. ಬರಿಯ ಕಂಪನಿ, ತಂತ್ರಜ್ಞಾನವಷ್ಟೇ ಅಲ್ಲದೇ ಪ್ರವೃತ್ತಿಯಿಂದ ಕವಯಿತ್ರಿಯೂ ಆಗಿರುವ ಡಾ. ಅನು ತನ್ನ ಹಿಂದಿನ ಹವ್ಯಾಸಗಳ ಬಗ್ಗೆ ಮೆಲುಕು ಹಾಕುತ್ತಾಳೆ. ಬಾಲ್ಯದಲ್ಲಿ ತಾನು ಎದುರಿಸಿದ ಅನೇಕ ನಿರ್ಬಂಧಗಳನ್ನು ತಾನು ಮೆಟ್ಟಿ ನಿಂತು ಬಿಟ್ಟಿರುವ ಬಗ್ಗೆ ಅವಳಿಗೆ ಆಶ್ಚರ್ಯವಾಗುತ್ತವೆ.

ಅನು ಕಾನ್‌ಫೆರೆನ್ಸ್‌ಗೋಸ್ಕರ ಎರಡು ದಿನಗಳ ಕಾಲ ಶ್ರೀನಗರಕ್ಕೆ ಬಂದಿದ್ದರೂ ಆರು ತಿಂಗಳ ಹಿಂದೆ ಗೋವಾದಲ್ಲಿ ಭೇಟಿಯಾಗಿದ್ದ ಅಜಯ್ ಕಾಶ್ಮೀರದಲ್ಲಿ ಮತ್ತೆ ಪ್ರತ್ಯಕ್ಷವಾಗುತ್ತಾನೆ. ಅನು ಸಂಪೂರ್ಣ ವಿಚಾರಗಳನ್ನು ತಿಳಿದುಕೊಂಡಿದ್ದ ಅಜಯ್ ಕವನವನ್ನು ಏಕೆ ಬರೆಯಲಿಲ್ಲ ಎಂದು ಪ್ರಶ್ನಿಸಿ ಮಾತನ್ನು ಮುಂದುವರೆಸಿತ್ತು. ಇಬ್ಬರೂ ಒಟ್ಟಾಗಿ ಕಾನ್‌ಫೆರೆನ್ಸ್ ಇರುವ ಸ್ಥಳಕ್ಕೆ ಪ್ರಯಾಣಿಸುತ್ತಾರೆ. ಆಗ ಆ ಸಂದರ್ಭದಲ್ಲಿ ಅನು ತನ್ನ ಬಾಲ್ಯದ ಕಹಿ–ಸಿಹಿ ನೆನಪುಗಳನ್ನು ಮನಸ್ಸಿನಲ್ಲಿಯೇ ಮೆಲುಕು ಹಾಕಿಕೊಳ್ಳುತ್ತಾ ಅಜಯ್ ಸ್ನೇಹ–ಸಲಿಗೆಯನ್ನು ಧನಾತ್ಮಕವಾಗಿ ಸ್ಪಂದಿಸುತ್ತಾಳೆ.

ಶ್ರೀನಗರ ತಲುಪಿದಾಗ ರಾತ್ರಿ ಮೂರುಗಂಟೆಯಾದ್ದರಿಂದ ಅಲ್ಲಿನ ಅಪರಿಚಿತ ನಗರಗಳು ಅನುಗೆ ಭಯಂಕರವಾಗಿ ಕಾಣುತ್ತವೆ. ಆದರೆ ಅಜಯ್‌ನ ಭರವಸೆಯ ಮೇಲೆ ಹೌಸ್‌ಬೋಲ್‌ನಲ್ಲಿ ತಂಗಿದ್ದು, ಅನೇಕ ದುಃಸ್ವಪ್ನಗಳ ನಡುವೆಯೇ ಅವಳಿಗೆ ನಿದ್ದೆ ಆವರಿಸುತ್ತದೆ. ರಾತ್ರಿಯ ಕತ್ತಲಲ್ಲಿ ದುಃಸ್ವಪ್ನವಾಗಿ ಕಾಡಿದ ಅಪರಿಚಿತ ನಗರಿ. ಮುಂಜಾನೆಯ ಹೊಂಗಿರಣದಲ್ಲಿ ಫಳ ಫಳ ಹೊಳೆದ ಝೀಲಮ್ ನದಿಯು ಬಂಗಾರದ ಬಣ್ಣದಲ್ಲಿ ಹಸಿರಸಿರಾಗಿ ತೂಗಾಡಿದ ಗಿಡಮರಗಳ ನಡುವೆ, ರಾಶಿ ರಾಶಿ ಬಿಳಿ ಗುಲಾಬಿ, ಹೆಸರಿಸದ ಹೂಗೊಂಚಲ ಮಡಿಲಲ್ಲಿ, ಕಾಶ್ಮೀರದ ಸ್ವರ್ಗೀಯ ಬೆಳಗನ್ನು ಕಣ್ಣು ತುಂಬಿಕೊಂಡ ಅನು ಈಗ ಎಷ್ಟು ಸುಂದರವಾಗಿದೆ ಎಂದು ಊಹಿಸುವುದು ಹಾಸ್ಯಾಸ್ಪದವಾಗಿತ್ತು.

ಅನುವಿಗೆ ಕಾಶ್ಮೀರದ ಕಣಿವೆಗೆ ಬಂದ ಕಾರಣ ಕೂಡ ಮರೆತು ಹೋಗಿತ್ತು. ಜಮ್ಮುವಿನಲ್ಲಿ ಅಜಯ್ ಸಿಕ್ಕಾಗಲಿಂದ ಅನು ತನ್ನನ್ನೇ ಮರೆತು ಕಣಿವೆಗಿಳಿದದ್ದು ಈ ಪ್ರಬಂಧ ಓದಲು ಅಲ್ಲವೇ ಅಲ್ಲ ಅನಿಸಿತ್ತು. ಅನ್ವೇಷಿಸದೇ ಉಳಿದ ಬಾಲ್ಯ–ಯೌವನಗಳನ್ನು, ತೆರೆದುಕೊಳ್ಳದೆ ಅದುಮಿಟ್ಟ ಪ್ರೀತಿ–ಸ್ನೇಹಗಳನ್ನು, ಬೇರೊಂದು ಆಯಾಮದಲ್ಲಿ

ಪರಿಶೋಧಿಸದೆ ಬಿಟ್ಟ ಸಂಬಂಧಗಳನ್ನು ಅನು ಮನಸ್ಸು ಹುಡುಕಿ ಹೊರಟಂತಿತ್ತು. ಪ್ರೀತಿಯನ್ನು ಇಷ್ಟೊಂದು ಸಹಜವಾಗಿ ತೆರೆದಿಡಲು ಅಜಯ್‌ಗೆ ಮಾತ್ರ ಸಾಧ್ಯವಾಗಿದೆಯಾ, ನನ್ನೊಳಗಿನ ಸಂಕೋಚಗಳನ್ನು ಹೊರಗಟ್ಟಿ ಭಾವನೆಗಳಿಗೆ ಬಾಯಿಕೊಡಲು ಇಲ್ಲಿ ಕಣಿವೆಯಲ್ಲಿ ಮಾತ್ರ ಸಾಧ್ಯವೇ ಎಂದು ತನ್ನನ್ನು ತಾನು ಪ್ರಶ್ನೆಗಳಿಗೆ ಒಡ್ಡಿಕೊಳ್ಳುತ್ತಾಳೆ. ಅವಳು ಬರೆದಂತಹ ಕವನದಲ್ಲಿ ಪ್ರಾಮಾಣಿಕತೆ ಅಭಿವ್ಯಕ್ತಿ ಇರುವುದನ್ನು ಆ ಕವಿತೆಗಳಲ್ಲಿ ಅಪ್ಪಟ ಸತ್ಯಗಳನ್ನು ಹೊರಹಾಕುವುದರ ಮೂಲಕ ಬಾಲ್ಯದಲ್ಲಿ ಅಪ್ಪ ಹೇರಿದ ಗಂಡುಹೆಣ್ಣಿನ ಪ್ರೇಮ ಸಂಬಂಧದ ಗಂಭೀರತೆಯನ್ನು ಬಾಳಿನ ಉದ್ದಕ್ಕೂ ಹೊತ್ತು ನಡೆದಿದ್ದಳು. ಬದುಕಾಲಾರದಂತಹ ಬದುಕನ್ನು ತನ್ನ ಕವನ ಮೂಲಕ ಬದುಕ ಹೊರಡುತ್ತಾಳೆ. ಅವಳ ಕವನಗಳು ಅತ್ಯಂತ ವೈಯಕ್ತಿಕ ಅನಿಸಿಕೆಗಳು ಬಹಿರಂಗಪ್ರದರ್ಶನವಾಗಿತ್ತು. ತಾನು ಇಷ್ಟಪಟ್ಟವನೊಂದಿಗೆ ಪ್ರೇಮನಿವೇ ದನೆ ಹೇಳಿಕೊಳ್ಳಲಾರದೆ, ಅಪ್ಪನ ಕಪಿಮುಷ್ಟಿಯಲ್ಲಿ ಬದುಕನ್ನು ಸಾಗಿಸಿಕೊಂಡು ಕವನದ ಮೂಲಕ ಮನಸ್ಸಿನ ಭಾವನೆಯನ್ನು ಅವನಿಗೆ ಬಹಿರಂಗ ಪ್ರೇಮಪತ್ರದ ರೀತಿಯಲ್ಲಿ ಬರೆದ ಕವನಗಳು ಉದ್ದೇಶಿಸಿದ ಅವರೊಬ್ಬನನ್ನು ಬಿಟ್ಟು ಮತ್ತೆಲ್ಲರನ್ನೂ ತಲುಪಿದ್ದವು. ಇವಳ ಕವನದ ಸೋಲುಗಳನ್ನು ಅಜಯ್ ಓದಿ ಅವಳ ಅಂತರಂಗವನ್ನು ಗೆದ್ದಿದ್ದ, ಆದರೆ ವಾಸ್ತವದಲ್ಲಲ್ಲ ಮನಸ್ಸಿನಲ್ಲಿ.

ಅನು ಬಾಲ್ಯದ ಭಾವನೆಗಳನ್ನು, ಕಹಿ ಅನುಭವಗಳನ್ನು, ಭೂತಕಾಲದಲ್ಲಿ ಮರೆಯುವಂತೆ, ವಾಸ್ತವದ ಆನಂದ ಕ್ಷಣಗಳನ್ನು ಸ್ವೀಕರಿಸುವಂತೆ ಅಜಯ್ ಹೇಳುವಾಗ ಆ ದಿನಗಳನ್ನು ಸವಿಸವಿದು ಭಾರೀ ಮೋಜಿನಿಂದ ಕಳೆಯಬೇಕು ಎನ್ನುವಾಗ ಅರೆ, ನನಗೆ ನೋವಾಗುವ ಬಾಲ್ಯ ಇವನಿಗಿಷ್ಟು ಹಾಸ್ಯವಾಗಬಲ್ಲುವಾದರೆ ಹೇಗೆ ಎಂಬ ಪ್ರಶ್ನೆ ಅವಳಲ್ಲಿ ಕಾಡುತ್ತದೆ.

ಬೆಚ್ಚನೆಯ ಸ್ನೇಹದಲ್ಲಿ ಅವಳಲ್ಲಿದ್ದ ಎಲ್ಲ ಸರಹದ್ದುಗಳನ್ನು ದಾಟಿ ವರ್ತಮಾನದ ಈ ಕ್ಷಣದ ಸಾಧ್ಯತೆಗಳೆಲ್ಲವನ್ನು ಅಸಾಧ್ಯವಾಗಿ ಅಸಂಭವವಾಗಿ ಮತ್ತೊಂದು ಆಯಾಮದಲ್ಲೇ ಉಳಿದುಬಿಡಲಿದ್ದ ಅನುಭವವೊಂದು ಕಣಿವೆಯ ರಾಗಿನಲ್ಲಿ ನಿಸರ್ಗದ ಬಣ್ಣಗಳಲ್ಲಿ ಮೈತುಂಬಿಸಿಕೊಂಡಳು. ಇವು ಮತ್ತೆ ಬರೆವ ಕವನಗಳಿಗೆ ವಸ್ತುವಾಗಿತ್ತು. ಶಿಖರದಿಂದಿಳಿದು ಕಾಡು, ಮೇಡು, ಬಯಲುಗಳಲ್ಲಿ ಓಡಾಡಿ ಕಡೆಗೆ ಅವಳ ಅಂತರಗಂಗೆಯಾಗಿ ಸುಳಿದಾಡಿದ ಬಾಲ್ಯದ ಭಾವನೆಗಳಿಗೆ ಪ್ರೇಮಕಾಮಗಳಿಗೆಲ್ಲ ಅಭಿವ್ಯಕ್ತಿ ದೊರಕಿತ್ತು. ಮೊಟ್ಟಮೊದಲ ಬಾರಿ ತನ್ನೇ ತಾನು ಪ್ರೀತಿಸತೊಡಗಿದಳು. ಕಣಿವೆ ಅವಳಿಗೆ ಎಲ್ಲವನ್ನು ಕಲಿಸಿತ್ತು. ಝೇಲಮನದಿಂದ ಅನಿಯಂತ್ರಿತ ಹರಿವನ್ನು ಬೆನ್ನು ಬಾಗಿಸದೆ ನಿಂತ ಪೈನ್ ವೃಕ್ಷಗಳ ನಿಲುವನ್ನು ಕಣಿವೆಯಲ್ಲಿನ ಅಕೃತಕ ಪ್ರೀತಿಯನ್ನು ತನ್ನ ಮಡಿಲಿನಲ್ಲಿ ತುಂಬಿಕೊಂಡಳು.

ಅವಳ ಕವನಗಳಿಗೆ ಬಿರುದುಗಳು ದೊರೆತಿತ್ತು. ಬದುಕಿಗೆ ಪಾರದರ್ಶಕವಾಗಿ ತನ್ನನ್ನು ತಾವು ತೆರೆದುಕೊಂಡಾಗ ಮನಸ್ಸು ಮುದಗೊಳ್ಳುವುದನ್ನು ಅನುಭವಿಸಿದಳು. ಈ ಅನುಭವಕ್ಕೆ ಅಜಯ್ ಕಾರಣನಾಗಿದ್ದ. ಮರಳಿ ತಮ್ಮ ಸ್ಥಳಕ್ಕೆ ಹೋಗುವಾಗ "ಬರೀತಿರಿ"... ಅಂದು ಅವನು ಹೇಳಿದಾಗ ಅವನು ಹೇಳಿದ್ದು ಪತ್ರವನ್ನೋ ಕವನಗಳನ್ನೋ ಗೊತ್ತಾಗಲಿಲ್ಲ. ಆದರೆ ಕನಸಿನಿಂದ ವಾಸ್ತವದತ್ತ ಹೊಸ ಭರವಸೆ ಹೊತ್ತು ಸಾಗಿದಳು.

ಹೀಗೆ ಈ ಕತೆಯಲ್ಲಿ ಪ್ರೀತಿ-ಪ್ರೇಮದ ಭಾವನೆಗಳು ಎಷ್ಟುಗಟ್ಟಿ. ಬಾಲ್ಯದ ಭಾವನೆಗಳು ಬದುಕಿನ ಉದ್ದಕ್ಕೂ ತಂದು ಪ್ರತಿಯೊಂದು ಸಂದರ್ಭಗಳಲ್ಲಿ ಅವರ ಕರಿನೆರಳುಗಳ ಕಹಿನೆನಪುಗಳನ್ನು ಸುಂದರ ಕಾಶ್ಮೀರ ಕಣಿವೆಯಲ್ಲಿ ಸ್ನೇಹದ ಆತ್ಮೀಯತೆಯಲ್ಲಿ ಕಳೆದುಕೊಂಡು ತನ್ನನ್ನು ತಾನು ಪ್ರೀತಿಸಿಕೊಳ್ಳುವಂತೆ ಹಾಗೂ ಬದುಕಿನಲ್ಲಿ ಪಾರದರ್ಶಕತೆ ಮುಖ್ಯ ಎಂಬುದನ್ನು ಈ ಮೂಲಕ ತಿಳಿದುಕೊಳ್ಳಬಹುದು.

ಒಟ್ಟಾರೆಯಾಗಿ, ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಸಣ್ಣಕತೆಗಳ ಬಗೆಗೆ ನೇಮಿಚಂದ್ರರವರು ತಮ್ಮದೇ ಆದಂತಹ ವಿಶಿಷ್ಟ ಬರವಣಿಗೆಯಿಂದ ಸಹೃದಯರ ಮನಗೆದ್ದಿದ್ದಾರೆ. ಸಾಮಾಜಿಕ ವ್ಯವಸ್ಥೆಯ ಮೇಲೆ ಕುಟುಂಬ ಪ್ರೀತಿಯಿರುವುದರಿಂದ ಕುಟುಂಬದ ಆಗುಹೋಗುಗಳು ಮಕ್ಕಳ ಮೇಲೆ ಹಿರಿಯರ ಮೇಲೆ ಬೀರುವಂತಹ ಪರಿಣಾಮ ತೀವ್ರತೆ ಮುಂತಾದವುಗಳ ಬಗೆಗೆ ನೇಮಿಚಂದ್ರರವರ ಕತೆಯಲ್ಲಿ ಅನಾವರಣವಾಗುತ್ತದೆ. ಮನಸ್ಸಿನ ವಾಸ್ತವ ಚಿತ್ರಣ, ಕನಸುಗಾರಿಕೆ ವಾಸ್ತವಕ್ಕೂ ಇರುವ ಅಂತರವನ್ನು ಗುರುತಿಸುವಿಕೆ, ಭೂತ-ವರ್ತಮಾನ ಭವಿಷ್ಯತ್ ಬಗೆಗೆ ಕತೆಗಳಲ್ಲಿನ ಒಳನೋಟಗಳ ಅಭಿವ್ಯಕ್ತವಾಗಿದೆ.

ಪ್ರವಾಸವು ಇವರ ಕಥೆಯಲ್ಲಿ ಮುಖ್ಯ ಭೂಮಿಕೆಯಾಗಿ ಕಂಡುಬಂದು ಬದುಕಿನ ಪರಿವರ್ತನೆ, ಮನಸ್ಸಿನ ಸಾಂತ್ವನಕ್ಕೆ, ಆಶೋತ್ತರಗಳಿಗೆ ಜೀವನಾನುಭವವನ್ನು ಒದಗಿಸುವುದರ ಮೂಲಕ ಚಿಂತನೆಯ ಕೈದೀವಿಗೆಯಾಗಿ ಕೃತಿಯಲ್ಲಿ ಕಥೆಯುದ್ದಕ್ಕೂ ಕಂಡುಬಂದಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರವಾಸವು ಎಲ್ಲರ ಬಾಳಿಗೂ ಅತ್ಯವಶ್ಯಕ ಮುನ್ನುಡಿಯಾಗಬಲ್ಲದು ಎಂಬುದು ನಮಗಿಲ್ಲಿ ಅರಿವಾಗುತ್ತದೆ. ನೇಮಿಚಂದ್ರರು ತಮ್ಮ ಅನುಭವವನ್ನು ಎಲ್ಲರ ಅನುಭವವಾಗಿಸಿ ಮೂಲಕ ನೈಸರ್ಗಿಕ ಪರಿಸರದಲ್ಲಿ ಶಾಂತಿಯ ಅಸ್ತಿತ್ವವನ್ನು ಮನಸ್ಸಿನ ಬೇಗುದಿಯನ್ನು ಹೋಗಲಾಡಿಸುವ ಅಸ್ತ್ರವನ್ನಾಗಿಸಿ ಯಶಸ್ವಿಗೊಳಿಸಿಕೊಂಡಿರುವುದನ್ನು ಈ ಕಥೆಗಳಿಂದ ತಿಳಿಯಬಹು ದಾಗಿದೆ.

**ಕತೆಗಳ ಕೊನೆಯಲ್ಲಿ**

ಇವರ ಹೆಸರೇ ಒಂದು ವಿಶೇಷ ; ಹಾಗೆಯೇ ಇವರು ಬರೆಯುವಂತಹ ಬರವಣಿಗೆಯೂ ಸಹ ಒಂದು ವಿಶೇಷತೆಯಿಂದ ಕೂಡಿದೆ. ನೇಮಿಚಂದ್ರ ಅವರ ಕಥೆಗಳಲ್ಲಿ

ಹೆಣ್ಣುಮಕ್ಕಳ ಕಾಳಜಿ ಎದ್ದುಕಾಣುವಂತಹದ್ದು. ವೃತ್ತಿಯಲ್ಲಿ ವಿಜ್ಞಾನಿಯಾಗಿದ್ದರೂ ಇವರ ಸಾಹಿತ್ಯದ ಬಗೆಗಿನ ಆಸಕ್ತಿ ಅಪರೂಪವಾದುದು.

ನೇಮಿಚಂದ್ರ ಅವರು ತಮ್ಮ ಸಾಹಿತ್ಯದ ಮೂಲಕ ಸಮಾಜವನ್ನು ತಿದ್ದಲು ಹೊರಟಿದ್ದಾರೆ. ವೈವಿಧ್ಯಮಯ ಪಾತ್ರಗಳು, ಅವರ ಸಮಸ್ಯೆಗಳು, ಅವುಗಳಿಗೆ ಅವರ ಪ್ರತಿಕ್ರಿಯೆಗಳು ಬೇರೊಂದು ಲೋಕವೇ ನನ್ನ ಅಂತಃಶಕ್ತಿಯ ಒಳಗಣ್ಣನ್ನು ತೆರೆಯಿಸುತ್ತದೆ ಎನ್ನಬಹುದು.

ಕಳೆದ ದಶಕಗಳನ್ನು ಅವಲೋಕನ ಮಾಡಿದಾಗ ಹೆಣ್ಣಿಗೆ ತಾನು ಸಮಸ್ಯೆಯ ಸುಳಿಯಲ್ಲಿ ಸಿಲುಕಿದ್ದೇನೆ ಎಂಬ ಅರಿವಿದೆ. ಆದರೆ ಅದನ್ನು ಸವಾಲನ್ನಾಗಿ ಸ್ವೀಕರಿಸಿ ಸಮಾಜಕ್ಕೆ ಮಾದರಿಯಾಗಿ ನಿಲ್ಲಲು ಸಾಕಾಗುವಷ್ಟು ಆತ್ಮಸ್ಥೈರ್ಯದ ಕೊರತೆಯಿದೆ. ಈ ರೀತಿ ಸಾಮಾನ್ಯವಾಗಿ ಹೆಣ್ಣು ಸಂಪ್ರದಾಯಕ್ಕೆ ಬಂಧಿಯಾಗಿ ತನ್ನ ಜೀವನದ ನಿರ್ಧಾರಗಳನ್ನು ಬೇರೆಯವರು ತೆಗೆದುಕೊಳ್ಳುವುದನ್ನು ಕಾಣಬಹುದು. ಇಂತಹ ಬದುಕನ್ನು ಸವೆಸುವ ಹಲವರನ್ನು ನಮ್ಮ ಕಣ್ಣಮುಂದೆ ಜೀವಂತ ಉದಾಹರಣೆಯಂತೆ ಕಾಣಸಿಗುತ್ತಾರೆ.

ಈಗ ಪ್ರಪಂಚವು ವೈಜ್ಞಾನಿಕ ಯುಗಕ್ಕೆ ದಾಪುಗಾಲು ಇಡುತ್ತಿದೆ. ಹೆಣ್ಣಿನಮಟ್ಟಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹವಿದೆ. ಆ ಮೂಲಕ ಆಕೆ ಆರ್ಥಿಕ ಸ್ವಾವಲಂಬನೆಯನ್ನು ಪಡೆದುಕೊಂಡು ಮಾನಸಿಕವಾಗಿ ಶಕ್ತಿ ಪಡೆದಾಗ ಮಾತ್ರ ಸ್ತ್ರೀ ಸಬಳಲು ಎಂಬುದು ನೇಮಿಚಂದ್ರ ಅವರ ಚಿಂತನೆಯ ಅಭಿಪ್ರಾಯ. ಅವರು ತಮ್ಮ ಬೌದ್ಧಿಕ ಶಕ್ತಿಯ ಅನುಭವದ ಹಿನ್ನೆಲೆಯಲ್ಲಿ ಇದನ್ನು ಒಂದೊಂದು ಕಥೆಯಲ್ಲೂ ವಿಸ್ತಾರವಾಗಿ ಚಿತ್ರಿಸುತ್ತಾ ಹೋಗುವುದನ್ನು ಕಾಣಬಹುದು.

ಸಮಾಜದ ಕಟ್ಟಳೆಗಳಿಗೆ ತಲೆಬಾಗಿ ಕಣ್ಣುಮುಚ್ಚಿ ನೇರವಾದ ಮಾರ್ಗದಲ್ಲಿ ಜೀವನ ಸವೆಸುವುದು ಸುಲಭದ ಹಾದಿ. ಆದರೆ ಆ ತೊಡಕುಗಳನ್ನುಎದುರಿಸಿ, ಮುನ್ನುಗ್ಗುವುದು ಅಷ್ಟುಸುಲಭವಲ್ಲ. ಇಂಥವನ್ನು ಬರಹವೆಂಬ ಅಸ್ತ್ರದ ಮೂಲಕ ಸಾಧಿಸಿ ಹೊಸ ಲೋಕವನ್ನು ಸೃಷ್ಟಿಸಲು ಸಾಧ್ಯ ಎಂಬುದನ್ನು ಇವರ ಬರಹಗಳು ಮಾದರಿಯಾಗಿ ನಿಲ್ಲುತ್ತವೆ. ಇವರ ಕತೆಗಳಲ್ಲಿ ಸ್ವಾರಸ್ಯವಿದೆ ; ವೈವಿಧ್ಯತೆಯಿದೆ ; ಹಲವು ಸಮಸ್ಯೆಗಳ ವಿಶ್ಲೇಷಣೆ ಹಾಗೂ ಪರಿಹಾರವಿದೆ; ಅವುಗಳನ್ನು ಎದುರಿಸುವ ಪ್ರತಿರೋಧ ಚೈತನ್ಯವಿದೆ. ಇವನ್ನೆಲ್ಲ ನೇಮಿಚಂದ್ರರು ತಮ್ಮ ಕಥೆಗಳಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇದರಿಂದ ಇವರ ಕಥೆಗಳನ್ನು ಮತ್ತೆ ಮತ್ತೆ ಓದಬೇಕು ಎಂದೆನಿಸುತ್ತದೆ.

ಕುಟಂಬ ಸಂಬಂಧಗಳು ಬಹಳಷ್ಟು ಬೇಡುತ್ತವೆ ಮತ್ತು ನಿರ್ಬಂಧಿಸುತ್ತವೆ. ಆದ್ದರಿಂದಲೇ ಅವುಗಳು ಎಷ್ಟೋ ಸಾರಿ ಕಾಲಿಗೆ ತೊಡಕಾಗುತ್ತದೆ. ಇದನ್ನೇ ಬಗೆಹರಿಸಿಕೊಳ್ಳುವ ಸಾಮರ್ಥ್ಯ ಹೆಣ್ಣಿಗಿದೆ. ಹೆಣ್ಣಿಗೆ ಶಿಕ್ಷಣ, ಉದ್ಯೋಗ, ಆರ್ಥಿಕ

ಸ್ವಾವಲಂಬನೆ ಮುಖ್ಯವಾಗಿರುವಷ್ಟೇ ಪ್ರಖರ ವೈಚಾರಿಕ ಅಸ್ಮಿತೆಯೊಂದನ್ನು ಪಡೆದುಕೊಂಡು ತನ್ನತನವನ್ನೇ ಶೋಧಿಸಿಕೊಳ್ಳುವುದೂ ಮುಖ್ಯವಾಗಿರುತ್ತದೆ.

ಕ್ರಿಯಾತ್ಮಕವಾದ ತನ್ನತನದ ಶೋಧನೆಯಿಂದ ಮಾನವೀಯ ದೃಷ್ಟಿಕೋನ ಮಾಡಲು ಸಾಧ್ಯವಾಗುತ್ತದೆ. ದಿಟವಾದ ಪ್ರೀತಿ ಮತ್ತು ಕಳಕಳಿಯನ್ನು ಆಧರಿಸಿದ ಒಂದು ಸಂಬಂಧ ಕೌಟುಂಬಿಕವಾಗಿ, ಸಾಮಾಜಿಕವಾಗಿ ಸಾಧ್ಯವಾದರೆ ಮಹಿಳೆಯರ ಸಮಸ್ಯೆಗೆ ರಚನಾತ್ಮಕ ಪರ್ಯಾಯ ಪ್ರಾಪ್ತವಾದಂತೆ ಆಗುತ್ತದೆ.

ಈ ಹಿನ್ನೆಲೆಗಳಲ್ಲಿ ನೇಮಿಚಂದ್ರರ ಬಹುಪಾಲು ಕಥೆಗಳಲ್ಲಿ ಈ ಪರ್ಯಾಯಗಳ ಅನೇಕ ರಚನಾತ್ಮಕ ಮಾದರಿಗಳನ್ನು ಕಾಣುತ್ತೇವೆ.

## ಕೊನೆ ಟಿಪ್ಪಣಿಗಳು

೧. ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಸಂಪುಟ–೩ : ೨೦೧೫–ಪು.೪
೨. ಅದೇ : ಪು.೪
೩. ಮಹಿಳಾ ಸಾಹಿತ್ಯ ಸಮೀಕ್ಷೆ : ೨೦೦೪–ಪು.೧೪೯
೪. ಲೇಖಕರ ಸಂದರ್ಶನ
೫. ಯಾದ್ ವಶೇಮ್ : ೨೦೦೭–ಪು.೨೯
೬. ಅದೇ : ಪು.೨೯
೭. ಅದೇ : ೩೦
೮. ಬದುಕು ಬದಲಾಯಿಸಬಹುದು : ೧೯೯೮ ; ಪು.೭೮
೯. ಲೇಖಕರ ಸಂದರ್ಶನ
೧೦. ನಾನೇಕೆ ಬರೆಯುತ್ತೇನೆ : ಪು.೪
೧೧. ಯಾದ್ ವಶೇಮ್ : ೨೦೦೭–ಪು.೨೬೪
೧೨. ಅದೇ : ೨೬೩
೧೩. ಅದೇ : ೨೬೫
೧೪. ಇಲ್ಲಿಯವರೆಗಿನ ನೇಮಿಚಂದ್ರರ ಕಥೆಗಳು : ೨೦೦೧–ಪು.೫೭
೧೫. ಅದೇ : ಪು.೮೬
೧೬. ಅದೇ : ಪು.೧೨೧
೧೭. ಅದೇ : ಪು.೧೧೭
೧೮. ಅದೇ : ಪು.೧೭೭

*****

# ಅಧ್ಯಾಯ – ೬

# ಉಪಸಂಹಾರ

ಸಾಹಿತ್ಯದ ಹಲವಾರು ಪ್ರಕಾರಗಳಾದ ಕತೆ, ಕಾದಂಬರಿ, ಕಾವ್ಯ, ವಿಮರ್ಶೆ ಹೀಗೆ ಅನೇಕ ಕ್ಷೇತ್ರಗಳಲ್ಲಿ ಮಹಿಳೆಯರು ಸಾಹಿತ್ಯ ಸಾಧನೆ ಮಾಡಿದ್ದಾರೆ. ಆದರೆ ಪ್ರವಾಸ ಕಥನವನ್ನು ಕುರಿತು ಕೆಲಸ ಮಾಡಿದ ಮಹಿಳೆಯರ ಸಂಖ್ಯೆ ತೀರ ಕಡಿಮೆ ಪ್ರಮಾಣದಲ್ಲಿ ಇದ್ದರೂ, ಪ್ರತಿಯೊಂದು ಮಹಿಳಾ ಪ್ರವಾಸಕಥನಗಳು ಸಂಸ್ಕೃತಿಯ ಅಧ್ಯಯನದ ಹಿನ್ನೆಲೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅಂದರೆ, ದೇಶ–ವಿದೇಶಗಳಿಗೆ ಭೇಟಿಕೊಟ್ಟು ಪ್ರವಾಸಕಥನಗಳನ್ನು ರಚಿಸಿರುವ ಪ್ರತಿಯೊಬ್ಬ ಮಹಿಳೆಯರು, ತಮ್ಮ ಅನುಭವಗಳ ಜೊತೆಗೆ ಆಯಾ ದೇಶಗಳ ಜನರ ಮತ್ತು ಸಮಾಜದ ಭಿನ್ನ–ವಿಭಿನ್ನ ನೆಲೆಗಳನ್ನು ಕುರಿತು ಆಳವಾಗಿ ಚರ್ಚೆ ಮಾಡುತ್ತಾರೆ. ಈ ಮೂಲಕ ಜಗತ್ತಿನ ವಿವಿಧ ದೇಶಗಳ ಜೀವನ ದರ್ಶನವನ್ನು ಪ್ರತಿಬಿಂಬಿಸುತ್ತಾರೆ. ಜೊತೆಗೆ, "ಬಿಡಿ ಬಿಡಿ ಮಹಿಳೆಯರ ಪ್ರವಾಸವೇ? ಅದು ವಿದೇಶ ಪ್ರವಾಸ! ಸೀರೆ ಬಟ್ಟೆ, ಒಡವೆ ವಸ್ತ್ರ, ಬ್ಯಾಗು ಪರ್ಸು, ಪಾತ್ರೆ ಪದಾರ್ಥ! ಹೆಂಗಸರ ಪ್ರವಾಸ ಊರಿಂದ ಊರಿಗಲ್ಲ ಅಂಗಡಿಯಿಂದ ಅಂಗಡಿಗೆ" ಎಂದು ತಮ್ಮ ಪ್ರವಾಸದ ಬಗ್ಗೆ ಲಘುವಾಗಿ ಆಡುವ ಮಾತುಗಳನ್ನು ಸುಳ್ಳುಗೊಳಿಸಿದ್ದಾರೆ. ಇದಕ್ಕೆ ಈವರೆಗೆ ಮಾಡಿರುವ 'ನೇಮಿಚಂದ್ರ ಅವರ ಪ್ರವಾಸ ಕಥನಗಳು' ಎಂಬ ಹಿನ್ನೆಲೆಯಲ್ಲಿನ ಅಧ್ಯಯನ ಉತ್ತಮ ಸಾಕ್ಷಿಯಾಗುತ್ತದೆ.

ಈ ಅಧ್ಯಯನದಿಂದ ದಕ್ಷಿಣ ಅಮೆರಿಕಾದಲ್ಲಿರುವ ಐತಿಹಾಸಿಕ ಪ್ರಸಿದ್ಧ ಸ್ಥಳಗಳು ಮತ್ತು ಘಟನೆಗಳ ಪರಿಚಯವಾಗುತ್ತದೆ. ಅಷ್ಟೇ ಅಲ್ಲದೆ ನೇಮಿಚಂದ್ರ ಅವರು ಜಗತ್ತಿನ ಪ್ರಮುಖ ಮಹಿಳಾ ವಿಜ್ಞಾನಿಗಳನ್ನು ಕುರಿತು ಪುಸ್ತಕವನ್ನು ಬರೆದಿದ್ದಾರೆ. ಅವರ ಬದುಕಿಗೆ ಜೋಡಿಸಿದ ಆ ಎಲ್ಲ ಸ್ಥಳಗಳು ಸಹ ಪರಿಚಯವಾಗುತ್ತದೆ. ಕನ್ನಡ ಸಾಹಿತ್ಯ ಲೋಕಕ್ಕೆ ನೇಮಿಚಂದ್ರರ ಕೊಡುಗೆ ಅಪಾರವಾದದ್ದು. ಸಾಹಿತ್ಯ, ವಿಜ್ಞಾನ ಮತ್ತು ಮಹಿಳಾ ಅಧ್ಯಯನ ಇವರ ಆಸಕ್ತಿಯ ವಿಷಯಗಳಾದ್ದರಿಂದ ಪ್ರವಾಸವನ್ನು ಕೈಗೊಂಡು ಪ್ರವಾಸ ಕಥನವನ್ನು ರಚಿಸಿದ್ದಾರೆ. ಇವರ ಕೃತಿಗಳು ಹೊಸ ಹೊಸ ದರ್ಶನಾಂಶಗಳನ್ನು ಸ್ಫುರಿಸುತ್ತವೆ. ಅಲ್ಲದೆ ಪ್ರವಾಸ ಸಾಹಿತ್ಯದಲ್ಲಿ ಹೊಸ ದೃಷ್ಟಿಕೋನವನ್ನು, ಪ್ರವಾಸದ ನೂತನ ಅನುಭವವನ್ನು ಸಹೃದಯರಿಗೆ ನೀಡುತ್ತವೆ. ಈ ಮೂಲಕ ಇವರ ಪ್ರವಾಸ ಕಥನಗಳು ಹೊಸ ಸಂವೇದನೆಯನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡಿದೆ. ಸಮಾಜವನ್ನು ಕಟ್ಟುವ ಮತ್ತು ಸಾಮಾಜಿಕ ಬದಲಾವಣೆಯನ್ನು ತರುವ ಕೆಲಸವನ್ನು ಮಾಡುತ್ತಿದ್ದಾರೆ.

ಅಷ್ಟೇ ಅಲ್ಲದೆ ಗಟ್ಟಿ ತಾತ್ವಿಕತೆ, ನೇರ ನಿರೂಪಣೆಯ ಕತೆಗಳನ್ನು ಭಾವಗೀತಾತ್ಮಕವಾಗಿ ಬರೆದು ಹೊಸ ಪೀಳಿಗೆಯ ಲೇಖಕಿಯರಲ್ಲಿ ಒಂದು ಗಟ್ಟಿ ಸ್ಥಾನ ಪಡೆದುಕೊಂಡರು.

ಅಂತಃಕರಣಪೂರಿತವಾಗಿ ಮಹಿಳೆಯರ ಸಮಾನತೆಗಾಗಿ ಹೋರಟ, ಪ್ರಧಾನ ಸಂಸ್ಕೃತಿಯ ಎಡೆಯಲ್ಲೇ ಒಂದು ಸಮಾನಾಂತರ ಸಂಸ್ಕೃತಿ, ಮೌಲ್ಯ, ಧ್ಯೇಯೋದ್ದೇಶಗಳನ್ನು ಪ್ರತಿಪಾದಿಸುವ ಪ್ರಯತ್ನಗಳ ಕುರಿತು ಇಲ್ಲಿ ಬರೆದಿದ್ದಾರೆ.

ಸ್ತ್ರೀವಾದಿ ದೃಷ್ಟಿಕೋನ, ಯಾವುದೇ ಸುಶಿಕ್ಷಿತ, ಬುದ್ಧಿವಂತ, ಸಂವೇದನಾಶೀಲ ಮಹಿಳೆಯಲ್ಲಿ ಹೂವರಳವಷ್ಟೇ ಸಹಜವಾಗಿ ಇವರ ಕೃತಿಗಳಲ್ಲಿ ಮೂಡಿರುತ್ತದೆ. ಇವರ ತಾತ್ವಿಕ ಕಾಳಜಿಗಳು ಶೋಷಿತ ಮಹಿಳೆಯರು ತಮ್ಮ ವೈಯಕ್ತಿಕ ಬದುಕನ್ನು ನೇರ ಮಾಡಿಕೊಳ್ಳಲು ನಮ್ಮಿಷ್ಟದಂತೆ ಬದುಕಲು ಸಾಧ್ಯವಾಗಿಸುತ್ತದೆ. ಹೆಂಗಸರ ಮನಸ್ಸಿನಲ್ಲಿ ಅರಿವಿನ ಕಿಡಿಯನ್ನು ಹೊತ್ತಿಸುತ್ತದೆ. ಇವರ ಪ್ರವಾಸ ಕಥನದ ಮೂಲಕ 'ಗಂಡು ನಿರೀಕ್ಷೆ'ಗಳಿಗೆ ತಕ್ಕಂತೆ ಬದುಕುವ ಕಲೆ ಮೈಗೂಡಿಸಿಕೊಂಡಿರುವ ಬಹುಮಂದಿ ಸ್ತ್ರೀಯರು ತಮ್ಮ ಕವಚ ಕಳಚಿ ಸ್ವಂತಿಕೆಯ ನಿಚ್ಚಳ ಪ್ರಕಾಶಕ್ಕೆ ತೆರೆದುಕೊಳ್ಳುತ್ತದೆ. ಮಹಿಳೆಯು ಬೌದ್ಧಿಕ ಸಂಪತ್ತನ್ನು ತನ್ನದಾಗಿಸಿಕೊಂಡಾಗ ಸ್ವಾವಲಂಬನೆ ಬದುಕನ್ನು ಕಂಡುಕೊಳ್ಳಬಹುದು ಎಂಬುದು ಮನದಟ್ಟಾಗುತ್ತದೆ. ಈ ನಿಟ್ಟಿನಲ್ಲಿ ನೇಮಿಚಂದ್ರರ ಕೃತಿಗಳು ಸ್ಫೂರ್ತಿದಾಯಕವಾದ ಆದರ್ಶದ ದೀಕ್ಷೆ ಕೊಡುವ ಬರಹಗಳಿವೆ.

ವಿಪುಲವಾಗಿ ಓದಿ, ದೇಶ ಸಂಚಾರ ಮಾಡಿ, ಹೋದೆಡೆಗಳಲ್ಲೆಲ್ಲ ತನ್ನ ಆಸಕ್ತಿಯ ವಿಷಯವನ್ನು ಚುರುಕಾಗಿ ಗ್ರಹಿಸುತ್ತಾರೆ. ತತ್‌ಕ್ಷಣ ಮಾಹಿತಿ ಸಂಗ್ರಹಿಸುವ ಕಾರ್ಯಕ್ಕೆ ಮುಂದಾಗುತ್ತಾರೆ. ಹೀಗಾಗಿ ಅವರ ಬಹುತೇಕ ಕೃತಿಗಳು ಪ್ರವಾಸವನ್ನು ಕೈಗೊಂಡು ಕೃತಿಯ ಬಗ್ಗೆ ಖಚಿತ ವಿಚಾರ ಮತ್ತು ಅಭಿಪ್ರಾಯವನ್ನು ಕಲೆಹಾಕುತ್ತಾರೆ. ಒಂದು ತಪಸ್ಸೆಂಬಂತೆ ಅವುಗಳನ್ನು ಬೆಂಬತ್ತುವ ಲೇಖಕಿಯ ಅರ್ಥಪೂರ್ಣ ಕೃತಿಗಳು ಹೊರಹೊಮ್ಮಿದವು.

ಈ ಸಂಶೋಧನಾ ನಿಬಂಧದಲ್ಲಿ ಇದುವರೆಗೆ ನೇಮಿಚಂದ್ರ ಪ್ರವಾಸ ಕಥನಗಳನ್ನು ತೌಲನಿಕವಾಗಿ ಸಮೀಕ್ಷಿಸುತ್ತಾ ಬೇರೆ ಬೇರೆ ದೇಶಗಳ ಸಂಸ್ಕೃತಿಗಳ ಪರಿಚಯದಿಂದ ಅಲ್ಲಿಯ ಇತಿಹಾಸ ಭೂಗೋಳ ಹಿನ್ನೆಲೆಗಳನ್ನು ಶೋಧಿಸಲು ಸಾಧ್ಯವಾಗಿದೆ. ಅಲ್ಲಿಯ ಜನರ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ಮುಂತಾದವುಗಳ ಸಂಸ್ಕೃತಿಗಳನ್ನು ಅರ್ಥಪೂರ್ಣವಾಗಿ ಹೊಸ ಪರಿಕಲ್ಪನೆಗಳ ಅಡಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಈ ಹೊತ್ತಿನಲ್ಲಿ ಜಾಗತಿಕವಾಗಿ ತಲೆದೋರಿರುವ ಹೊಸಬಗೆಯ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುವ ಪ್ರಯತ್ನ ಮಾಡಲಾಗಿದೆ. ಮುಖ್ಯವಾಗಿ ಜನರ ಬದುಕನ್ನು ಮುಖಾಮುಖಿಯಾಗಿಸಿಕೊಂಡು ಮಾನವೀಯ ಬಾಂಧವ್ಯದ ಬೆಸುಗೆಯ ಆಳವಾದ ಅಧ್ಯಯನದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಪ್ರಸ್ತುತ ಸಂಶೋಧನ ನಿಬಂಧದ ಶೀರ್ಷಿಕೆ 'ನೇಮಿಚಂದ್ರ ಅವರ ಪ್ರವಾಸ ಕಥನಗಳು' ಆಗಿದ್ದು, ಒಟ್ಟು ಆರು ಮುಖ್ಯ ಅಧ್ಯಾಯಗಳನ್ನು ಒಳಗೊಂಡಿದೆ. ಕನ್ನಡ ಸಾಹಿತ್ಯದಲ್ಲಿ ಇದುವರೆಗೂ ಹೊರಹೊಮ್ಮಿರುವ ಪ್ರವಾಸ ಕಥನಗಳ ವಿಕಾಸದ ಹಾದಿಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು, ನೇಮಿಚಂದ್ರ ಪ್ರವಾಸ ಕಥನಗಳ ಮುಖ್ಯ ನೆಲೆಗಳನ್ನು ಶೋಧಿಸಲು ಪ್ರಯತ್ನಿಸಿದೆ. ಇವರ ವಿವಿಧ ಕಾಲದಲ್ಲಿ ರಚನೆಯಾದ ಎರಡು ಪ್ರವಾಸ ಸಾಹಿತ್ಯವು ವಿಭಿನ್ನತೆಯಿಂದ ಕೂಡಿದೆ. ಇವರ ಮೊದಲ ಪ್ರವಾಸ ಕಥನದಲ್ಲಿ ಮಹಿಳಾ ವಿಜ್ಞಾನಿಗಳ ನೆಲೆಯನ್ನು ಹುಡುಕಿಕೊಂಡು ನೆಲೆಬೆಲೆಯನ್ನು ಗುರುತಿಸಿದ್ದಾರೆ. ಜಗತ್‌ಪ್ರಸಿದ್ಧ ಸಾಹಿತಿಗಳ ಸ್ಥಳಗಳನ್ನು ಶೋಧಿಸಿ ಅವರ ಸಾಹಿತ್ಯಕ್ಕೆ ಸ್ಫೂರ್ತಿಯನ್ನುಂಟುಮಾಡಿದ ಜಾಗಗಳನ್ನೆಲ್ಲಾ ಶೋಧಿಸಿದ್ದಾರೆ. ಹಾಗೆಯೇ ನಾಗರಿಕತೆ ನೆಲೆಯಾದ ಪಾಂಪೆ ಮತ್ತು ಇನ್ನಿತರ ಮ್ಯೂಸಿಯಂಗಳಿಗೆ ಭೇಟಿ ನೀಡಿ ನಮ್ಮೆಲ್ಲರ ಬೌದ್ಧಿಕ ಸಂಪತ್ತನ್ನು ವೃದ್ಧಿಸಿದ್ದಾರೆ. ಅದರಲ್ಲೂ ಮುಖ್ಯವಾಗಿ ಆರ್ಥಿಕ, ರಾಜಕೀಯ, ಸಂಸ್ಕೃತಿ ಮತ್ತು ಜೀವನ ದರ್ಶನವನ್ನು ಎಳೆಎಳೆಯಾಗಿ ಕೃತಿಯ ಮೂಲಕ ಸಾದರಪಡಿಸಿದ್ದಾರೆ. ಇದರಲ್ಲಿ ಮಹಿಳಾ ಹೋರಾಟದ ಬದುಕು ಮತ್ತು ಬಡರಾಷ್ಟ್ರಗಳ ಮೇಲೆ ಶ್ರೀಮಂತ ರಾಷ್ಟ್ರಗಳ ದೌರ್ಜನ್ಯವನ್ನು ಸಹ ಕಣ್ಣಿಗೆ ಕಟ್ಟಿಕೊಂಡಿದ್ದಾರೆ. ಮನರಂಜನೆಯ ಪ್ರವಾಸ ಕೃತಿಯಾಗದೇ ಸಹೃದಯರ ಸುಪ್ತ ಪ್ರತಿಭೆಯನ್ನು ಎಚ್ಚರಿಸುವ ಮತ್ತು ಆಲೋಚನಾ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ. ಅಲ್ಲದೆ ವೈವಿಧ್ಯದೊಳಗೆ ಬಹುತ್ವವನ್ನು ಹುಡುಕುತ್ತದೆ. ಇವರ ಪ್ರವಾಸ ಸಾಹಿತ್ಯ ವಿವಿಧ ಜನರ ಆಚಾರವಿಚಾರಗಳನ್ನು, ಅವರ ಸಂಸ್ಕೃತಿಯ ದರ್ಶನವನ್ನು ನೀಡುವಂತದ್ದಾಗಿದೆ.

ಮೊದಲನೆ ಅಧ್ಯಾಯದಲ್ಲಿ 'ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತಿದೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೇಮಿಚಂದ್ರ ಅದರ ಪ್ರವಾಸ ಸಾಹಿತ್ಯದಲ್ಲಿನ ಮಹತ್ವ, ಗುರಿ ಮತ್ತು ಸಾಧ್ಯತೆಗಳನ್ನು ಸಂಶೋಧನೆಯ ವೈಧಾನಿಕತೆಯ ಮೂಲಕ ವಿವರಿಸಲಾಗಿದೆ. ಪ್ರವಾಸ ಸಾಹಿತ್ಯದ ಅಧ್ಯಯನದಿಂದ ಕೇವಲ ಮನರಂಜನೆ ಚಿಂತನೆ ಸೃಜನಶೀಲತೆ, ಮಾತ್ರವಲ್ಲ, ಜ್ಞಾನವು ಲಭಿಸುತ್ತದೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ 'ಪ್ರವಾಸ ಮತ್ತು ಪ್ರವಾಸ ಸಾಹಿತ್ಯ'ವನ್ನು ಕುರಿತು ವಿಶ್ಲೇಷಿಸಲಾಗಿದೆ. ಇದರಲ್ಲಿ ಪ್ರವಾಸದ ಅರ್ಥ ಮತ್ತು ಪರಿಕಲ್ಪನೆ, ಪ್ರವಾಸ ಸಾಹಿತ್ಯದ ಸ್ವರೂಪ–ಲಕ್ಷಣಗಳು, ಪ್ರವಾಸ ಸಾಹಿತ್ಯದ ವಿಂಗಡಣೆ, ಪ್ರವಾಸ ಸಾಹಿತ್ಯದ ಮಹತ್ವ ಮತ್ತು ಪ್ರವಾಸ ಸಾಹಿತ್ಯ ಬೆಳೆದು ಬಂದ ಬಗೆಯನ್ನು ಸ್ಥೂಲವಾಗಿ ಚರ್ಚಿಸಲಾಗಿದೆ. ಪ್ರವಾಸ ಸಾಹಿತ್ಯದ ಸಂಸ್ಕೃತಿ ಅಧ್ಯಯನದಿಂದ ವೈವಿಧ್ಯಮಯ ಬದುಕಿನ ಸಂಸ್ಕೃತಿಗಳನ್ನು ಆಸಕ್ತಿಯಿಂದ ಓದಲು, ಕೇಳಲು, ಪರಿಚಯಿಸಿಕೊಳ್ಳಲು, ಅಲ್ಲಲ್ಲಿ ನಮ್ಮ ಸಂಸ್ಕೃತಿಗಳೊಂದಿಗೆ ಸಮಕಾಲೀನದಲ್ಲಿ

ಇಟ್ಟು ಚರ್ಚಿಸಲಾಗಿದೆ. ಪ್ರಾಚೀನ ಕಾಲದಲ್ಲಿನ ಪ್ರವಾಸದ ಉದ್ದೇಶ, ಇತ್ತೀಚಿನ ಪ್ರವಾಸದ ಉದ್ದೇಶವನ್ನು ಚರ್ಚಿಸಲಾಗಿದೆ. ಪ್ರವಾಸದಲ್ಲಿ ಹಲವಾರು ಲಕ್ಷಣಗಳು ಪ್ರಯೋಜನಗಳನ್ನು ತಿಳಿಸುತ್ತಾ, ಪ್ರವಾಸ ಸಾಹಿತ್ಯದಲ್ಲೂ ಹಲವು ಪ್ರಕಾರಗಳಿವೆ ಎಂಬುದನ್ನು ವಿವರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ 'ನೇಮಿಚಂದ್ರ ಅವರ ಬದುಕು-ಬರಹ : ಪರಿಚಯ'ದ ಶೀರ್ಷಿಕೆಯಲ್ಲಿ ಜನನ, ಶಿಕ್ಷಣ, ಉದ್ಯೋಗ, ಕುಟುಂಬದ ವಿವರಗಳು, ಸಾಹಿತ್ಯದ ಕೊಡುಗೆ, ಮಹಿಳಾ ಅಧ್ಯಯನ ಮತ್ತು ಅವರ ಸಾಧನೆ, ಅವರಿಗೆ ಬಂದ ಪ್ರಶಸ್ತಿಗಳು, ಕೃತಿಗಳನ್ನು ತಿಳಿಸಲಾಗಿದೆ.

ಸಂಶೋಧನಾ ನಿಬಂಧದ ಹೃದಯಭಾಗವಾದ ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ನೇಮಿಚಂದ್ರ ಅವರ ಪ್ರವಾಸ ಸಾಹಿತ್ಯದ ಅಧ್ಯಯನ ಮತ್ತು ಅವರ ಪ್ರವಾಸ ವಿನ್ಯಾಸದ ಕಥನಗಳ ಅಧ್ಯಯನ ಕುರಿತು ಆಳವಾಗಿ ಚರ್ಚಿಸಲಾಗಿದೆ.

ಪ್ರತಿಯೊಬ್ಬ ಮನುಷ್ಯನಲ್ಲೂ ಸಂಕುಚಿತ ಮನೋಭಾವ ಮನೆ ಮಾಡಿದ್ದು, ಇವರ ಪ್ರವಾಸ ಕಥನಗಳು ಆ ಸಂಕುಚಿತತೆಯನ್ನು ಕಳೆಯುವ ಹಾಗೂ ಕತ್ತಲನ್ನು ಹೋಗಲಾಡಿಸುವ 'ವಿಶ್ವ ಜ್ಞಾನ ದೀವಿಗೆ'ಗಳಾಗಿ ಕಾರ್ಯನಿರ್ವಹಿಸಿದೆ.

ನೇಮಿಚಂದ್ರ ಅವರು ಲಂಡನ್, ಫ್ರಾನ್ಸ್, ರೋಮ್, ದಕ್ಷಿಣ ಅಮೆರಿಕಾ ಮೊದಲಾದ ೨೦ಕ್ಕೂ ಹೆಚ್ಚು ದೇಶಗಳನ್ನು ಸುತ್ತಿಬಂದು ಎರಡು ಪ್ರವಾಸ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದ್ದು, ಒಂದಕ್ಕಿಂತ ಇನ್ನೊಂದು ಭಿನ್ನವಾಗಿ, ಹೊಸತನದಿಂದ ಕೂಡಿದೆ ಎಂಬುದನ್ನು ಚರ್ಚಿಸಲಾಗಿದೆ. ಅಲ್ಲದೆ ಪ್ರವಾಸ ಹಿನ್ನೆಲೆಯುಳ್ಳ ಇವರ ಕಾದಂಬರಿ ಮತ್ತು ಆಯ್ದು ಕೆಲವು ಪ್ರಮುಖ ಕತೆಗಳನ್ನು ಅಧ್ಯಯನದ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ.

ನೇಮಿಚಂದ್ರ ಅವರ ಎರಡು ಪ್ರವಾಸ ಕೃತಿಗಳಾದ "ಒಂದು ಕನಸಿನ ಪಯಣ" ಮತ್ತು "ಪೆರುವಿನ ಪವಿತ್ರ ಕಣಿವೆಯಲ್ಲಿ" ಕೃತಿಗಳ ಬಗ್ಗೆ ವಿವರಿಸಲಾಗಿದೆ. "ಒಂದು ಕನಸಿನ ಪಯಣ" ಪ್ರವಾಸ ಕಥನವು ನೇಮಿಚಂದ್ರ ಅವರು ಮಾಡಿದ ಲಂಡನ್, ಫ್ರಾನ್ಸ್, ರೋಮ್ ಮುಂತಾದ ಸ್ಥಳಗಳಿಗೆ ಭೇಟಿ ನೀಡಿದ ಪ್ರವಾಸ ಕಥನವಾಗಿದ್ದು, ಮಹಿಳಾ ಸಾಧಕಿಯರ ಜೀವನ ವಿಚಾರಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ಇತಿಹಾಸ ಪುಟದಲ್ಲಿ ಮರೆಯಾಗುತ್ತಿರುವ ಮಹಿಳಾ ವಿಜ್ಞಾನಿಗಳ ಮೂಲವನ್ನು ಶೋಧಿಸಿ ಮುಂದಿನ ಮಹಿಳೆಯರಿಗೆ ಮಾದರಿಯಾಗುವಂತೆ ಅವರ ತತ್ವ ಆದರ್ಶಗಳನ್ನು ಚರ್ಚಿಸಲಾಗಿದೆ. ಪ್ರಸಿದ್ಧ ಸಾಹಿತಿಗಳ ಕೃತಿಯ ಹಿನ್ನೆಲೆಯಲ್ಲಿನ ಪರಿಸರವನ್ನು ಸಮಕಾಲೀನ ಸಂದರ್ಭದಲ್ಲಿ ಇಟ್ಟು ನೋಡಲಾಗಿದೆ.

"ಪೆರುವಿನ ಪವಿತ್ರ ಕಣಿವೆಯಲ್ಲಿ" ಎಂಬ ಪ್ರವಾಸ ಕಥನವು ನೇಮಿಚಂದ್ರ ಅವರು ಮಾಡಿದ ದಕ್ಷಿಣ ಅಮೆರಿಕಾದ ಕಥನವಾಗಿದ್ದು ಕಾದಂಬರಿ ತಂತ್ರದ ಹೊಸತನವನ್ನು ಮತ್ತು

ಈ ಕಥನದಲ್ಲಿ ಅಮೆರಿಕಾ ಮತ್ತು ಭಾರತಗಳ ನಡುವೆ ಮಾನವೀಯ ಮೌಲ್ಯ, ರಾಜಕೀಯ, ಧಾರ್ಮಿಕ ವಿಚಾರಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ಭಾರತದಂತೆಯೇ ಪುರಾತನ ನಾಗರಿಕತೆ ಚರಿತ್ರೆಯನ್ನು ಹೊಂದಿರುವ ಪೆರು ದೇಶದ ಖಗೋಳಶಾಸ್ತ್ರ, ಭೂಗೋಳ, ಸಸ್ಯ, ಪ್ರಾಣಿ, ಖನಿಜ, ತಂತ್ರಜ್ಞಾನ, ಜ್ಯಾಮಿತಿಶಾಸ್ತ್ರ, ವಿಜ್ಞಾನ, ನಂಬಿಕೆ, ಸಂಪ್ರದಾಯ, ಭಾಷೆ, ಆಡಳಿತ, ಬಡತನ, ಕಲೆ, ಹಸಿವು, ಜ್ಞಾನ – ಹೀಗೆ ಸರ್ವತೋಮುಖ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರವಾಸಿಗನಿಗೆ ತನ್ನ ಬದುಕಿನಲ್ಲಿ ದಿನನಿತ್ಯದ ನೋಟಕ್ಕಿಂತ ಭಿನ್ನವಾದುದ್ದನ್ನು ಕಂಡಾಗ ಇನ್ನೊಬ್ಬರೊಂದಿಗೆ ಹಂಚಿಕೊಳ್ಳಬೇಕೆಂಬ ಮನೋತ್ಕಟತೆಯಿಂದ ಪ್ರಜ್ಞಾಪೂರ್ವಕವಾಗಿ ಪ್ರತಿಪಾದಿಸಲಾಗಿದೆ. ಈ ಹಿನ್ನೆಲೆಯಲ್ಲಿ ಒಂದೊಂದು ಕೃತಿಯನ್ನು ಪರಸ್ಪರ ಹೋಲಿಸುತ್ತ ವಸ್ತುನಿಷ್ಠವಾಗಿ ಪರಿಶೀಲಿಸಲಾಗಿದೆ.

ನೇಮಿಚಂದ್ರ ಅವರ ಕಾದಂಬರಿ ಮತ್ತು ಕತೆಗಳಲ್ಲಿ ತೆರೆದುಕೊಳ್ಳುವ ಸಾಮಾನ್ಯ ಜೀವಿಗಳ ಜೀವನ ದರ್ಶನವನ್ನು ಕುರಿತು ವಿಶ್ಲೇಷಿಸಲಾಗಿದೆ. ಆಯಾ ಕಾಲದ ಬದುಕಿನ ಆಲೋಚನಾ ಕ್ರಮ ತಿಳುವಳಿಕೆಗಳು ಸಮಾಜದಲ್ಲಿ ಉಂಟಾಗುವ ವ್ಯತ್ಯಾಸ – ವೈರುದ್ಧ್ಯಗಳ ಬಗ್ಗೆ, ಯುದ್ಧಕ್ಕೆ ಬುನಾದಿ ಆಗುವುದರ ಬಗ್ಗೆ ಕೂಲಂಕಷವಾಗಿ ಚರ್ಚಿಸಲಾಗಿದೆ. ಹೊಸ ಸಂಶೋಧನೆಗಳ ಮೂಲಕ ಹೊಸ ವಿಷಯಗಳನ್ನು ಅರಿತು ಜ್ಞಾನಶಾಖೆಯನ್ನು ವೃದ್ಧಿಸುತ್ತಾ ವಿಸ್ತರಿಸಲಾಗಿದೆ. ಅದರ ಅಭ್ಯಾಸದಿಂದ ಇವುಗಳೊಳಗಿನ ಮಾನವ ಸ್ವಭಾವಗಳು ಚಲನವಲನಗಳು, ಅವರ ಇನ್ನಿತರ ಸಂಸ್ಕೃತಿಗಳನ್ನು ವರ್ತಮಾನದ ನೆಲೆಯಲ್ಲಿ ಇಟ್ಟು ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ನೇಮಿಚಂದ್ರ ಅವರು ತಮ್ಮ ಕನ್ನಡ ಸಾಹಿತ್ಯಕ್ಕೆ ನೀಡಿದ ಪ್ರವಾಸ ಸಾಹಿತ್ಯದಲ್ಲಿನ ವಿಶಿಷ್ಟ ಅಂಶಗಳನ್ನು ಗುರುತಿಸಿ, ಅವರ ಸಾಹಿತ್ಯಕ್ಕೆ ಇಂದು ನೆಲೆ–ಬೆಲೆ ಇರುವುದನ್ನು ತೋರಿಸಲಾಗಿದೆ. ಒಂದು ಸಂಸ್ಕೃತಿ ಇನ್ನೊಂದು ಸಂಸ್ಕೃತಿಯ ಕನ್ನಡಿಯಲ್ಲಿ ತನ್ನ ತಾನು ನೋಡಿಕೊಳ್ಳುವ ಕ್ರಿಯೆ ಕೂಡ ಆಗಿದ್ದು, ಈ ಮೂಲಕ ಸ್ವಮೌಲ್ಯ ಮಾಪನವು ಪ್ರವಾಸ ಕಥನಗಳಲ್ಲಿರುವ ಮಹತ್ವವಾದ ಸಾಂಸ್ಕೃತಿಕ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಜಾತಿ ಮತ ಭಾಷೆ ಮತ್ತು ದೇಶಗಳ ಹೆಸರಲ್ಲಿ ನಾವು ಕಟ್ಟಿಕೊಂಡಿರುವ ಸಣ್ಣತನಗಳನ್ನು ಕಳೆದುಹಾಕಿ ನೇಮಿಚಂದ್ರ ಅವರ ಜೀವನ ದರ್ಶನಗಳ ಬಹುಮುಖಗಳನ್ನು ಶೋಧಿಸುತ್ತಾ ಇವುಗಳಿಂದ ಹೊರಹೊಮ್ಮುವ ಜಾತ್ಯಾತೀತವಾದುದು ಮತ್ತು ದಾರ್ಶನಿಕವಾದುದನ್ನು ವಸ್ತುನಿಷ್ಠನೆಲೆಯಲ್ಲಿ ಚರ್ಚಿಸಲಾಗಿದೆ.

ಕೊನೆಯದಾಗಿ, ನೇಮಿಚಂದ್ರ ಅವರ ಪ್ರವಾಸ ಕೃತಿಯಲ್ಲಿ ಕೆಲವು ಮಿತಿಯನ್ನು ನೋಡಿದಾಗ ರಾಜಕೀಯ ವಿಶ್ಲೇಷಣೆಯಿಂದ ಪ್ರೇರಿತವಾದುದು, ಬಹುವಾಗಿ ತುಂಬಿಹೋಗಿದೆ

ಎಂದೆನ್ನಿಸುತ್ತದೆ. ಆದರೆ ಅದರಿಂದ ಆಚೆಗೆ ಸಾಮಾನ್ಯದಲ್ಲಿ ಅಸಾಮಾನ್ಯತೆಯನ್ನು ಗುರುತಿಸುವ ಪರಿ ವಿಶೇಷವಾದುದು ಮತ್ತು ಮೌಲಿಕವಾದುದ್ದನ್ನು ಕಾಣಬಹುದು. ಇವರ 'ಯಾವುದೇ ಆಡಂಬರ, ವೈಭವಕ್ಕೆ ಇಚ್ಛಿಸದೇ ವಾಸ್ತವವನ್ನು ವರ್ತಮಾನದ ನೆಲೆಯಲ್ಲಿ ಪ್ರತಿಪಾದಿಸುತ್ತ ತಮ್ಮ ಕೃತಿಗಳ ಮೂಲಕ ಭವಿಷ್ಯದ ಬದುಕಿಗೆ ಭದ್ರ ಬುನಾದಿಯನ್ನು ರೂಪಿಸುವ ಕೈದೀವಿಗೆಯಾಗಿದೆ.

# ಅನುಬಂಧ ೧

## ಆಕರ ಗ್ರಂಥಗಳು

### ೧. ಪ್ರಧಾನ ಆಕರಗಳು

ನೇಮಿಚಂದ್ರ : **ಒಂದು ಕನಸಿನ ಪಯಣ**
ಮಹಿಳಾ ಸಾಹಿತ್ಯಿಕಾ
ನವನಗರ, ಹುಬ್ಬಳ್ಳಿ, ೧೯೯೯

**ಪೆರುವಿನ ಪವಿತ್ರ ಕಣಿವೆಯಲ್ಲಿ**
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್
ಲಿಮಿಟೆಡ್, ಬೆಂಗಳೂರು, ೨೦೦೪

**ಯಾದ್ ವಶೇಮ್**
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್
ಲಿಮಿಟೆಡ್, ಬೆಂಗಳೂರು, ೨೦೦೭

**ಇಲ್ಲಿಯವರೆಗಿನ ನೇಮಿಚಂದ್ರರ ಕತೆಗಳು**
ಅಂಕಿತ ಪ್ರಕಾಶನ, ಬೆಂಗಳೂರು, ೨೦೦೧

### ೨. ಪೂರಕ ಆಕರಗಳು

ನೇಮಿಚಂದ್ರ : **ದುಡಿವ ಹಾದಿಯಲಿ ಜೊತೆಯಾಗಿ**
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್
ಲಿಮಿಟೆಡ್, ಬೆಂಗಳೂರು, ೨೦೦೭

**ಬೆಳಕಿನೊಂದು ಕಿರಣ ಮೇರಿಕ್ಯೂರಿ**
ಅಂಕಿತ ಪುಸ್ತಕ
ಬೆಂಗಳೂರು, ೧೯೯೩

**ಹೋರಾಟದ ಹಾದಿಯಲ್ಲಿ**
ಧೀಮಂತ ಮಹಿಳೆಯರು
ನವಕರ್ನಾಟಕ ಪ್ರಕಾಶನ
ಬೆಂಗಳೂರು, ೨೦೧೦

**ಥಾಮಸ್ ಆಲ್ವಾ ಎಡಿಸನ್**
(ಅಸಾಧ್ಯಗಳ ಸಾಧಕ)
ನವಕರ್ನಾಟಕ ಪ್ರಕಾಶನ
ಬೆಂಗಳೂರು, ೨೦೧೫

**ಮೊಹಮ್ಮದ್ ದಿಲಾವರ್**
(ಗುಬ್ಬಿಯ ಕರೆದರು ಮನೆಯಂಗಳಕೆ)
ನವಕರ್ನಾಟಕ ಪ್ರಕಾಶನ

ಬೆಂಗಳೂರು, ೨೦೧೫

ಮಹಿಳಾ ಅಧ್ಯಯನ
ಅಂಕಿತ ಪುಸ್ತಕ
ಬೆಂಗಳೂರು, ೨೦೦೧

## ಅನುಬಂಧ ೨

### ಪರಾಮರ್ಶನ ಗ್ರಂಥಗಳು


ಅಕ್ಕಮಹಾದೇವಿ : **ಮಹಿಳಾ ಸಾಹಿತ್ಯ**
ಚೇತನ ಬುಕ್‌ಹೌಸ್
ಮೈಸೂರು, ೨೦೧೧

ಅಮರೇಶ ನುಗಡೋಣಿ : **ಕನ್ನಡ ಸಂಶೋಧನೆಯ ವೈಧಾನಿಕತೆಗಳು(ಸಂ)**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೧೧

ಅನುಪಮ ನಿರಂಜನ : **ಅಂಗೈಯಲ್ಲಿ ಯುರೋ ಅಮೆರಿಕ**
ಡಿ.ವಿ.ಕೆ.ಮೂರ್ತಿ
ಮೈಸೂರು, ೧೯೮೪

ಆರ್ಯಾಂಬ ಪಟ್ಟಾಭಿ : **ಮಹಿಳಾ ಸಾಹಿತ್ಯ ಸಮೀಕ್ಷೆ (ಸಂ)**
ಶ್ರೀ ರಾಜೇಂದ್ರ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್
ಮೈಸೂರು, ೨೦೦೪

ಚಂದ್ರಭಾಗದೇವಿ : **ಗೆಜ್ಜೆಯ ಹೆಜ್ಜೆ ನುಡಿ**
ಲೋಕಶಿಕ್ಷಣ ಟ್ರಸ್ಟ್, ಬೆಂಗಳೂರು, ೧೯೭೧

ನಾಗೇಗೌಡ .ಎಚ್.ಎಲ್ : **ಪ್ರವಾಸಿ ಕಂಡ ಇಂಡಿಯಾ (ಸಂಪುಟ ೧-೫)**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು, ೧೯೮೩

ನಾರಾಯಣ ಬಿ.ಪವಾರ (ಪ್ರಧಾನ ಸಂಪಾದಕರು) : **ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ**
ಸಂಪುಟ-೩, ಕಾದಂಬರಿ, ಪ್ರಸಾರಾಂಗ
ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ
ವಿಜಾಪುರ

ಪೂರ್ಣಚಂದ್ರ ತೇಜಸ್ವಿ : **ದೇಶವಿದೇಶ-೩ (ಮಿಲನಿಯಮ್-೧೧)**
ಪುಸ್ತಕ ಪ್ರಕಾಶನ, ಮೈಸೂರು, ೧೯೯೯

ಭಾರತೀ ಭಟ್ : **ನನ್ನ ಬೆಲ್ಜಿಯಂ ಪ್ರವಾಸ**
ಭಾಷಾ ಪ್ರಕಾಶನ, ಮೈಸೂರು, ೨೦೦೦

**ಮಲ್ಲೇಪುರಂ ಜಿ.ವೆಂಕಟೇಶ್** : **ಪ್ರವಾಸ ಸಾಹಿತ್ಯ**
ಹೊನ್ನ ಪ್ರಕಾಶನ, ಬೆಂಗಳೂರು, ೧೯೯೨

**ರಹಮತ್ ತರೀಕೆರೆ** : **ಚಿಂತನೆಯ ಪಾಡು**
ಅಂಕಿತ ಪ್ರಕಾಶನ, ಬೆಂಗಳೂರು, ೨೦೧೦

**ಲತಾಗುತ್ತಿ** : **ಪ್ರವಾಸ ಸಾಹಿತ್ಯ : ವಿಶ್ವಸಂಸ್ಕೃತಿಗಳು**
ಸಚಿನ್ ಪಬ್ಲಿಷರ್ಸ್, ಬೆಂಗಳೂರು, ೨೦೦೭

**ವಿದ್ಯಾಶಂಕರ್.ಎಸ್** : **ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ**
ಸಾಹಿತ್ಯ, ಸ್ನೇಹಾ ಪ್ರಕಾಶನ
ಬೆಂಗಳೂರು, ೧೯೯೧

**ವೀಣಾ ಶಾಂತೇಶ್ವರ** : **ಇಲ್ಲಿಂದ ಮುಂದೆಲ್ಲಿಗೆ?**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೯

**ಹಳ್ಳಿಕೇರಿ.ಎಫ್.ಟಿ ಮತ್ತು ಕೆ.ರವೀಂದ್ರನಾಥ** : **ದಶಕದ ಕನ್ನಡ ಸಾಹಿತ್ಯ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೨೦೦೨

## ಅನುಬಂಧ ೩

### ಲೇಖನಗಳು

೧. **ಭೈರವಮೂರ್ತಿ.ಕೆ** : **ಕಾಯಕ ವಿಭೂತಿ**
(ನಾಡೋಜ ದೇಜಗೌ ೯೧ರ ಅಭಿನಂದನ ಗ್ರಂಥ)
ತಳಗವಾದಿ ಪ್ರಕಾಶನ; ಮೈಸೂರು, ೨೦೦೮

೨. **ರೇಖಾ ಹಿಮಾನಂದ್** : **ಸ್ತ್ರೀ ಸಂಪಥ**
ಶ್ರೀ ಅನ್ನದಾನೇಶ್ವರಿ ಪ್ರಕಾಶನ
ಭಾರತೀಪುರ, ೨೦೧೩

### ಇಂಗ್ಲಿಷ್ ಲೇಖನಗಳು

1. Dr. M.C.Mohankumari (GITA); 104 women will inspire (Inspiring stories from Karnataka); Publisher- Pramaan Publications, Mysore, 2014

## ಜಾಲತಾಣಗಳು (Websites)

1. www.kannadauniversity.org
2. www.wikipedia.org
3. www.kendasampige.in
4. www.kanaja.in
5. www.kannadaabhivruddhipraadhikara.gov.in

## ಅನುಬಂಧ ೪

### ಸಂಶೋಧನ ಪ್ರಬಂಧಗಳು


೧. ಕೆಂಡಗಣ್ಣಸ್ವಾಮಿ.ಬಿ.ಎನ್; ನೇಮಿಚಂದ್ರರವರ ಸಣ್ಣಕತೆಗಳ ಒಂದು ಅಧ್ಯಯನ; ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್.ಸಂಶೋಧನಾ ನಿಬಂಧ, ೨೦೧೩

೨. ಗಣೇಶ : ಕುವೆಂಪು ಹಾಗೂ ಕಾರಂತರ ಕಥಾಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ; ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ, ೨೦೧೧

೩. ಭರತೇಶ.ಎಚ್.ಎಸ್., ಪ್ರೊ. ದೇಜಗೌರವರ ಪ್ರವಾಸ ಸಾಹಿತ್ಯ: ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಎಂ.ಫಿಲ್. ಸಂಶೋಧನಾ ನಿಬಂಧ; ೨೦೧೩

೪. ಯೋಗಾವತಿ.ಆರ್; ಮಹಿಳಾ ಪ್ರವಾಸ ಕಥನಗಳಲ್ಲಿ ಯುರೋಪ್‌ನ ಸಂಸ್ಕೃತಿ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ನಾಲ್ಕನೆಯ ಚತುರ್ಮಾಸ ಸಂಶೋಧನ ನಿಬಂಧ, ೨೦೧೦


## ಅನುಬಂಧ ೫

### ಪತ್ರಿಕೆಗಳು

ಹೊಸತು, ಸಂವಾದ, ಸಕಾಲ, ಸಂಕ್ರಮಣ, ಪ್ರಜಾವಾಣಿ, ಅರುಹು ಕುರುಹು
Indian Express, Deccan Herald, The Hindu etc

### ಸಂದರ್ಶನಗಳ ಮೂಲಕ ಸಂಶೋಧನೆಗೆ ನೆರವಾದವರು

ಡಾ. ಸೀತಾ ಹನಸೋಗೆ
ಡಾ. ವಿಜಯಲಕ್ಷ್ಮೀ
ಡಾ. ಗೀತಾ ಮಹದೇವಪ್ರಸಾದ್
ಡಾ. ಸುರೇಶ್ ಎಂ.ಡಿ.
ಶ್ರೀದೇವಿ
ಶ್ರೀ ಕೀರ್ತಿ ಮಲ್ಹೋತ್ರ

# ಅನುಬಂಧ ೬

## ನೇಮಿಚಂದ್ರ ಅವರ ಬದುಕಿನ ಹೆಜ್ಜೆಗಳು

೧. ನೇಮಿಚಂದ್ರ ಅವರ ಜನನ : ೧೬-೦೭-೧೯೫೯

ಸ್ಥಳ : ತುಮಕೂರಿನ ಕೆಳಗೋಟೆಯಲ್ಲಿ

ತಾಯಿ : ಟಿ.ತಿಮ್ಮಕ್ಕ ತಂದೆ : ಪ್ರೊ. ಜಿ.ಗುಂಡಣ್ಣ

ನಾಲ್ಕು ಮಕ್ಕಳಲ್ಲಿ ಇಬ್ಬರು ಹೆಣ್ಣು ಮತ್ತು ಇಬ್ಬರು ಗಂಡು ಮಕ್ಕಳು

ಇವರು ಎರಡನೆಯ ಮಗಳು. ಅಣ್ಣ(ನಾಗೇಂದ್ರ), ಅಕ್ಕ (ಶ್ರೀದೇವಿ) ಮತ್ತು ತಮ್ಮ(ಶ್ರೀನಾಥ)

೨. ಒಂದರಿಂದ ಏಳನೇ ತರಗತಿಯವರೆಗೆ ತುಮಕೂರಿನಲ್ಲಿ ವಿದ್ಯಾಭ್ಯಾಸ

೩. ಏಳರಿಂದ ಎಸ್.ಎಸ್.ಎಲ್.ಸಿ.ವರೆಗೆ ಮೈಸೂರಿನ ಕ್ರೈಸ್ಟ್ ದ ಕಿಂಗ್ ಕಾನ್ವೆಂಟ್‌ಗಳಲ್ಲಿ ವಿದ್ಯಾಭ್ಯಾಸ

೪. ಪಿ.ಯು.ಸಿ (ಪ್ರಥಮ) ಮೈಸೂರಿನ ಮಹಾರಾಣಿ ವಿಜ್ಞಾನ ಕಾಲೇಜಿನಲ್ಲಿ ವಿದ್ಯಾಭ್ಯಾಸ

೫. ಮೈಸೂರಿನ ಎನ್.ಐ.ಇ. ಕಾಲೇಜಿನಲ್ಲಿ ಬಿ.ಇ. ಪದವಿ (೧೯೭೬)

೬. ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಎಂ.ಎಸ್.ಪದವಿ.

೭. ಬೆಂಗಳೂರಿನ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್‌ನಲ್ಲಿ 'ಹೆಲಿಕಾಪ್ಟರ್ ಸಂಶೋಧನೆ ಮತ್ತು ವಿನ್ಯಾಸ ಕೇಂದ್ರ'ದಲ್ಲಿ ಸೇವೆ ಆರಂಭ

೮. ಪ್ರಸ್ತುತ ಹೆಚ್.ಎ.ಎಲ್.ನಲ್ಲಿ 'ವಿಮಾನ ಸಂಶೋಧನೆ ಮತ್ತು ವಿನ್ಯಾಸ ಕೇಂದ್ರ'ದಲ್ಲಿ ಮಾನವರಹಿತ ವಿಮಾನ'ಗಳ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ

೯. ಬಿ.ಎ.ಇ – ಎಚ್.ಎ.ಎಲ್ ಸಾಫ್ಟ್‌ವೇರ್ ಲಿಮಿಟೆಡ್' ಕಂಪನಿಯ ಬೋರ್ಡ್‌ನಲ್ಲಿ ಸಹ ನಾಮಿನಿ ಡೈರೆಕ್ಟರ್

೧೦. ಪಂಜಾಬ್ ಹುಡುಗ ಕೀರ್ತಿ ಮಲ್ಹೋತ್ರ ಅವರೊಡನೆ ವಿವಾಹ ೧-೧-೧೯೮೩

೧೧. ಮೊದಲ ಕಥಾಸಂಕಲನ 'ನಮ್ಮ ಕನಸುಗಳಲ್ಲಿ ನೀವಿದ್ದಿರಿ' ೧೯೮೫ರಲ್ಲಿ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ಮೂಲಕ ಪ್ರಕಟಣೆ

೧೨. ಮಗಳಾದ ಮೇಘ ಹುಟ್ಟಿದ್ದು ೨೯-೪-೧೯೮೮ರಲ್ಲಿ

೧೩. 'ಬೆಳಗೆರೆ ಜಾನಕಮ್ಮ ಬದುಕು-ಬರಹ' ಸಂಪಾದಿತ ಕೃತಿಯು ೧೯೮೮ರಲ್ಲಿ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು ಇವರಿಂದ ಪ್ರಕಟ

೧೪. 'ಮತ್ತೆ ಬರೆದ ಕತೆಗಳು' ಎಂಬ ಕಥಾಸಂಕಲನವು ೧೯೯೨ರಲ್ಲಿ ಶ್ರೀ ಪ್ರಕಾಶನ, ಬೆಂಗಳೂರು ಮೂಲಕ ಪ್ರಕಟ. ಈ ಕೃತಿಗೆ ಆರ್ಯಭಟ ಪ್ರಶಸ್ತಿ ಸಲ್ಲಿಕೆ

೧೫. 'ಬೆಳಕಿನೊಂದು ಕಿರಣ ಮೇರಿ ಕ್ಯೂರಿ' ಜೀವನಚರಿತ್ರೆಯು ೧೯೯೩ರಲ್ಲಿ ಕ್ರೈಸ್ತ್ ಕಾಲೇಜ್, ಬೆಂಗಳೂರುರಿಂದ ಪ್ರಕಟ ಹಾಗೂ ಈ ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರದಾನ

೧೬. ಇವರ ತಂದೆ ಪ್ರೊ. ಜಿ.ಗುಂಡಣ್ಣ ನಿಧನ. ೨೯-೫-೧೯೯೪

೧೭. ಇವರ ಕನಸಿನ ಮೊದಲ ವಿದೇಶ ಪ್ರವಾಸವನ್ನು ಒಂದೂವರೆ ತಿಂಗಳು ತನ್ನ ಸ್ನೇಹಿತೆ ಹೇಮಲತಾ ಮಹಿಷಿಯೊಡನೆ (೧೯೯೭)

೧೮. ಇದನ್ನು ಕುರಿತು "ಒಂದು ಕನಸಿನ ಪಯಣ"ವೆಂಬ ಪ್ರವಾಸ ಕಥನ ೧೯೯೯ರಲ್ಲಿ ಮಹಿಳಾ ಸಾಹಿತ್ಯಕಾ, ಹುಬ್ಬಳಿಯಿಂದ ಪ್ರಕಟ ಹಾಗೂ ಈ ಕೃತಿಗೆ 'ವಿಶ್ವೇಶ್ವರಯ್ಯ ಪ್ರಶಸ್ತಿ' ಮತ್ತು 'ರತ್ನಮ್ಮ ಹೆಗ್ಗಡಿತಿ ಪ್ರಶಸ್ತಿ' ಸಲ್ಲಿಕೆ

೧೯. ದಕ್ಷಿಣ ಅಮೆರಿಕಾ, ಬ್ರೆಜಿಲ್ ಮತ್ತು ಪೆರು ಇನ್ನೂ ಮೊದಲಾದ ವಿದೇಶಿ ಸ್ಥಳಕ್ಕೆ ಗೆಳತಿ ಮಾಲತಿ ಅವರೊಂದಿಗೆ ಎರಡು ತಿಂಗಳೂಗಳ ಕಾಲ ಪ್ರವಾಸ

೨೦. 'ಪೆರುವಿನ ಪವಿತ್ರ ಕಣಿವೆ'ಯಲ್ಲಿ ಎಂಬ ಮತ್ತೊಂದು ಪ್ರವಾಸ ಸಾಹಿತ್ಯ ೨೦೦೪ರಲ್ಲಿ ನವಕರ್ನಾಟಕ ಪ್ರಕಾಶನ, ಬೆಂಗಳೂರು ಇವರಿಂದ ಪ್ರಕಟ ಮತ್ತು ಈ ಪುಸ್ತಕಕ್ಕೆ ೨೦೦೪ರ 'ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುರಸ್ಕಾರ' ಹಾಗೂ 'ಶಿವರಾಮ ಕಾರಂತ ಪುರಸ್ಕಾರ' ಸಲ್ಲಿಕೆ

೨೧. ಸಾಹಿತ್ಯ, ವಿಜ್ಞಾನ ಮತ್ತು ಮಾನವೀಯತೆಯನ್ನು ಬದುಕು ಹಾಗೂ ಬರಹಗಳಲ್ಲಿ ಜನರಿಗೆ ತಲುಪಿಸಿದ ವಿಶೇಷ ಸಾಧನೆಗಾಗಿ 'ಸಂದೇಶ ವಿಶೇಷ' ಪ್ರಶಸ್ತಿ ಸ್ವೀಕಾರ

೨೨. ಚಿತ್ರದುರ್ಗದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ 'ಕನ್ನಡ ಸಾಹಿತ್ಯ ಪರಿಷತ್ತಿ'ನಿಂದ ನೇಮಿಚಂದ್ರ ಅವರಿಗೆ ಆಹ್ವಾನ ನೀಡಿದ್ದು (೭.೨.೨೦೦೯)

೨೩. 'ಯಾದ್ ವಶೇಮ್' ಅವರ ಕಾದಂಬರಿ ೨೦೦೭ ಅಕ್ಟೋಬರ್ ೨ರಂದು ನವಕರ್ನಾಟಕ ಪ್ರಕಾಶನದ ಮೂಲಕ ಪ್ರಕಟ ಹಾಗೂ ಈ ಕೃತಿಗೆ ೨೦೦೭ರ 'ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ' ಮತ್ತು ಶ್ರೀಮತಿ ಗಂಗಂಮ ಸೋಮಪ್ಪ ಬೊಮ್ಮಾಯಿ ಪ್ರತಿಷ್ಠಾನದ ೨೦೦೯ರ 'ಅಕ್ಕ' ಪ್ರಶಸ್ತಿ ಪುರಸ್ಕೃತ ಕೃತಿ

೨೪. ತಾಯಿಯ ನಿಧನ : ೧೪-೯-೨೦೦೯

೨೫. ನೇಮಿಚಂದ್ರ ಅವರ ಪೂರ್ವಜರ ದೇವರಾದ ಕಾಡಿನಲ್ಲಿರುವ ಚೆಲ್ಲಳ್ಳಿಯ ಕಾಟಿಂಲಿಂಗ ದೇವಸ್ಥಾನದ ದರ್ಶನ

೨೬. ಮಹಿಳಾ ಅಧ್ಯಯನ, ಸಾಹಿತ್ಯ ಮತ್ತು ವಿಜ್ಞಾನ ಕುರಿತಂತೆ ಗದಗದ 'ಕಲಾಚೇತನ' ಪ್ರಶಸ್ತಿ ಮತ್ತು 'ಇಂದಿರಾ ತನಯ' ಪ್ರಶಸ್ತಿ ಪುರಸ್ಕಾರ

೨೭. 'ಬದುಕು ಬದಲಿಸಬಹುದು' (ಅಂಕಣ ಸಂಗ್ರಹ) ಪುಸ್ತಕಕ್ಕೆ ಶಿವಮೊಗ್ಗದ 'ಕರ್ನಾಟಕ ಸಂಘ'ದ ಡಾ. ಹಾ.ಮಾ.ನಾಯಕ ಪ್ರಶಸ್ತಿ ಪುರಸ್ಕಾರ

೨೮. ಇವರ ಬರಹದ ಮೇಲೆ ತೀವ್ರವಾಗಿ ಪ್ರಭಾವ ಬೀರಿರುವ ಅಂಶ ಸ್ತ್ರೀವಾದ. ಸ್ತ್ರೀವಾದ ಎಂದರೇನು? ಎಂದು ತಿಳಿಯುವ ಮೊದಲೇ ನಾನು ಸ್ತ್ರೀವಾದಿಯಾಗಿದ್ದೆ ಎನ್ನುತ್ತಾರೆ

೨೯. ಸ್ತ್ರೀವಾದಿ ಸಿದ್ಧಾಂತ ಮತ್ತು ಸ್ತ್ರೀ ಚಳುವಳಿಗಳಲ್ಲಿ ಅಚಲವಾದ ನಂಬಿಕೆ

೩೦. ಸ್ತ್ರೀವಾದಿ ಸಂಘಟನೆಗಳ ಜೊತೆಗೆ ಸಂಪರ್ಕ ಮತ್ತು ಹೋರಾಟಗಳಲ್ಲಿ ತೊಡಗಿಸಿಕೊಂಡಿರುವುದು

೩೧. ಇವರ 'ಮಹಿಳಾ ಅಧ್ಯಯನ' ಕೃತಿ ಸ್ತ್ರೀವಾದಿ ಚಿಂತನೆಯ ಹಿನ್ನೆಲೆಯಲ್ಲಿ ಬರೆದ ಹದಿನೆಂಟು ಲೇಖನಗಳ ಸಂಗ್ರಹ

೩೨. ಸಾಹಿತ್ಯ, ಕಲೆ, ವಿಜ್ಞಾನ, ಮಾನವಶಾಸ್ತ್ರ ಹೀಗೆ ಹತ್ತು-ಹಲವಾರು ಜ್ಞಾನಶಾಖೆಗಳಲ್ಲಿ ಅಪಾರ ಸಾಧನೆಯನ್ನು ಮಾಡಿ, ಅದ್ಭುತ ಶೌರ್ಯ, ಸಾಹಸಗಳನ್ನು ಮೆರೆದ ಮಹಿಳೆಯರ ಬಗೆಗೆ ಹುಡುಕಾಟಗಳು ಮತ್ತು ಅಧ್ಯಯನ

೩೩. ಜಗತ್ತಿನಾದ್ಯಂತ ವಿವಿಧ ರಂಗಗಳಲ್ಲಿ ಅತ್ಯಂತ ಮಹತ್ವದ್ದನ್ನು ಸಾಧಿಸಿ ಪ್ರಥಮ ಎನಿಸಿಕೊಂಡ ಮಹಿಳೆಯರ ಸಾಮರ್ಥ್ಯ, ಪ್ರತಿಭೆ, ಸಾಧನೆಗಳನ್ನು ಮತ್ತು ಅವರ ಹೋರಾಟದ ಬದುಕುಗಳನ್ನು ಸಂಕ್ಷಿಪ್ತವಾಗಿ ಬರಹದ ಮೂಲಕ ದಾಖಲಿಸಿರುವುದು

೩೪. ಪ್ರಥಮ ಮಹಿಳಾ ವೈಮಾನಿಕರು ಮತ್ತು ವಿಜ್ಞಾನಿಗಳು ಮೊದಲಾದವರ ಬಗ್ಗೆ ಲೇಖನ ಪ್ರಕಟ. 'ಸ್ತ್ರೀ ದೃಷ್ಟಿಕೋನವಿಲ್ಲದ ವಿಜ್ಞಾನ ನಿಜವಾದ ವಿಜ್ಞಾನವಾಗುವಲ್ಲಿ ಸೋಲುತ್ತದೆ. ವಿಜ್ಞಾನರಂಗದಿಂದ ಮಹಿಳೆಯರನ್ನು ದೂರವಿರಿಸಿದ್ದು, ಜಗತ್ತಿನ ಅರ್ಧ ಪ್ರತಿಭೆ ನಿರುಪಯುಕ್ತವಾದುದರ ದುರಂತ' ಇವರ ಸ್ತ್ರೀವಾದ ಚರ್ಚೆ

೩೫. ವಿಪುಲವಾಗಿ ಓದಿ, ದೇಶ ಸಂಚಾರ ಮಾಡಿ, ಹೋದೆಡೆಗಳಲ್ಲೆಲ್ಲ ತನ್ನ ಆಸಕ್ತಿಯ ವಿಷಯವನ್ನು ಚುರುಕಾಗಿ ಗ್ರಹಿಸಿ, ತತ್‌ಕ್ಷಣ ಮಾಹಿತಿ ಸಂಗ್ರಹಿಸುವ ಕಾರ್ಯಕ್ಕೆ ಮುಂದಾಗಿ, ಒಂದು ತಪಸ್ಸೆಂಬಂತೆ ಅವುಗಳನ್ನು ಬೆಂಬತ್ತುವ ಲೇಖಕಿ

೩೬. ನೇಮಿಚಂದ್ರ ಅವರ ಎಳೆವಯಸ್ಸಿನಲ್ಲಿ ಎಲ್ಲಿಲ್ಲದ ಪ್ರಭಾವ ಬೀರಿದ ಮೇರಿಕ್ಯೂರಿಯ ಪ್ರಯೋಗಶಾಲೆ, ರೇಡಿಯಂ ಕಂಡುಹಿಡಿದ ತಾಣವನ್ನು ಕಂಡದ್ದು, ಇವರ ಬದುಕಿನ ಅತಿ ಭಾವುಕ ಕ್ಷಣಗಳು

೩೭. ಲೇಖಕಿಯರ ಸಂಘದಂತಹ ಮಹಿಳಾ ಸಂಘಸಂಸ್ಥೆಗಳ ಮೂಲಕ, ಮಹಿಳಾ ಪರಂಪರೆಯನ್ನು ಅಗೆದು ತೆಗೆಯುವ ಕೆಲಸವನ್ನು ಕೈಗೊಂಡದ್ದು

ಉದಾಹರಣೆಗೆ : ಬೆಳಗೆರೆ ಜಾನಕಮ್ಮ

೩೮. ಮೈಸೂರಿನಲ್ಲಿ 'ಸಮತಾ' ಒಡನಾಟ, ಹಾಗೆಯೇ ಕಳೆದ ಒಂದೂವರೆ ದಶಕಗಳಿಂದ 'ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ'ದ ಮೂಲಕ ಮಹಿಳಾ ಚಳುವಳಿಯ ನಿಕಟ ಸಂಪರ್ಕ

೩೯. ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿ, "ಅಚಲಾ" ಮಹಿಳಾ ಅಧ್ಯಯನ ಮಾಸಪತ್ರಿಕೆಯ ಸಂಪಾದಕೀಯ ಮಂಡಳಿಯ ಸದಸ್ಯೆಯಾಗಿ ಸೇವೆ ಸಲ್ಲಿಕೆ

೪೦. "ನೆರವು" ಹಿತರಕ್ಷಣಾ ವೇದಿಕೆಗಳ ನಿಕಟ ಸಂಪರ್ಕ ಮತ್ತು ಒಡನಾಡ

೪೧. ಜರ್ಮನಿಯ ಡಕಾವ್‌ನ ಈ ನೆಲದಿಂದ ಕಪ್ಪು ಇತಿಹಾಸದ ನೆನಪುಗಳನ್ನು ಸ್ವತಃ ಭೇಟಿ ನೀಡಿ ಕಾದಂಬರಿ ಸಿದ್ಧತೆ ಮತ್ತು ಕತೆಯಾಚೆಗೆ 'ಬದುಕುಪ್ರೀತಿ'ಯ ಶೋಧಕ್ಕೆ ಇಳಿದಿದ್ದು

೪೨. ಇಸ್ರೇಲ್‌ಗೆ ಭೇಟಿನೀಡಿ, ಈ ದೇಶ ಸ್ಥಾಪನೆಗೆ ಕಾರಣಕರ್ತರಾದ ಡೇವಿಡ್ ಬೆನ್ ಗೊರಿಯನ್ ಅವರ ಮನೆಗೆ ಹೋದಾಗ ಅವರು ಮಲಗುವ ಕೋಣೆಯಲ್ಲಿ ಮಹಾತ್ಮಗಾಂಧಿಯ ಚಿತ್ರವನ್ನು ಕಂಡಿದ್ದು (೨೦೧೧ ಅಕ್ಟೋಬರ್ ೨)

೪೩. ಜರ್ಮನಿಯ ಡಕಾವ್ ನಗರದಲ್ಲಿ, ಹಸಿದ ಕೈದಿಗಳ ಕೈಗೆ ತುಂಡು ಬ್ರೆಡ್ಡನ್ನು ನೀಡಿದ 'ಟೆಫೆಲ್ ಹಾರ್ಟ್ ಬೇಕರಿ'ಗೆ ಭೇಟಿ

೪೪. ಹಳೆ ದಿಲ್ಲಿಯಲ್ಲಿರುವ ರಜಿಯಾ ಸುಲ್ತಾನಳ ಗೋರಿಗೆ ಭೇಟಿ ನೀಡಿದ್ದು (೨೦೧೧ ಆಗಸ್ಟ್ ೨೮)

೪೫. ಹೆಣ್ಣುಮಕ್ಕಳ ವಿದ್ಯಾಭ್ಯಾಸ, ಔದ್ಯೋಗಿಕ ತರಪೇತು, ಆರ್ಥಿಕ ಸ್ವಾವಲಂಬನೆ, ಮಾನಸಿಕವಾಗಿ ಶಕ್ತರಾಗಿಸುವುದು, ಸ್ತ್ರೀ ಸಬಲೀಕರಣದ ಹಾದಿಯ ಪ್ರಮುಖ ಹೆಜ್ಜೆಗಳನ್ನು ಹೇಳಿರುವುದು





ನೇಮಿಚಂದ್ರ
ಮತ್ತು
ಕೀರ್ತಿ ಮಲ್ಹೋತ್ರ



ತಾಯಿ-ತಂದೆ

ತಿಮ್ಮಕ್ಕ
ಪ್ರೊ.ಜಿ.ಗುಂಡಣ್ಣ



ಹುಟ್ಟಿ ಬೆಳೆದ
ತುಮಕೂರಿನ
ಮನೆ ಮುಂದೆ
ಅಕ್ಕ-ತಮ್ಮನೊಂದಿಗೆ







ಪೆರು, ಮಾಚುಪಿಚು ಮತ್ತು ಯಾರ್ಕ್‌ಶೈರ್‌ಗಳಲ್ಲಿ ನೇಮಿಚಂದ್ರ





ಶೇಕ್ಸ್‌ಪಿಯರ್ ಹಾಗೂ
ಕೀಟ್ಸ್ ಹೌಸ್‌ಗಳಲ್ಲಿ
ಲೇಖಕಿ ನೇಮಿಚಂದ್ರ






ಮೇರಿಕ್ಯೂರಿ–ಐನ್‌ಸ್ಟೀನ್ ಹೌಸ್‌ನಲ್ಲಿ ವಿಜ್ಞಾನಿ ನೇಮಿಚಂದ್ರ








ಅಮೆರಿಕಾದ ವಿಭಿನ್ನ ಚಾರಿತ್ರಿಕ ಸ್ಥಳಗಳಲ್ಲಿ ನೇಮಿಚಂದ್ರ







ಇಂಗ್ಲೆಂಡ್‌ನ ವಿಭಿನ್ನ ಚಾರಿತ್ರಿಕ ಸ್ಥಳಗಳಲ್ಲಿ ನೇಮಿಚಂದ್ರ

**ಅನುಬಂಧ –೮**

## ಲೇಖಕರ ಸಂದರ್ಶನ

**೧. ನೇಮಿಚಂದ್ರ ಮೇಡಂ, ತಮ್ಮ ಹುಟ್ಟೂರಿನ ಹಿನ್ನೆಲೆ, ಬಾಲ್ಯದ ಅನುಭವಗಳು, ಶೈಕ್ಷಣಿಕ ವಿವರಗಳನ್ನು ತಿಳಿಸಿಕೊಡಿ.**

ನನ್ನ ಹುಟ್ಟೂರು ಚಿತ್ರದುರ್ಗ. ಅಲ್ಲಿನ ಕೆಳಗೋಟೆ ಶಾಲೆಯ ಹಿಂಭಾಗದ ಒಂದು ಸಣ್ಣ ಮನೆಯಲ್ಲಿ ನಾನು ಹುಟ್ಟಿದ್ದೆ. ಆಮೇಲೆ ಅಪ್ಪ ಜಯಚಾಮರಾಜ ಬಡಾವಣೆಯಲ್ಲಿ ಚಂದದ ಮನೆ ಕಟ್ಟಿಸಿದ್ದರು. ನನ್ನ ಬಾಲ್ಯದ ಅತ್ಯಂತ ಹಳೆಯ ನೆನಪುಗಳು, ಈ ಊರು, ಈ ಕೇರಿ. ಈ ಮನೆಗೆ ಜೋಡಿಸಿದ್ದಾಗಿದೆ. ದುರ್ಗ ನನಗೆ ಬೆಟ್ಟ, ಕೋಟೆ, ಒನಕೆ ಓಬವ್ವನ ವೀರ ಚರಿತ್ರೆಯ ಒಂದು ಅದ್ಭುತ ರಮ್ಯ ತಾಣವಾಗಿ ನನ್ನ ಎಳೆಯ ನೆನಪುಗಳಲ್ಲಿ ಅಚ್ಚೊತ್ತಿ ಉಳಿದು ಬಿಟ್ಟಿತ್ತು.

ಆದರೆ ನಾನು ಇಂದು ಈ ನೆಲದ ಹೆಣ್ಣು ಮಕ್ಕಳ ಸಂವೇದನೆಗಳ ಕೊಂಡಿಯಾಗಿ ನಿಂತಿದ್ದೇನೆ. ಎರಡು ತಲೆಮಾರುಗಳ ಕತೆಗಳ ನಡುವೆ ನಿಂತಿದ್ದೇನೆ. ಅನಕ್ಷರಸ್ಥ ಅಮ್ಮನ ಮಗಳು ಇಂಜಿನಿಯರ್ ಆದ ಸ್ತ್ರೀ ಸಬಲೀಕರಣದ ಸಾಧ್ಯತೆಯ ಉದಾಹರಣೆಯಾಗಿ. ಇದು ನನ್ನೊಬ್ಬಳ ಕತೆಯಾಗುವುದಿಲ್ಲ, ಇಲ್ಲಿರುವ ಬಹಳಷ್ಟು ಹೆಣ್ಣುಮಕ್ಕಳ ಕತೆಯೂ ಆಗಿದೆ.

ಒಂದರಿಂದ ಏಳನೆಯ ತರಗತಿಯವರೆಗೆ ತುಮಕೂರಿನಲ್ಲಿ, ಏಳರಿಂದ ಎಸ್.ಎಸ್.ಎಲ್.ಸಿ.ಯವರೆಗೆ ಮೈಸೂರಿನ ಕ್ರೈಸ್ಟ್ ದ ಕಿಂಗ್ ಕಾನ್ವೆಂಟ್‌ನಲ್ಲಿ ವಿದ್ಯಾಭ್ಯಾಸ, ಪಿ.ಯು.ಸಿ.ಯನ್ನು ಮೈಸೂರಿನ ಮಹಾರಾಣಿ ವಿಜ್ಞಾನ ಕಾಲೇಜಿನಲ್ಲಿ ಮಾಡಿದ್ದೇನೆ. ಅನಂತರ ಮುಂದೆ ಮೈಸೂರಿನ ಎನ್.ಐ.ಇ. ಕಾಲೇಜಿನಲ್ಲಿ ಬಿ.ಇ.ಪದವಿ ಹಾಗೂ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಎಂ.ಎಸ್.ಪದವಿಗಳನ್ನು ಪಡೆದುಕೊಂಡಿದ್ದೇನೆ.

**೨. ನಿಮ್ಮ ತಂದೆ–ತಾಯಿ ಬಂಧು ಬಳಗದ ಜೊತೆಗಿನ ನಿಮ್ಮ ಅನುಭವ, ಅವರಿಂದ ನೀವು ಪಡೆದ ಪ್ರೇರಣೆಗಳೇನು?**

ಶ್ರಮಜೀವನದಲ್ಲಿ ಅಪ್ಪಟ ನಂಬುಗೆ ಇಟ್ಟ ಅಮ್ಮ ಎಂದೂ ಕೆಲಸದವರನ್ನು ಇಟ್ಟುಕೊಂಡವಳಲ್ಲ. ಬಹುಶಃ ಅದೇ ಅಭ್ಯಾಸವಾದ ನನಗೆ, ಕೆಲಸದವರನ್ನು ಇಟ್ಟುಕೊಳ್ಳುವುದು ಸಹಜವಾಗಿ ಬರಲೇ ಇಲ್ಲ. ಕಾರ್ಖಾನೆಯ ವಿಪರೀತದ ಕೆಲಸದಲ್ಲಿ, ಓಡಾಟದಲ್ಲಿ ಮನೆಯನ್ನು ಸಂಭಾಳಿಸುವುದು ಕಷ್ಟವೆನಿಸಿದರೂ, ಕೆಲಸದವರನ್ನು ಇಟ್ಟುಕೊಳ್ಳುವುದು ಸುಲಭವೆನಿಸಲಿಲ್ಲ. ನನ್ನ ಮ್ಯಾನೇಜ್‌ಮೆಂಟ್ ತಂತ್ರ ಬಳಸಿ, 'ಟು ಇಟ್ ಆರ್ ಡೆಲಿಗೇಟ್ ಇಟ್' ಎಂದು, ಒಂದಷ್ಟು ನಾನು ಮಾಡಿ, ಮತ್ತಷ್ಟು ನನ್ನ ಗಂಡನ ಮೇಲೆ ಹೇರಿ ಸಂಸಾರ ಸಾಗುತ್ತಿದೆ.

ಅಪ್ಪ-ಅಮ್ಮನ ಬಗ್ಗೆ ಯೋಚಿಸುತ್ತಾ, 'ನಾನು ಅವರಂತಲ್ಲ' ಎಂದುಕೊಳ್ಳುವಾಗಲೇ, 'ನಾನು ಅವರಂತಲ್ಲವೇ?' ಎಂಬ ಪ್ರಶ್ನೆಗಳು ಹಾರಿ ಬರುತ್ತವೆ. ಮದುವೆಯಾದ ಅದೆಷ್ಟೋ ವರ್ಷ ಗ್ಯಾಸ್, ರೆಫ್ರಿಜರೇಟರ್, ಮಿಕ್ಸಿ ಇಲ್ಲದೆಯೇ ಸಂಸಾರ ಮಾಡಿದ್ದೆ ಎನ್ನುವುದು ಇವತ್ತು ನನಗೆ ಅಚ್ಚರಿ ತರಿಸುತ್ತದೆ. ಅದೊಂದು ಆದರ್ಶ ಎಂದು ನಾನು ಹೇಳುತ್ತಿಲ್ಲ. ಆದರೆ ಅವು ನನಗೆ ಅನಿವಾರ್ಯವಾಗಿರಲಿಲ್ಲ.

ತಮ್ಮ ಬದುಕಿನ ಬಹುಪಾಲನ್ನು ಪಟ್ಟಣದಲ್ಲಿ ಕಳೆದರೂ, ಅಮ್ಮನ ಒಳಗೆ ಇಂದಿಗೂ ಬಯಲು ಸೀಮೆಯ ಬೆವರಿಳಿಸಿ ದುಡಿವ ರೈತ ಹೆಣ್ಣುಮಗಳಿದ್ದಳು. ಬಿತ್ತಿ ಬೆಳೆಯುವ ಹಸಿರು ಹರಡುವ ಹಸಿ ಮನಸ್ಸಿನ ಹೆಣ್ಣು ಮಗಳು. ನಮ್ಮ ಇಂಜಿನಿಯರುಗಳು ಶ್ರಮದಾನದ ಮೂಲಕ ಕಾರ್ಖಾನೆಯಲ್ಲಿ ನೆಡುವಾಗ ನನ್ನೆದುರು ನಿಂತದ್ದು ಸಾಲುಮರದ ತಿಮ್ಮಕ್ಕನಷ್ಟೇ ಅಲ್ಲ, ಬಿತ್ತಿ ಬೆಳೆಯುವುದೇ ಸಹಜ ಕ್ರಿಯೆಯಾಗಿ ಬೆಳೆದ ನನ್ನಮ್ಮ ತಿಮ್ಮಕ್ಕ ಕೂಡಾ. 'ಪರಿಸರ ಪ್ರೇಮ', 'ಪರಿಸರವಾದ' ಘೋಷಣೆಯಾಗದೆ ಅಂತರ್ಗತವಾದ ಜೀವನ ವಿಧಾನವಾಗಿತ್ತು ನನ್ನಮ್ಮನಲ್ಲಿ. ತಾನು ಬೇರಿಳಿಸಿ ನಿಂತಲ್ಲಿಂದ ಅಲುಗಾಡದೆಯೂ, ನಮಗೆ ಹಾರಲಿಕ್ಕೆ ರೆಕ್ಕೆ ಕೊಟ್ಟವಳು ಅಮ್ಮ.

ಯಾರದೇ ಕತೆ ಕೇಳಿದರೂ 'ಅಯ್ಯೋ ಪಾಪ' ಎಂದು ಮರುಗುವ ಸ್ವಭಾವ ಅಮ್ಮನದು. ಅಮ್ಮನಿಗೆ ಬಲು ದೊಡ್ಡ ಸ್ನೇಹ ವೃಂದ. ಅತ್ತೆಯ ಬಗ್ಗೆ ದೂರು ಹೇಳಿಕೊಂಡು ಬರುವ ಸೊಸೆ, ಸೊಸೆಯ ಬಗ್ಗೆ ಗೊಣಗುಟ್ಟುವ ಅತ್ತೆ ಇಬ್ಬರಿಗೂ ಸಮಾಧಾನ ಹೇಳಿ, ಇಬ್ಬರೊಡನೆಯೂ ಸ್ನೇಹ-ಸಂಬಂಧ ಉಳಿಸಿಕೊಂಡ ಅಮ್ಮನ ಸಹಜ 'ಕೌನ್ಸೆಲಿಂಗ್ ಸ್ಕಿಲ್'ನ ಅಲ್ಪಸ್ವಲ್ಪ ಭಾಗ ನನ್ನೊಳಗೂ ಹರಿದು ಬಂದದ್ದೇನೂ ಸುಳ್ಳಲ್ಲ. ಸಾಂತ್ವನದ ನಾಲ್ಕು ಮಾತಿಗೆ ಅಮ್ಮನಲ್ಲಿ ಸದಾ ಸಮಯವಿತ್ತು. ಗೋಳಿಟ್ಟು ಬಂದವರಿಗೆಲ್ಲ ಏನಾದರೂ ಸಮಾಧಾನ ಹೇಳಿ ಕಳುಹಿಸುತ್ತಿದ್ದಳು ಅಮ್ಮ. ಇತರರ ನೋವಿಗೆ ಸದಾ ಸ್ಪಂದಿಸಿದ ಜೀವ ಅದು.

ನಂಬಿಕೆ, ವಿಶ್ವಾಸವಿಲ್ಲದೆ ಬದುಕು ಸಾಧ್ಯವೆ? ನನ್ನ ಓದು, ವಿದ್ಯಾಭ್ಯಾಸ, ಲೋಕಾನುಭವ ನನ್ನೊಳಗಿನ ಮುಗ್ಧತೆಯನ್ನು ಮಸುಕಾಗಿಸಿದ್ದರೂ, ಅನೇಕ ಕಹಿ ಅನುಭವಗಳು ನನ್ನ ಹಾದಿಯಲ್ಲೂ ತೊಡರಿದ್ದರೂ, ಮೂಲತಃ ಮನುಷ್ಯರಲ್ಲಿ ವಿಶ್ವಾಸವಿಡುವ ನನ್ನ ಸ್ವಭಾವ ಅಮ್ಮನಿಂದಲೇ ಹರಿದು ಬಂದದ್ದು ಅನಿಸುತ್ತದೆ.

**೩. ನಿಮ್ಮ ಓದು ಬರಹದ ಹಿಂದಿನ ಪ್ರೇರಣೆ, ಆಸಕ್ತಿ ಏನು?**

ಬಟ್ಟೆಬರೆಗೆ ಹಣ ವ್ಯರ್ಥ ಎಂದು ಭಾವಿಸಿದ್ದ ಅಪ್ಪ, ಮನೆಯ ತುಂಬಾ ಸಾವಿರ ಸಾವಿರ ಪುಸ್ತಕಗಳನ್ನು ಕೊಂಡು ತುಂಬಿದ್ದರು. ಮಕ್ಕಳಿಗೆ ಚೀಟಿ ಬಟ್ಟೆ, ಸಂತೆಯಲ್ಲಿ ಮಾರುವ ಚಡ್ಡಿ ಶರಾಯಿ ತಂದರೂ, ಪುಸ್ತಕದ ವಿಷಯದಲ್ಲಿ ಖರ್ಚು ಮಾಡಲು ಎಂದೂ ಹಿಂದೆ ಮುಂದೆ

ನೋಡಿದವರಲ್ಲ. ನನ್ನನ್ನು ಲೇಖಕಿಯಾಗಿ ಬೆಳೆಸಿದ್ದು ಈ ಸಾವಿರ ಸಾವಿರ ಪುಸ್ತಕಗಳು. ಅವುಗಳಲ್ಲಿ ಅರ್ಧ ಕೂಡಾ ಓದಿಲ್ಲದ ನಾನೂ ಲೇಖಕಿಯಾದೆ.

ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ ಅವರ ಕವನಗಳನ್ನು ಕೇಳುತ್ತಾ ನಾನು ಬೆಳೆದೆ. ಶೇಕ್ಸ್‌ಪಿಯರ್, ಬರ್ನಾಡ್ ಶಾ, ಬ್ರಾಂಟೆ, ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ತ್ ಎಲ್ಲರ ಪರಿಚಯ ಅಪ್ಪನ ಈ ಗ್ರಂಥಾಲಯದಲ್ಲಿ ನನಗಾಗಿತ್ತು. ಇಂತಹ ಪರಿಸರದಲ್ಲಿ ಬೆಳೆದ ನನಗೆ ಬರೆಯದಿರಲು ಸಾಧ್ಯವೇ ಇರಲಿಲ್ಲ.

ಈಗ ನನ್ನ ಮನೆಯ ತುಂಬ ಪುಸ್ತಕಗಳ ಸಂತೆ. ಪುಸ್ತಕಗಳು ರ್‍ಯಾಕ್ ಏರಿ ತಾರಸಿ ಮುಟ್ಟಿವೆ. ಎಲ್ಲೆಲ್ಲೂ ಪುಸ್ತಕಗಳಿವೆ. ಸಾವಿರ ರೂಪಾಯಿ ಬಟ್ಟೆಗಳಿಗೆ ಸುರಿಯಲು ಮನಸ್ಸಾಗದ ನಾನು, ಸಾವಿರಗಟ್ಟಲೆ ಹಣವನ್ನು ಪುಸ್ತಕಗಳಿಗೆ ಪ್ರವಾಸಗಳಿಗೆ ಖರ್ಚು ಮಾಡಲು ಕ್ಷಣ ಕೂಡಾ ಹಿಂಜರಿಯುವುದಿಲ್ಲ. ಪುಸ್ತಕ ಪ್ರೀತಿ 'ಅನುವಂಶಿಕ'ವಾಗಿ ಈಗ ನನ್ನ ಮಗಳಿಗೆ ಹರಿದಿದೆ!

ನಾನು ಯಾವಾಗ ಬರೆಯಲು ಆರಂಭಿಸಿದೆ ನೆನಪಿಲ್ಲ. ಹೈಸ್ಕೂಲು ಪಿಯುಸಿ ಹಂತದಲ್ಲಿ ಅವು ಪ್ರಕಟವಾಗಲು ಪ್ರಾರಂಭಿಸಿದವು. ಹೇರಿದ್ದ ಮಡಿವಂತಿಕೆಯನ್ನು ಬಾಲ್ಯದಲ್ಲೇ ಹೊತ್ತವಳು ಅಂಜುತ್ತ ಅಳುಕುತ್ತಾ ಬರೆದೆ. ಅಪ್ಪಟ ಆದರ್ಶಗಳನ್ನೇ ಬೋಧಿಸುವ ಅಪ್ಪನ ಮಗಳಾಗಿ ನನಗೆ ಹೀಗೆಲ್ಲ ಅನಿಸುವುದಲ್ಲ ಎಂದೇ ಭಯವಾಗುತ್ತಿತ್ತು. ಹೀಗಿದ್ದೂ ಸಂಪ್ರದಾಯದ ಕಟ್ಟುಪಾಡುಗಳು ನನ್ನೊಳಗಿನ ಭಾವನೆಗಳ ಕತ್ತು ಹಿಸುಕಲಾರದಾಗಿದ್ದವು. ನನ್ನೊಳಗಿನ ಬುದ್ಬುದಗಳಿಗೆ ಬಾಯಿ ಕೊಡಬೇಕಿತ್ತು.

ಭಯ ಮುಜುಗರ ಸಂಕೋಚಗಳನ್ನು ಬದಿಗಿಟ್ಟು, ನನಗನಿಸಿದ್ದನ್ನು ಅನಿಸಿದಂತೆ ಬರೆಯ ಹೊರಟದ್ದು, ಬಿ.ಇ. ಮುಗಿಸಿ ಸಂಶೋಧನೆಗೆಂದು ಬೆಂಗಳೂರಿಗೆ, ಟಾಟಾ ಇನ್‌ಸ್ಟಿಟ್ಯೂಟಿಗೆ ಬಂದಾಗ ಆಗ ಅವಲಂಬನೆಯ ಅಧ್ಯಾಯ ಮುಗಿದಿತ್ತು. ಸ್ವತಂತ್ರ ವಾತಾವರಣ, ಆರ್ಥಿಕ ಸ್ವಾವಲಂಬನೆಯಲ್ಲಿ ನನ್ನ ಭಾವನೆಗಳು ಹೊರಬಿದ್ದವು. 'ಪ್ರೀತಿ' ಎಂಬ ಪದವನ್ನು ಬಳಸಲೂ ಹಿಂಜರಿದ ಹುಡುಗಿ, ಪ್ರೀತಿಯ ಸುತ್ತ ಕಥೆ ಹೆಣೆದಳು,

**೪. ನಿಮ್ಮ ವಿದ್ಯಾರ್ಥಿ ಜೀವನದ ವಿಶಿಷ್ಟ ಅನುಭವ ಅಥವಾ ಘಟನೆಗಳೇನಾದರೂ ಇದ್ದರೆ ತಿಳಿಸುವಿರಾ?**

ತುಮಕೂರಿನ ಸರಕಾರಿ ಶಾಲೆ. ನಾನು ಐದನೇ ತರಗತಿಯಲ್ಲಿದ್ದಾಗ, ಶಾಲೆಯಿಂದ ಕರೆದೊಯ್ದು ಸಿದ್ಧರಬೆಟ್ಟದ ಪ್ರವಾಸಕ್ಕೆ ಹೋಗಿದ್ದೆ. ಪ್ರವಾಸಕ್ಕೆಂದು ನಾವು ಕೊಡಬೇಕಿದ್ದ ಹಣ ಎರಡು ರೂಪಾಯಿ. ಅದು ನನ್ನ ಬದುಕಿನ ಪ್ರಥಮ ಪ್ರವಾಸವಾಗಿತ್ತು. ದಿನದ ಖರ್ಚಿಗೆಂದು ಅಪ್ಪ ಕೊಟ್ಟ ೬೦ ಪೈಸೆ ಕೈಯಲ್ಲಿ ಹಿಡಿದು ಹೋಗಿದ್ದೆ. ೬೦ ಪೈಸೆ ಬಹಳ

ಬೇಗ ಖರ್ಚಾಗಿ ಹೋಗಿತ್ತು. ಬೆಟ್ಟದ ಮೇಲೋ ಅಥವಾ ಕೆಳಗೋ, ಸರಿಯಾಗಿ ನೆನಪಿಲ್ಲ, ನೂಕು ಗಾಡಿಯ ಐಸ್‌ಕ್ಯಾಂಡಿಯವ ಕಂಡಿದ್ದ. ಎಲ್ಲರೂ ಐದೈದು ಪೈಸೆಯ ನೀರ್ಗಲ್ಲಿನಂತಹ ಕ್ಯಾಂಡಿ ಕೊಂಡಿದ್ದರು. ನನಗೂ ಕೊಳ್ಳುವ ಆಸೆ ಇದ್ದರೂ, ಅಷ್ಟು ಹೊತ್ತಿಗೆ ಕೈಯಲ್ಲಿದ್ದ ಹಣ ಮುಗಿದಿತ್ತು.

ಒಂದು ದಿನ ಈ ಪ್ರವಾಸಕ್ಕೆ ಐದು ರೂಪಾಯಿ ತಂದಂತಹ ಹಣವಂತರ ಮಕ್ಕಳೂ ನಮ್ಮೊಡನಿದ್ದರು. ಅವರಲ್ಲಿ ಐದು ಪೈಸೆ ಕೇಳಿ ಪಡೆಯಲು, ಅಭಿಮಾನದ ಅಡ್ಡಗೋಡೆ. ಆ ದಿನ ಎಲ್ಲ ಮಕ್ಕಳೂ ಐಸ್ ಕ್ಯಾಂಡಿ ತಿನ್ನುತ್ತಿದ್ದಾಗ, ನನ್ನಂತಹ ಇಬ್ಬರು ಮೂವರು ಹುಡುಗಿಯರು, ಕೊಳ್ಳದೆ ಒಂದಿಷ್ಟು ದೂರ ನಿಂತಿದ್ದೆವು. ಇದನ್ನು ಬಹುಶಃ ನಮ್ಮ ಪ್ರಾಧ್ಯಾಪಕರಲ್ಲಿ ಒಬ್ಬರು ಗಮನಿಸಿರಬೇಕು. ಅವರು ಅತಿ ಸಹಜವಾಗಿ ಐದಾರು ಕ್ಯಾಂಡಿಗಳನ್ನು ಕೊಂಡು, ತಾವೂ ಒಂದನ್ನು ಬಾಯಿಗಿಟ್ಟು, ಉಳಿದವನ್ನು ನಮ್ಮ ಕೈಗಿಟ್ಟಿದ್ದರು. ಆ ಐದುಪೈಸೆಗೆ ಆ ದಿನ, ಆ ಕ್ಷಣ ಎಂತಹ ಮಾಂತ್ರಿಕ ಶಕ್ತಿ ಇತ್ತು, ಮಕ್ಕಳ ಮನಸ್ಸನ್ನು ಅರಳಿಸುವ ಅದ್ಭುತ ಶಕ್ತಿ!

ನನಗೆ ಐದು ಪೈಸೆಯ ಐಸ್‌ಕ್ಯಾಂಡಿ ಕೊಟ್ಟ ಮಾಸ್ತರನ್ನು ಹುಡುಕಿ ಹೋಗಿ ನಾನಿಂದು ಐದಲ್ಲ, ಐವತ್ತು ಸಾವಿರ ಕೊಟ್ಟರೂ ಆ ಕ್ಷಣದ ಋಣ ತೀರುವುದಿಲ್ಲ. ಆದರೆ ನಮ್ಮ ಬದುಕಿನ ಯಾತ್ರೆಯಲ್ಲಿ ಅನಾಯಾಸವಾಗಿ ನಮಗೆ ಎದುರಾಗುವ, ನಮಗಿಂತ ಕಡಿಮೆ ಅದೃಷ್ಟವಂತರ ಸಹಯಾತ್ರಿಗಳ ಪುಟ್ಟ ಪುಟ್ಟ ಆಸೆಗಳನ್ನು ನಾವು ಅವರ ಅಭಿಮಾನಕ್ಕೆ ಭಂಗವಾಗದ ಹಾಗೆ ಈಡೇರಿಸಬಲ್ಲೆವೆ ಎಂಬ ಪ್ರಶ್ನೆ ಸದಾ ನನ್ನೊಳಗೆ ಮೂಡುತ್ತದೆ.

**೫. ವೃತ್ತಿಯಲ್ಲಿ ತಾವು ವಿಜ್ಞಾನಿಗಳು, ಪ್ರವೃತ್ತಿಯಲ್ಲಿ ಸಾಹಿತಿಯಾಗಿ ಬೆಳೆಯಲು ಕಾರಣವಾದ ಅಂಶಗಳಾವುವು?**

ವಿಜ್ಞಾನಿ ಮತ್ತು ಸಾಹಿತಿ ಎರಡೂ ಪಾತ್ರಗಳೂ ನನ್ನ ವ್ಯಕ್ತಿತ್ವದ ಅವಿಭಾಜ್ಯ ಅಂಗಗಳು. ನನ್ನ ವೃತ್ತಿ ನನಗೆ ತಂತ್ರಜ್ಞಾನದ ಮುಂಚೂಣಿಯಲ್ಲಿ ದುಡಿಯುವ ಅಪೂರ್ವವಾದ ಅನುಭವಗಳನ್ನು ನೀಡಿದೆ.

ನಾನು ಇಂಜಿನಿಯರ್ ಆಗುವ ಮೊದಲೇ ಲೇಖಕಿಯಾಗಿದ್ದೆ. ನಿವೃತ್ತಳಾದ ಮೇಲೆ ವೈಮಾನಿಕ ರಂಗದ ವಿಜ್ಞಾನಿಯ ಪಾತ್ರ ಕೊನೆಗೊಳ್ಳುತ್ತದೆ. ಆದರೆ ಬದುಕಿನ ಕೊನೆಯ ದಿನದವರೆಗೂ ನಾನು ಲೇಖಕಿಯಾಗಿ ಮುಂದುವರೆಯುವುದು ಖಂಡಿತಾ. ಬರಹ ನನಗೆ ಅತ್ಯಂತ ಪ್ರಿಯವಾದ ವಿಷಯವಾಗಿದೆ.

ಕಿಶೋರ ವಯಸ್ಸಿನ ನೂರೆಂಟು ಹವ್ಯಾಸಗಳಲ್ಲಿ ನಾನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುವುದು ಬರಹವನ್ನು ಮಾತ್ರ. ಬದುಕಿನ ಈ ಘಟ್ಟದಲ್ಲಿ ಹಿಂತಿರುಗಿ ನೋಡಿದಾಗ, ಏನೆಲ್ಲ ಆಸಕ್ತಿ ಮತ್ತು ಹವ್ಯಾಸಗಳಲ್ಲಿ ತೊಡಗಿದ್ದೆ ಎಂದು ಅಚ್ಚರಿಯಾಗುತ್ತದೆ. ಚಿತ್ರಕಲೆ,

ಛಾಯಾಚಿತ್ರ, ನಾಟಕ ಎಲ್ಲದರಲ್ಲೂ ಸಕ್ರಿಯವಾಗಿ ತೊಡಗಿಕೊಂಡ ದಿನಗಳಿದ್ದವು. ಆದರೆ ಇಂಜಿನಿಯರಿಂಗ್ ರಂಗವನ್ನು ಆಯ್ದು ಕಾರ್ಖಾನೆಯ ವೃತ್ತಿಯಲ್ಲಿ ಮುಂದುವರೆದಂತೆ, ಜವಾಬ್ದಾರಿಗಳು ಹೆಚ್ಚಿದಂತೆ, ನನ್ನಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗಿರುವುದು ಬರಹವನ್ನು ಮಾತ್ರ. ಕಾರಣ, ರಾತ್ರಿ ರಾತ್ರಿಗಳ ನಿದ್ರೆ ಕೆಟ್ಟಾದರೂ ನಾನು ಬರೆಯಬಲ್ಲೆ. ಬರಹವಿಲ್ಲದ ಬದುಕನ್ನು ಊಹಿಸುವುದೂ ಅಸಾಧ್ಯವೆನಿಸುತ್ತದೆ.

**೬. ಕಥೆಗಳಲ್ಲಿ ದುಡಿವ ಮಹಿಳೆಯ ಮಾನಸಿಕ ತುಮುಲಗಳನ್ನು ಆಶೋತ್ತರಗಳು, ಬರವಣಿಗೆ ಮೂಲಕ ವ್ಯಕ್ತಪಡಿಸುವಾಗಿನ ನಿಮ್ಮ ಅನಿಸಿಕೆಗಳು. ಎಲ್ಲ ಸಾಧಿತವಾಗಿದೆಯೇ?**

ಕತೆ ಬರೆಯುವ ಅನಿವಾರ್ಯತೆ ನನಗಿದೆ. ನನ್ನೊಳಗೇ ಕಾಡಿದ ವಿಷಯಗಳ ಸ್ಪಷ್ಟತೆಗೆ, ಒಳಗೊಳಗೆ ಗಸ್ತು ಹೊಡೆದು ಕದಡಿದ ವಿಚಾರಗಳ ಉಚ್ಚಾಟನೆಗೆ ನಾನು ಕತೆ ಬರೆಯಲು ತೊಡಗುತ್ತೇನೆ. ಬರೆದಂತೆ ನನ್ನನ್ನು ನಾನು ಕಂಡುಕೊಳ್ಳುವುದು ಸಾಧ್ಯವಾಗಿದೆ. ಬರೆದಂತೆ ನನ್ನ ವಿಚಾರಗಳು ನನಗೇ ಸ್ಪಷ್ಟವಾಗಿವೆ. ಬರಹ ಸ್ವ-ಅನ್ವೇಷಣೆಯ ಸಾಧನವಾಗಿದೆ.

ಕತೆಗಳಾಚೆ ನಾನು ಹೆಚ್ಚು ಬರೆದಿರುವುದು ಜೀವನ ಚಿತ್ರಗಳನ್ನು ಮಹಿಳಾ ಪರಂಪರೆಯನ್ನು ಪುನರ್ ಪರಿಚಯಿಸುವ ಸಣ್ಣ ಪ್ರಯತ್ನ ನನ್ನ ಅನೇಕ ಬರಹಗಳದ್ದಾಗಿದೆ.

ನಾನು ಶಾಲೆ ಓದಿದ ಕಾಲದಲ್ಲಿ ನನ್ನೆದುರು ಸ್ಫೂರ್ತಿ ನೀಡುವಂತಹ ಮಹಿಳಾ ಮಾದರಿಗಳಿರಲಿಲ್ಲ. ಶಾಲೆಯಲ್ಲಿ ನಾನು ಓದಿದ ಯಾವ ಪುಸ್ತಕದಲ್ಲೂ ಮಹಿಳಾ ಸಾಧಕಿಯರ ಉಲ್ಲೇಖವಿರಲಿಲ್ಲ. ಮೂವತ್ತು ವರ್ಷಗಳಿಗೂ ಹಿಂದೆ ಪಿ.ಯು.ಸಿ. ಮುಗಿಸಿ ಇಂಜಿನಿಯರಿಂಗ್ ರಂಗವನ್ನು ಪ್ರವೇಶಿಸುವಾಗ ನನ್ನಲ್ಲಿ ಸಾಕಷ್ಟು ಅಳುಕು ಆತಂಕವಿತ್ತು. ನನ್ನೆದುರು ಉದಾಹರಣೆಗಳಿರಲ್ಲಿಲ್ಲ. 'ಇವೆಲ್ಲ ಹೆಂಗಸರ ರಂಗವಲ್ಲ. ಕಾರ್ಪೆಂಟ್ರಿ ಇರುತ್ತೆ, ಮಷೀನ್ ಶಾಪ್ ಇರುತ್ತೆ' ಎಂದೆಲ್ಲ ಹೆದರಿಸಿದವರಿದ್ದರು. ಅಳುಕುತ್ತಾ ಒಳಹೊಕ್ಕ ನಾನು ಮತ್ತು ನನ್ನ ಗೆಳತಿ ವಿಶ್ವವಿದ್ಯಾನಿಲಯಕ್ಕೆ ರ್‍ಯಾಂಕ್ ಪಡೆದು ಹೊರಬಂದಾಗಲೆ, ಅಲ್ಲಿ ಹೆಣ್ಣು ಮಕ್ಕಳಿಗೆ ಅಸಾಧ್ಯವಾದದ್ದು ಏನೂ ಇಲ್ಲವೆಂದು ತಿಳಿದದ್ದು!

**೭. ಮಹಿಳೆಯರ ಪ್ರಪಂಚ, ಮಹಿಳಾ ಸಾಹಿತ್ಯ ನಿಮ್ಮಿಂದ ಇನ್ನಷ್ಟು ಗೌರವಕ್ಕೆ ಪಾತ್ರವಾಗಿದೆ. ಇದರಲ್ಲಿ ಎರಡು ಮಾತಿಲ್ಲ. ನಿಮ್ಮ ಸಾಹಿತ್ಯ ವಿಶಿಷ್ಟ ಸ್ತ್ರೀ ಸಂವೇದನೆಯ ಧ್ವನಿಯಾಗಿ ಮೂಡಿಬಂದಿದೆ. ನಿಮಗೆ ಇದಕ್ಕೆ ಸ್ಫೂರ್ತಿ ಯಾರು?**

ಸಾಹಿತ್ಯ ರಂಗವಾಗಲಿ, ವಿಜ್ಞಾನರಂಗವಾಗಲಿ, ವೈಮಾನಿಕ ರಂಗವಾಗಲಿ ಯಾವುದೇ ವಲಯದಲ್ಲೂ ಮಹಿಳೆಯರು ಚರಿತ್ರೆಯಲ್ಲಿ ಬಿಟ್ಟು ಹೋಗಿರುವುದು ಆಕಸ್ಮಿಕವಲ್ಲ ಎನಿಸಿತು. ಇತಿಹಾಸದಲ್ಲಿ ಕಳೆದುಹೋದ ಮಹಿಳಾ ವಿಜ್ಞಾನಿಗಳನ್ನು, ವೈಮಾನಿಕರನ್ನು ಹೊರತೆಗೆದು

ಸ್ತ್ರೀಪರಂಪರೆಯನ್ನು ಪರಿಚಯಿಸುವ ಯತ್ನ ನನ್ನ ಗೀಳಾಯಿತು, ನನ್ನ ಅಧ್ಯಯನ ಮತ್ತು ಬರಹದ ವಸ್ತುವಾಯಿತು.

ನನ್ನ ಬರಹಗಳಿಗಾಗಿ ನಾನು ಬಹಳಷ್ಟು ಅಲೆದಾಡಿದ್ದೇನೆ. ಭಾರತದ ಮಹಿಳೆಯರಿಗೆ ವೈದ್ಯರಂಗದ ಬಾಗಿಲು ತೆರೆಸಿದ ಮೇರಿ ಶರ್ಲಿಯನ್ನು ಹುಡುಕಿ ಮೂರು ಬಾರಿ ಮದ್ರಾಸಿಗೆ ಹೋಗಿದ್ದೆ. ಜಲಿಯನ್ ವಾಲಬಾಗ್ ಹತ್ಯಾಕಾಂಡದಲ್ಲಿ ಹುತಾತ್ಮನಾದ ಪತಿಯ ಹೆಣಕ್ಕೆ ಹೆಗಲು ಕೊಟು ಹೊತ್ತು ತಂದ ಸ್ವಾಭಿಮಾನಿ ಮಹಿಳೆ ಅತ್ತರ್ ಕೌರ್ ಹುಡುಕಿ ಅಮೃತಸರ ತಲುಪಿದ್ದೆ. ಕೌಟುಂಬಿಕ ಕ್ರೌರ್ಯದಿಂದ ಜಿಗಿದು ಹೊರಬಂದು ನಲವತ್ತರ ವಯಸ್ಸಿನಲ್ಲಿ ವಿದ್ಯಾಭ್ಯಾಸ ಮಾಡಿ, ಲಾ ಓದಿ, ಸುಪ್ರಸಿದ್ಧ ನ್ಯಾಯವಾದಿಯಾದ ಫ್ಲೇವಿಯಾರ ಜೀವನ ಚರಿತ್ರೆಯನ್ನು ಪರಿಚಯಿಸಲು ಮುಂಬಯಿಗೆ ಮೂರ್ನಾಲ್ಕು ಬಾರಿ ಅಲೆದಾಡಿದೆ. ಈ ಅಲೆದಾಟಗಳೆಲ್ಲ ನನಗೆ ಬಲುಪ್ರಿಯವಾಗಿದೆ. ಮಹಿಳಾ ವಿಜ್ಞಾನಿಗಳ, ಮಹಿಳಾ ವೈಮಾನಿಕೆಯರ ಶತಶತಮಾನಗಳ ಚರಿತ್ರೆಯನ್ನು ಸಂಗ್ರಹಿಸುವ ಬಯಕೆ ನನ್ನನ್ನು ದೇಶ ವಿದೇಶಗಳ ಮೂಲೆ, ಮೂಲೆಗೆ ಕೊಂಡೊಯ್ಯಿತು. ಮಹಿಳಾ ಸಾಧಕಿಯರ ಪರಂಪರೆಯನ್ನು ಹುಡುಕಿ ಹೊರಟ ನನ್ನ ವೈಯಕ್ತಿಕ ಪ್ರವಾಸಗಳ ಅನುಭವ ಬರವಣಿಗೆಯ ರೂಪದಲ್ಲಿ ಹೊರಬಂದಿತು. ಇನ್ನು ಸ್ತ್ರೀ ಸಬಲೀಕರಣ ಹೆಣ್ಣು ಮಕ್ಕಳಿಗೆ ಮೂಲ ವಿದ್ಯಾಭ್ಯಾಸ ಬೇಕು, ಆದರೆ ಕೇವಲ ಡಿಗ್ರಿಗಳಿಂದಲೇ ಹೆಣ್ಣು ಮಕ್ಕಳು ಸಶಕ್ತರೂ, ಸಬಲರು, ಸ್ವಾವಲಂಬಿಗಳು ಆಗುವುದಿಲ್ಲ.

ನಾವು ಸಂಭ್ರಮಿಸಬೇಕಾದದ್ದು ಸೌಂದರ್ಯ ರಾಣಿಯರು ಕಿರೀಟ ತೊಟ್ಟಾಗಲಲ್ಲ! ಕಿರಣ್‌ಬೇಡಿ, ಅರುಣಾ ರಾಯ್ ಮ್ಯಾಗ್ಸೆಸೇ ಪಡೆದಾಗ, ನಿವೇದಿತಾ ಬಾಸಿನ್ ವಿಶ್ವದ ಅತಿ ಚಿಕ್ಕ ವಯಸ್ಸಿನ ಕ್ಯಾಪ್ಟನ್ ಆಗಿ ಜೆಟ್ ವಿಮಾನವನ್ನು ಹಾರಿಸಿದಾಗ, ಪತ್ರಕರ್ತೆ ಅನಿತಾ ಪ್ರತಾಪ್ ತಾಲಿಬಾನ್‌ರ ಯುದ್ಧದ ನಡುವೆ ನುಗ್ಗಿ, ಕಾಬೂಲ್ ತಾಲಿಬಾನರ ಕೈವಶವಾದ ಸಮಯದಲ್ಲಿ ಬೆಂಕಿ, ಬಾಂಬಿನ ನಡುವೆ ಆಫ್ಘಾನಿಸ್ಥಾನದಲ್ಲಿ ನಿಂತು ವರದಿ ಮಾಡಿದಾಗ, ಕಾರ್ಗಿಲ್ ಯುದ್ಧದಲ್ಲಿ, ಯುದ್ಧರಂಗಕ್ಕೆ ಪ್ರವೇಶಿಸಿದ ಮೊಟ್ಟ ಮೊದಲ ಮಹಿಳಾ ವಿಮಾನ ಚಾಲಕಿಯಾಗಿ ಫೈಟರ್ ಪೈಲೆಟ್ ಗುಂಜನ್ ಸಕ್ಸೇನಾ ಎಳೆಯ ಹೃದಯಗಳಲ್ಲಿ ದೇಶಕ್ಕಾಗಿ ದುಡಿವ ಕಿಚ್ಚನ್ನು ಹಚ್ಚಿದಾಗ, ಬಚೇಂದ್ರಿ ಪಾಲ್ ಹಿಮಾಲಯ ಏರಿದಾಗ, ಸಾಲುಮರದ ತಿಮ್ಮಕ್ಕ ಸದ್ದಿಲ್ಲದೆ ಸಾಲು ಸಾಲು ಮರಗಳನ್ನು ನೆಟ್ಟು, ಮಕ್ಕಳಂತೆ ಪೋಷಿಸಿ ಬೆಳೆಸಿದಾಗ, ಕಾಗುಣಿತ ಕೂಡಾ ಪೂರಾ ಕಲಿಯಲು ಅವಕಾಶವಿಲ್ಲದಿದ್ದ ಬೆಳಗೆರೆ ಜಾನಕಮ್ಮನಂತಹ ನಮ್ಮ ಹೆಣ್ಣುಮಕ್ಕಳು ಕವನ ಕಟ್ಟಿದಾಗ..... ಆಗ ನಾವು ನಿಜಕ್ಕೂ ಸಂಭ್ರಮಿಸಬೇಕು, ಹೆಮ್ಮೆಪಡಬೇಕು.

**೮. ಪ್ರವಾಸದಲ್ಲಿ ಹೊಸತನವನ್ನು ಹುಡುಕುವುದು, ಮಾನವೀಯ ನೆಲೆಯಲ್ಲಿ ಬದುಕನ್ನು ಪರಿಭಾವಿಸುವುದು – ಇವೆಲ್ಲ ಅನನ್ಯವಾಗಿ ಕೃತಿಯಲ್ಲಿ ಮೂಡಿಬಂದಿದೆ. ಇದರ ಸ್ಫೂರ್ತಿ ಏನು?**

ವರ್ಷ ವರ್ಷಗಳು ಕೂಡಿಟ್ಟ ಕುಡಿಕೆ ಹಣದಲ್ಲಿ ಕನಸಿನ ಪಯಣದ ತಯಾರಿ ಮಾಡಿದ್ದೆ. ಬ್ರಾಂಟೆಯ 'ಮೂರ್'ಗಳಲ್ಲಿ ಅಲೆದು ಬಂದೆ, ಪ್ರಥಮಸ್ತ್ರೀವಾದಿ ಲೇಖಕಿ ಆಫ್ರಾಬೆನ್‌ಳ ಹಳ್ಳಿಯನ್ನು ಹುಡುಕಿ ಹೋದೆ, ಆನ್ ಫ್ರಾಂಕ್‌ಳ ಗುಪ್ತ ಗೃಹವನ್ನು ಕಂಡುಬಂದೆ. ರೈಟ್ಸ್ ಸಹೋದರರು ಮೊಟ್ಟಮೊದಲು ವಿಮಾನ ಹಾರಿಸಿದ ಕಿಟ್ಟಿಹಾಕ್‌ನ ಕಿಲ್ ಡೆವಿಲ್ ಗುಡ್ಡದ ಮೇಲೆ ನಿಂತೆ. ಕೀಟ್ಸ್‌ನ ಕಾವ್ಯರಾತ್ರಿಗಳು ಕಳೆದ ಹ್ಯಾಂಪ್ ಸ್ಟೆಡ್ ಹೀತ್, ವರ್ಡ್ಸ್‌ವರ್ತ್‌ನ ಲೇಕ್ ಡಿಸ್ಟ್ರಿಕ್ಟ್, ಫ್ಲಾರೆನ್ಸ್ ನೈಟಿಂಗೇಲ್‌ಳ ಆಸ್ಪತ್ರೆ, ಐನ್‌ಸ್ಟೈನ್ ಅವರ ಮನೆ, ವ್ಯಾನ್ ಗೋನ ಬಿಸಿಲು ಹಳದಿ ಸೂರ್ಯಕಾಂತಿಗಳು –ಇವೆಲ್ಲವೂ ನನ್ನ ಪಯಣದ ಮರೆಯಲಾಗದ ಭಾಗಗಳಾದವು.

ತನ್ನ ಬದುಕಿನ ನಲವತ್ತು ವರ್ಷಗಳನ್ನು ಪೆರುವಿನ ಅದ್ಭುತ ನಾಸ್ಕಾ ಚಿತ್ರಗಳ ಅಧ್ಯಯನದಲ್ಲಿ ಕಳೆದ ವಿಜ್ಞಾನಿ ಮರಿಯಾ ರೇಕಿಯನ್ನು ಹುಡುಕಿ, ದಕ್ಷಿಣ ಅಮೆರಿಕದ ಪೆರುವಿನ ಆ ಸಣ್ಣಹಳ್ಳಿಯನ್ನು ತಲುಪಿದ್ದೆ. ಆಂಡೀಸ್ ಪರ್ವತ ಶಿಖರಗಳಲ್ಲಿ ಅಲೆದು, ಪೆರುವಿನ ಪವಿತ್ರ ಕಣಿವೆಗಳಲ್ಲಿ ಇಳಿದು, ಅಮೆಜಾನ್ ಕಾಡುಗಳಲ್ಲಿ ರಾತ್ರಿ ಕಳೆದು, ಅಮೆಜಾನ್ ನದಿಯ ಮೇಲೆ, ಪೆರುವಿನಿಂದ ಬ್ರೆಜಿಲ್‌ಗೆ, ೨೮ ಗಂಟೆಗಳ ಕಾಲ ತೇಲಿ ಹೋದ ಅದ್ಭುತ ಅನುಭವ ನನ್ನದಾಯಿತು. ಈ ಎಲ್ಲ ಅನುಭವಗಳು ನನ್ನ ಬರಹದ ವಸ್ತುವಾದವು. ಸಾಧಕ ಮಹಿಳೆಯರನ್ನು ಹುಡುಕಿ ಹೋದ ನನ್ನ ಪ್ರವಾಸಗಳು ಅದ್ಭುತದ ಅನುಭವಗಳನ್ನು ನೀಡಿದವು.

**೯. ನಿಮ್ಮ ಜೀವನ ದರ್ಶನವೇನು? ಅದನ್ನು ಯಾವ ರೀತಿ ಅಭಿವ್ಯಕ್ತಿಸಿದ್ದಿರಿ?**

ಹೊರಗಿನ ಜಗತ್ತನ್ನು ಸುತ್ತಿ ಬಂದಿದ್ದೆ. ಕತೆಯ ಬೆನ್ನು ಹತ್ತಿ ದೇಶವಿದೇಶಗಳನ್ನು ಅಲೆದು ಬಂದಿದ್ದೆ. ೬೦ ಲಕ್ಷ ಜನ ಯಹೂದಿಗಳನ್ನು ಕೊಂದು ಮುಗಿಸಿದ ಕರಾಳ ಚರಿತ್ರೆಯ ನೆಲವನ್ನು ಕಂಡುಬಂದಿದ್ದೆ. ದಮನಿಸಿದ ನೋವುಂಡ ಅದೇ ಜನಾಂಗ ಮತ್ತೊಂದು ಜನಾಂಗದ ಮೇಲೆ ಅಂತಹುದೇ ಅನ್ಯಾಯ ಮತ್ತು ಅತ್ಯಾಚಾರವನ್ನು ಎಸಗುವುದನ್ನು ಕಂಡಿದ್ದೆ. ಏರುಗೋಡೆಗಳನ್ನು ಎತ್ತಿನಿಲ್ಲಿಸಿ ವಿದ್ಯುತ್ ಬೇಲಿ ಹರಿಸಿ ನಿಂತ ಇಸ್ರೇಲ್–ಪ್ಯಾಲೆಸ್ಟೈನ್ ನೆಲದಲ್ಲಿ ವರ್ತಮಾನದ ಸತ್ಯಗಳನ್ನು ಕಂಡುಬಂದಿದ್ದೆ. ಇವೆಲ್ಲ ದುರಂತಗಳನ್ನು ಗುಡ್ಡೆ ಹಾಕಿಕೊಂಡು ಕಾದಂಬರಿಯ ಉತ್ತರಾರ್ಧ ಸಿದ್ಧವಾಗಿತ್ತು. ಆದರೆ ಕಾದಂಬರಿಯ ಪೂರ್ವಾರ್ಧ ಅಪ್ಪಟ ಈ ನೆಲದ ಅಮ್ಮನ ಕತೆಗಳಿಂದ ತುಂಬಿ ಹೋಗಿತ್ತು. ನನ್ನಮ್ಮನ ಜೊತೆಗೆ ಅಂತರಂಗಕ್ಕೆ ಇಳಿದ ಪಯಣ ಸಾಧ್ಯವಾಗಿತ್ತು.

ಪರದೇಶದ ಪರಧರ್ಮದ ಆ ಪುಟ್ಟ ಯಹೂದಿ ಹುಡುಗಿಗೆ ತಾಯ್ತನದ ಸೆರಗಿನಲ್ಲಿ, ತಂಪಿನ ನೆರಳಲ್ಲಿ ಆಸರೆ ಕೊಟ್ಟು, ಅದೆಷ್ಟೋ ಧರ್ಮಗಳಿಗೆ ಆಶ್ರಯ ಕೊಟ್ಟ ಇಡೀ ಭಾರತವನ್ನು ಸಂಕೇತಿಸಬಲ್ಲ ಒಂದು ಮಾತೃ ಪಾತ್ರವನ್ನು ಕಲ್ಪಿಸಿಕೊಳ್ಳುವಾಗ ನನ್ನ ಕಣ್ಣೆದುರು ಬಂದದ್ದು ಈ ನೆಲದ ಹೆಣ್ಣು ಮಕ್ಕಳ ಸೂಕ್ಷ್ಮ ಸಂವೇದನೆಗಳ ಸಾಕಾರವಾದ ನನ್ನಮ್ಮ. ವಿದ್ಯೆಯಿಲ್ಲದಿದ್ದರೂ ಶ್ರಮಜೀವನದ ಕಠಿಣ ಬದುಕಿನಲ್ಲಿ ಅವರು ಕಂಡುಕೊಂಡ ಬದುಕಿನ ಮಹತ್ತರದ ಸತ್ಯಗಳಿದ್ದವು.

ಬಾಲ್ಯದ ಅದೆಷ್ಟೋ ನೆನಪುಗಳು ಉಕ್ಕಿ ಬಂದಿದ್ದವು. ಮನೆಯಲ್ಲಿ ಮಹಾಭಾರತದ ಕತೆ ಅದೆಷ್ಟೋ ಬಾರಿ ಕೇಳುತ್ತಾ ಇದ್ದೆವು. ಒಂದೆಡೆ ಧರ್ಮವನ್ನು ಸಂಕೇತಿಸಿದ ಪಾಂಡವರು. ಇನ್ನೊಂದೆಡೆ ದುರಹಂಕಾರದ ದುರ್ಯೋಧನ ಅಣ್ಣತಮ್ಮಂದಿರ ನಡುವೆ ಮಾರಣ ಯುದ್ಧ. ಕತೆ ಮುಗಿದಾಗ "ಅಮ್ಮ ಅಂತೂ ಕೊನೆಗೆ ಪಾಂಡವರು ಗೆದ್ದರಲ್ವ?" ಬಾಲ್ಯದ ಉತ್ಸಾಹದಿಂದ ಕೇಳುತ್ತಿದ್ದೆವು. ಅಮ್ಮ ಹೇಳ್ತಾ ಇದ್ದರು – "ಯುದ್ಧದಲ್ಲಿ ಯಾರಾದ್ರೂ ಗೆದ್ದೋರುಂಟಾ. ಪಾಂಡವ್ರು ಏನಾ ಗೆದ್ರು.. ವಿಧವೆರೂ, ಅನಾಥ್ ಮಕ್ಳೂ ತುಂಬ್ ಹೋದ ರಾಜ್ಯದಾಗ, ತಮ್ ನೆಂಟ್ರು ಇಷ್ಟ್ರು ಮಕ್ಳೂ ಎಲ್ಲ ಕಳಕೊಂಡು ಯಾವ ಸುಖ ಸುರಕೊಂಡ್ರು....?"

'ಯುದ್ಧದಲ್ಲಿ ಗೆದ್ದವರಿಲ್ಲ',

ಅದೆಷ್ಟೋ ವರ್ಷಗಳ ನಂತರ ವಾಷಿಂಗ್ಟನ್‌ನ 'ಹೊಲೊಕಾಸ್ಟ್ ಮ್ಯೂಸಿಯಂ'ನಲ್ಲಿ, ನೊಬೆಲ್ ಶಾಂತಿ ಪುರಸ್ಕಾರ ಪಡೆದ ಎಲೀ ವೀಸಲ್ ಅವರ ನೊಬೆಲ್ ಭಾಷಣ ಓದುತ್ತೇನೆ, ಅಲ್ಲಿ ಬರೆದಿತ್ತು – 'in war there are no victors, only victims'.

'ಎದೆ ಸೀಳಿದರೆ ಮೂರಕ್ಷರ ಕಾಣದ' ಅಮ್ಮನಂತಹ ಹೆಣ್ಣುಮಕ್ಕಳು ಕಂಡುಕೊಂಡ ಬದುಕಿನ ಸರಳ ಸತ್ಯಗಳು, ಸದಾ ಹಿಂಸೆ, ಯುದ್ಧ, ಆತಂಕವಾದ, ರಣಕೇಳಿಯಲ್ಲಿರುವ ಜಗತ್ತಿಗೆ ಯಾವುದೋ ಸಂದೇಶ ನೀಡುತ್ತಿವೆ ಎಂದು ನನಗೆ ಅನಿಸಿದ್ದು ಆಶ್ಚರ್ಯವಲ್ಲ. ನನ್ನಮ್ಮನ ಮೂಲಕ ನಾನು ಕೇಳಿದ ಈ ನೆಲದ ಜನಪದದ ಕತೆಗಳು ಅಂತರಂಗದ ಶೋಧಕ್ಕೆ, ಅವುಗಳೊಡನೆಯ ಮಾನವೀಯ ಹೊಳವುಗಳಿಗೆ ಕಾರಣವಾದವು.

**೧೦. ನಿಮ್ಮ ಕೃತಿಗಳಲ್ಲಿ ಎಲ್ಲೂ ಕಚ್ಚಾ ರೀತಿಯ ಪುರುಷ ವಿರೋಧಿತನವನ್ನು ಬಿಂಬಿಸುವುದಿಲ್ಲ. ಗಂಡು–ಹೆಣ್ಣಿನ ಸಮಾನತೆಯ ಬಗ್ಗೆ ನಿಮ್ಮದು ವಿಶೇಷ ಅನುಭವ ಮೂಲದ ಚಿಂತನೆ. ಇದರ ಬಗ್ಗೆ ಸ್ವಲ್ಪ ತಿಳಿಸಿಕೊಡಿ.**

ಪುರುಷ ವಿರೋಧಿತನಕ್ಕಿಂತ ನಾನಾ ಮಹಿಳೆಯರಿಗಿರುವ ಅವಕಾಶಗಳ ಬಗ್ಗೆ ಮಾತನಾಡುತ್ತೇನೆ. ಒಂದೂವರೆ ಶತಮಾನಗಳ ಹಿಂದೆ ಮಹಿಳೆಯರಿಗೆ ವೈದ್ಯರಂಗಕ್ಕೆ ಪ್ರವೇಶವಿರಲಿಲ್ಲ. ಏಳು ದಶಕಗಳ ಹಿಂದೆ ಹೆಣ್ಣುಮಕ್ಕಳಿಗೆ ಇಂಜಿನಿಯರಿಂಗ್ ರಂಗಕ್ಕೆ

ಪ್ರವೇಶವಿರಲಿಲ್ಲ. ೧೯೯೨ರವರೆಗೆ ಹೆಣ್ಣುಮಕ್ಕಳಿಗೆ ಸೇನೆಯ ಬಾಗಿಲು ಮುಚ್ಚಿತ್ತು. ಇಂದು ನಮ್ಮೆದುರು ಬಹಳಷ್ಟು ಬಾಗಿಲುಗಳು ತೆರೆದಿವೆ. ಸಾಧನೆಯ ರಂಗ ಕೈಬೀಸಿ ಕರೆದಿದೆ. ಈ ಎಲ್ಲ ಅವಕಾಶಗಳನ್ನು ನಮ್ಮ ಹೆಣ್ಣು ಮಕ್ಕಳು ಬಳಸಿಕೊಳ್ಳಲಿ ಎಂಬುದು ನನ್ನ ಆಸೆ. ಸಾಧನೆಯ ರಂಗಕ್ಕೆ, ಶಕ್ತ ಸ್ವಾವಲಂಬನೆಯ ಬದುಕಿಗೆ ಅವರನ್ನು ಆಹ್ವಾನಿಸಲು ಇಚ್ಛಿಸುತ್ತೇನೆ.

ನೀವು ನಿಮ್ಮ ಸುತ್ತಮುತ್ತ ಕಣ್ಣಾಯಿಸಿದರೆ, ಈ ಪತ್ರಿಕೆಗಳ ಗ್ಲಾಮರ್ ಪುಟಗಳಾಚೆ ನೋಡಿದರೆ, ಸಾಧಕ ಮಹಿಳೆಯರು ಹೆಜ್ಜೆಹೆಜ್ಜೆಗೂ ನಮ್ಮ ಸುತ್ತಮುತ್ತಲೇ ಕಾಣಿಸುತ್ತಾರೆ. ನಮ್ಮ ಬದುಕಿಗಿರುವ ಅನಂತ ಸಾಧ್ಯತೆಗಳನ್ನು ತೆರೆದು ತೋರಿಸುತ್ತಾರೆ.

ಹೆಣ್ಣುಮಕ್ಕಳ ವಿದ್ಯಾಭ್ಯಾಸ, ಔದ್ಯೋಗಿಕ ತರಪೇತು, ಆರ್ಥಿಕ ಸ್ವಾವಲಂಬನೆ, ಮಾನಸಿಕವಾಗಿ ಶಕ್ತರಾಗಿಸುವುದು, ಸ್ತ್ರೀ ಸಬಲೀಕರಣದ ಹಾದಿಯ ಪ್ರಮುಖ ಹೆಜ್ಜೆಗಳು. ಆ ದಿಕ್ಕಿನಲ್ಲಿ ನಮ್ಮ ದೃಢಹೆಜ್ಜೆಗಳಿರಲಿ ಎಂದು ಹಾರೈಸುತ್ತ ಭವಿಷ್ಯದ ಬಗ್ಗೆ ಹೊಸ ಭರವಸೆಯ ಬೆಳಕನ್ನು ಚೆಲ್ಲಲು ಇಚ್ಛಿಸುತ್ತೇನೆ. ಇದು ಹೆಣ್ಣುಮಕ್ಕಳ ಕಾಳಜಿಗೆ ಸಹಾಯಕವಾಗುತ್ತದೆ.

**೧೧. ಸಂಘ ಸಂಸ್ಥೆಗಳಲ್ಲಿ ಮತ್ತು ಮಹಿಳಾ ಜಾಗೃತಿಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದೀರಾ?**

೧೯೭೫ ಮಹಿಳಾ ವರ್ಷ ಎಂದು ಘೋಷಿಸಿ ಆಚರಿಸಿದಾಗ, ನಾನಿನ್ನೂ ಶಾಲೆಯಲ್ಲಿದ್ದೆ. ಆದರೆ ೧೯೮೮ರಲ್ಲಿ ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿದ್ದ ಹೊತ್ತು. ಒಂದೇ ಒಂದು ಕಥಾಸಂಕಲನ ಹೊರತಂದಿದ್ದೆ. ೮೦ರ ದಶಕದ ಈ ಸಮಯದಲ್ಲೂ ನಾವು ಕಂಡದ್ದು, ಕಾಣುತ್ತಿದ್ದದ್ದು ಪ್ರತಿ ಸಾಹಿತ್ಯಿಕ ವೇದಿಕೆಯಲ್ಲಿ ಬರೀ ಪುರುಷರೇ ಕುಳಿತಿರುತ್ತಿದ್ದರು. ಪುರುಷ ಕೃತಿಗಳನ್ನು ಚರ್ಚಿಸಿ, ವಿಮರ್ಶಿಸಿ, ಕಾರ್ಯಕ್ರಮ ಮುಗಿಯುತ್ತಿತ್ತು. ನಾವು ಅನೇಕ ಬಾರಿ 'ಅದೇಕೆ ಸಾರ್ ನಿಮಗೆ ಒಬ್ಬರೇ ಒಬ್ಬ ಮಹಿಳೆಯ ಕೃತಿಯೂ ಗೋಚರಿಸಲಿಲ್ಲವೆ?' ಎಂದು ಕೇಳಿದರೆ, 'ಯಾರ್ರೀ ಬರೆದಿದ್ದಾರೆ, ಎಲ್ರೀ ಇದ್ದಾರೆ' ಎಂದು ನಮಗೆ ಪ್ರಶ್ನೆ ಹಾಕುತ್ತಿದ್ದರು.

ಹೌದು ಯಾರಿದ್ದರು? ಇತಿಹಾಸದ ಮರೆತು ಹೋದ ಪುಟಗಳಿಂದ ಹೊರ ತೆಗೆದು ಕನ್ನಡದ ಮಹಿಳಾ ಪರಂಪರೆಯನ್ನು ಪುನರ್‌ಸೃಷ್ಟಿಸುವುದು ಲೇಖಕಿಯರಾಗಿ ನಮ್ಮೆದುರಿದ್ದ ಮೊದಲ ಸವಾಲು. ಲೇಖಕಿಯರ ಸಂಘದಿಂದ ಕಳೆದುಹೋದ ಇತಿಹಾಸದ ಕೊಂಡಿಗಳನ್ನು ಕೂಡಿಸಲು ಹೊರಟೆವು. ಅದರ ಮೊದಲ ಪ್ರಯತ್ನವಾಗಿ ಎರಡನೇ ತರಗತಿಗೆ ಶಾಲೆ ಬಿಡಿಸಿದ, ಸರಿಯಾಗಿ ಕಾಗುಣಿತ ಕೂಡಾ ಕಲಿಯುವ ಅವಕಾಶವಿಲ್ಲದೆ ಹೋದ ಪರಿಸರದಲ್ಲಿ, ಸ್ವಾತಂತ್ರ್ಯ ಪೂರ್ವದ ವರ್ಷಗಳಲ್ಲಿ ಕವಿತೆ ಕಟ್ಟಿದ ಬೆಳಗೆರೆ ಜಾನಕಮ್ಮನ ಕವನಗಳ ಬೆನ್ನತ್ತಿ ಇದೇ ಚಿತ್ರದುರ್ಗಕ್ಕೆ ಬಂದಿಳಿದಿದ್ದೆ. 'ಗಿಡವೆಂದು ಬಗೆದೆಯೋ ಹೆಣ್ಣು ಜನ್ಮದ ಒಡಲ,

ಫಲಗಳನ್ನು ಸೃಜಿಸುವುದಕೆ?' ಎಂದು ಬ್ರಹ್ಮನನ್ನು ತರಾಟೆಗೆ ತೆಗೆದುಕೊಂಡ ಜಾನಕಮ್ಮನನ್ನು ಹುಡುಕಿ ಬೆಳಗೆರೆಗೆ ಹೊರಟಿದ್ದೆ. ಆಯ್ಕೆ ಇಲ್ಲದ ಅನಿವಾರ್ಯದ ಬಸಿರಲ್ಲಿ ಹೆತ್ತು ಸತ್ತ ಜಾನಕಮ್ಮನ ಕತೆ ಬಹಳಷ್ಟು ಕನ್ನಡದ ಲೇಖಕಿಯರದು. ಜಾನಕಮ್ಮನ ಬದುಕು–ಬರಹ ಹೊರಬಿದ್ದ ಹಿಂದೆಯೇ ಕಲ್ಯಾಣಮ್ಮ, ಶ್ಯಾಮಲಾದೇವಿಯನ್ನು ಕುರಿತು ಲೇಖಕಿಯರ ಸಂಘದಿಂದ ಕೃತಿಗಳನ್ನು ಹೊರತಂದೆವು.

**೧೨. ನಿಮ್ಮ ಬದುಕಿನ ಸಾರ್ಥಕ ಸಂದರ್ಭಗಳಾವುವು?**

ನಾವು ಬದುಕಿನಲ್ಲಿ ಆಯ್ದುಕೊಳ್ಳುವ ಮಾದರಿಗಳು ನಮ್ಮ ಬದುಕಿನ ಮೇಲೆ ಎಷ್ಟೊಂದು ಪ್ರಭಾವ ಬೀರಬಲ್ಲದು ಎಂದು ಯೋಚಿಸುವಾಗ, ಅಚ್ಚರಿಯಾಗುತ್ತದೆ. ನಾನು ಹತ್ತನೇ ತರಗತಿಯಲ್ಲಿದ್ದ ಸಮಯ. ನಮ್ಮ ತಂದೆಯವರ ಸಾವಿರ ಸಾವಿರ ಪುಸ್ತಕಗಳ ಸಂಗ್ರಹದಲ್ಲಿ ನನಗೆ ಮೇರಿ ಕ್ಯೂರಿಯನ್ನು ಕುರಿತು ಒಂದು ಪುಟ್ಟ ಪುಸ್ತಕ ಸಿಕ್ಕಿತು. ಆಕೆಯ ಅಸಾಧಾರಣ ಬದುಕು ಆ ಎಳೆಯ ವಯಸ್ಸಿನಲ್ಲಿ ಎಲ್ಲಿಲ್ಲದ ಪ್ರಭಾವ ಬೀರಿತು. ನಾನು ವಿಜ್ಞಾನ–ತಂತ್ರಜ್ಞಾನ ರಂಗವನ್ನು ಆಯ್ದುಕೊಳ್ಳುವಲ್ಲಿ, ಹಿಂಜರಿಯದೆ ಇಂಜಿನಿಯರಿಂಗ್ ಪ್ರವೇಶಿಸುವಲ್ಲಿ, ಅತಿಸೂಕ್ಷ್ಮವಾಗಿ ಸುಪ್ತಪ್ರಜ್ಞೆಯಲ್ಲೆಲ್ಲೋ ಮೇರಿಕ್ಯೂರಿಯ ಬದುಕು ಪ್ರೇರೇಪಿಸಿತ್ತು.

**೧೩. ನಿಮ್ಮ ಬದುಕಿನ ಅತ್ಯಂತ ನೋವಿನ ಸಂದರ್ಭಗಳಾವುವು?**

ನನ್ನ ಹೈಸ್ಕೂಲಿನ ಸಮಯ, ನೆನಪಿದೆ. ಮೊಟ್ಟಮೊದಲಿಗೆ ಒಂದು ಸಣ್ಣ ಲೇಖನ ಪತ್ರಿಕೆಯೊಂದರಲ್ಲಿ ಪ್ರಕಟವಾದದ್ದು ತಿಳಿದಾಗ, ಕುಣಿಯುತ್ತಾ ಮನೆಗೆ ಬಂದು ತೋರಿಸಿದ್ದೆ. ಪತ್ರಿಕೆಯಲ್ಲಿ ಪ್ರಥಮಬಾರಿಗೆ ನನ್ನ ಹೆಸರು ಬಂದದ್ದು ಅದ್ಭುತದ ವಿಷಯವಾಗಿತ್ತು. ಅಪ್ಪ ಪೂರ್ತಿ ಓದುವ ಮೊದಲೇ 'ಎಷ್ಟು ಕೊಡ್ತಾರೆ?' ಎಂದ ಪ್ರತಿಕ್ರಿಯೆ ನನ್ನ ಉತ್ಸಾಹವನ್ನು ಜರ್‍ರನೆ ಜಾರಿಸಿತ್ತು. ನಾನು ಬಹುಶಃ ಅಪ್ಪನನ್ನು ಆ ಪ್ರಥಮ ಪ್ರತಿಕ್ರಿಯೆಗೆ ಕ್ಷಮಿಸಲೇ ಇಲ್ಲವೇನೋ. ಮತ್ತೆ ಬರೆದಾಗ – ಪ್ರಕಟಿಸಿದಾಗ, ಪುಸ್ತಕದ ಮೇಲೆ ಪುಸ್ತಕ ಹೊರ ತಂದಾಗ ಅಪ್ಪನಿಗೆ ವಿಶೇಷವಾಗಿ ತಿಳಿಸಲು ನಾನು ಹೋಗಲಿಲ್ಲ. ಆದರೆ ಅಪ್ಪ ಉಳಿಸಿ ಹೋದ ಕಂತೆ ಕಂತೆ ಪುಸ್ತಕಗಳು, ಪತ್ರಿಕೆಗಳ ನಡುವೆ 'ಸುಧಾ'ದಿಂದ ಕತ್ತರಿಸಿಟ್ಟುಕೊಂಡ ನನ್ನ 'ಮೇರಿಕ್ಯೂರಿ' ಧಾರಾವಾಹಿಯ ಭಾಗಗಳನ್ನು ಕಂಡಾಗ ಗಂಟಲುಬ್ಬಿ ಬಂದಿತ್ತು. ಎಂದೂ ಮಕ್ಕಳೊಡನೆ ಪೂರ್ಣ ಮುಕ್ತವಾಗಿ, ಸಲಿಗೆಯಾಗಿ, ಸ್ನೇಹವಾಗಿ ಮಾತನಾಡುವಂಥ ಬಿಚ್ಚು ಸಂಬಂಧವನ್ನು ಬೆಳೆಸಿಕೊಳ್ಳದ ಅಪ್ಪ ಹಾಗೂ ನನ್ನ ನಡುವೆಯೂ ಸಂಪರ್ಕದ ಸಮಸ್ಯೆ ಇತ್ತು. ಇಬ್ಬರು

ಲೇಖಕರ ನಡುವೆ ಅಭಿವ್ಯಕ್ತಿಯ ತೊಂದರೆಗಳಿದ್ದವು. ಮಾತಾಗದ ಮೌನಗಳಿದ್ದವು. ಬಹಳಷ್ಟು ಎದೆಯ ದನಿಗಳು ಅವ್ಯಕ್ತವಾಗಿಯೇ ಉಳಿದವು.

'ನಿನ್ನ ಕತೆಗಳನ್ನು ಓದಿ ಬಹಳ ಮೆಚ್ಚಿಕೊಂಡ್ರಮ್ಮ....' ಎಂದು ಅವರಿವರ ಅಭಿಪ್ರಾಯಗಳನ್ನು ಹೇಳುತ್ತಿದ್ದ ಅಪ್ಪನಿಗೆ ತಮ್ಮದೇ ಅಭಿಪ್ರಾಯವನ್ನು ಹೇಳಲು ಎಂಥದ್ದೋ ಮುಜುಗರ. ಎದೆಯ ತುಂಬಾ ಅಭಿಮಾನವಿದ್ದರೂ, ಮೆಚ್ಚುಗೆಯನ್ನು ಪ್ರೀತಿಯನ್ನು ಅಭಿವ್ಯಕ್ತಿಸುವುದು ಹೇಗೆಂದು ತಿಳಿಯದ ಅಪ್ಪ ಆ ಪೀಳಿಗೆಗೆ ಸೇರಿದವರು. 'ನಡುವೆ ಇಷ್ಟು ಅಂತರವಿಟ್ಟು' ಬೆಳೆಸುವ ಹಳೆಯ ತಲೆಮಾರಿಗೆ ಸೇರಿದವರು.

ಕನ್ನಡ ಎಂ.ಎ. ಮಾಡುತ್ತಿದ್ದ ತಮ್ಮ ವಿದ್ಯಾರ್ಥಿನಿ ಫಸ್ಟ್ ಕ್ಲಾಸ್ ಬಂದಾಗ ಹೊಗಳಿ ಮೆಚ್ಚಿದ್ದ ಅಪ್ಪ, ನಾನು ಇಂಜಿನಿಯರಿಂಗ್‌ನಲ್ಲಿ ವಿಶ್ವವಿದ್ಯಾನಿಲಯಕ್ಕೆ ರ್‍ಯಾಂಕ್ ಬಂದಾಗ, 'ಹೌದಾ'.... ಎಂದಷ್ಟೇ ಉದ್ಗರಿಸಿದ್ದರು. ಅಪ್ಪನನ್ನು ನಾನು ಆಗಲೂ ಕ್ಷಮಿಸಿರಲಿಲ್ಲ. ಮನೆ ಮಕ್ಕಳ ಪ್ರತಿಭೆಯನ್ನು ಗುರುತಿಸದೆ ಯಾರನ್ನೋ ಹೊಗಳಿದರೆಂದು ನನ್ನ ಮನಸ್ಸು ಮುನಿಸಿಕೊಂಡಿತ್ತು.

ಇದೇ ಅಪ್ಪ ಹೆಣ್ಣುಮಕ್ಕಳು ಎಂದು ಯಾವ ತಾರತಮ್ಯ ಮಾಡದೆ ನಾವು ಓದಿದಷ್ಟೂ ಓದಿಸಿದವರು. ಪುಸ್ತಕ, ಫೀಸು ಕೇಳಲಿಕ್ಕಿಲ್ಲ ತಂದು ಕೊಟ್ಟವರು. ಸಾಹಿತ್ಯದ ಅಭಿರುಚಿ ಬೆಳೆಸಿದವರು. ಹೆಣ್ಣುಮಕ್ಕಳ ಮೇಲೆ ಅಭಿಮಾನವಿದ್ದರೂ, ಗಂಡು ಮಕ್ಕಳ ಮೇಲೆ ಅಗಾಧ ಮೋಹ ಇಟ್ಟುಕೊಂಡವರು.

**೧೪. 'ಮೇರಿ ಕ್ಯೂರಿ' ಅವರ ಜೀವನ ತಮ್ಮ ಮೇಲೆ ಸಾಕಷ್ಟು ಪ್ರಭಾವ ಬೀರಿದೆ ಎಂದು ಕೃತಿಯಲ್ಲಿ ಉಲ್ಲೇಖಿಸಿದ್ದೀರಾ? ಇದರ ಬಗ್ಗೆ ಸ್ವಲ್ಪ ವಿವರ ಹೇಳಿ.**

ನಾನು ಹತ್ತನೇ ತರಗತಿಯಲ್ಲಿದ್ದ ಸಮಯ. ಮೇರಿಕ್ಯೂರಿಯನ್ನು ಕುರಿತು ಒಂದು ಪುಟ್ಟ ಪುಸ್ತಕ ಓದಿದ್ದೆ. ಆಕೆಯ ಅಸಾಧಾರಣ ಬದುಕು ಆ ಎಳೆಯ ವಯಸ್ಸಿನಲ್ಲಿ ಎಲ್ಲಿಲ್ಲದ ಪ್ರಭಾವ ಬೀರಿದ ನೆನಪಿದೆ. ನಾನು ವಿಜ್ಞಾನ–ತಂತ್ರಜ್ಞಾನದ ರಂಗವನ್ನು ಆಯ್ದುಕೊಳ್ಳುವ ಹಿನ್ನೆಲೆಯಲ್ಲಿ, ಅತಿಸೂಕ್ಷ್ಮವಾಗಿ ಸುಪ್ತ ಪ್ರಜ್ಞೆಯಲ್ಲೆಲ್ಲೋ ಮೇರಿಕ್ಯೂರಿಯ ಬದುಕು ಪ್ರೇರೇಪಿಸಿರಲೂಬಹುದು.

ಮತ್ತೆ ನಾನು ಮೇರಿಕ್ಯೂರಿಯ ಬಗ್ಗೆ ವಿವರವಾಗಿ ಓದಿದ್ದು ೧೯೯೦ರ ದಶಕದ ಆರಂಭದಲ್ಲಿ. ನನಗೆ ಆಗ ಮದುವೆಯಾಗಿತ್ತು. ಮಗಳು ಹುಟ್ಟಿದ್ದಳು. ಬೆಳಿಗ್ಗೆ ಆರಕ್ಕೆ ಕಾರ್ಖಾನೆಗೆ ಹೊರಡುವ ಕೆಲಸವಿತ್ತು. ಬರವಣಿಗೆಯ ಹುಮ್ಮಸ್ಸಿತ್ತು. ಮಹಿಳಾ ಸಂಘಟನೆಗಳಲ್ಲಿ, ಲೇಖಕಿಯರ ಸಂಘದಲ್ಲಿ ತೊಡಗಿಕೊಂಡಿದ್ದೆ. ಬದುಕಿನ ಈ ತಿರುವಿನಲ್ಲಿ

ನಾನು ಮತ್ತೊಮ್ಮೆ ಮೇರಿಕ್ಯೂರಿಯನ್ನು ಕುರಿತು ಓದಿದ್ದೆ. ಮೇರಿಗೆಂದೂ ವಿವಾಹ–ವಿಜ್ಞಾನಗಳ ನಡುವೆ ಆಯ್ಕೆಯ ಸಮಸ್ಯೆಯೇ ಬಂದಿರಲಿಲ್ಲ.

ಆದರೆ 'ಕೇವಲ ಹಣಕ್ಕಾಗಿ ಈ ಕೆಲಸ' ಎಂಬ ಭಾವ ಎಂದೂ ಆಕೆಗೆ ಇರಲಿಲ್ಲ. ಹೊಸ ಪಠ್ಯ ವಿಧಾನಗಳನ್ನು, ಹೊಸ ಬಗೆಯ ಪ್ರಯೋಗಗಳೊಡನೆ ತನ್ನ ಪ್ರವಚನಗಳನ್ನು ಕುತೂಹಲ ಕೆರಳಿಸುವಂತೆ ಯೋಜಿಸಿದ್ದಳು. ಆಕೆ ಕೈಗೊಂಡ ಯಾವ ಕೆಲಸವೂ ಅರೆಮನದ ಯತ್ನವಾಗಿರಲಿಲ್ಲ. ಮಕ್ಕಳ ಉಡುಪನ್ನು ಸ್ವತಃ ಹೊಲೆಯುತ್ತಿದ್ದಳು, ಸಿದ್ಧ ಉಡುಪುಗಳನ್ನು ಎಂದೂ ಕೊಂಡವಳಲ್ಲ. ಅವು ತೀರಾ ದುಬಾರಿ, ಕೇವಲ ಆಲಂಕಾರಿಕ ಅನಿಸಿತ್ತು. ಹಾಗಾಗಿ ತನ್ನದೇ ವಿನ್ಯಾಸಗಳನ್ನು ಪ್ರಯೋಗಿಸಿ ಮನೆಯಲ್ಲಿಯೇ ಹೊಲೆದು ಕೊಡುವಳು.

ಹಿಡಿದ ಯಾವ ಕೆಲಸವನ್ನೂ ಅರೆಬರೆ ಮಾಡದ ಈ ಹೆಣ್ಣು, ಶ್ರೇಷ್ಠ ವಿಜ್ಞಾನಿಯಂತೆಯೇ, ಮಹಾಮಾತೆಯೂ ಆದಳು. ಮೇರಿಗೆ ತನ್ನ ಮಕ್ಕಳ ಬದುಕನ್ನು ರೂಪಿಸಲು, ತನ್ನ ಹೆಣ್ಣುಮಕ್ಕಳನ್ನು ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ಸಬಲರಾಗಿಸುವ ಉದ್ದೇಶದಿಂದ ಸಮಯವನ್ನು ಮೀಸಲಿಟ್ಟಳು.

ಬದುಕಿನ ಈ ಹಂತದಲ್ಲಿ ನನಗೆ ಮೇರಿಕ್ಯೂರಿಯ ಜೀವನ ಮತ್ತೂ ಪ್ರಸ್ತುತವೆನಿಸಿತ್ತು. ಮತ್ತೊಮ್ಮೆ ಮೇರಿಕ್ಯೂರಿ ನನಗೆ ಸ್ಫೂರ್ತಿಯಾಗಿದ್ದಳು ಮತ್ತು ಉತ್ಸಾಹದ ಚಿಲುಮೆಯಾಗಿದ್ದಳು. ಇದರ ಸಾರ್ಥಕತೆಗಾಗಿಯೇ 'ಬೆಳಕಿನೊಂದು ಕಿರಣ ಮೇರಿಕ್ಯೂರಿ' ನಾನು ಹೃದಯದಿಂದ ಬರೆದ ಪುಸ್ತಕವಾಗಿ ಹೊರಹೊಮ್ಮಿದೆ.

*****

